# ಬಹುರತ್ನಾ ವಸುಂಧರಾ

**ಮಲ್ಲಿಕಾ**

ಲೋಭ ಮೂಲಾನಿ ಪಾಪಾನಿ
ರಸ ಮೂಲಾನಿ ವ್ಯಾಧಯಃ ।
ಇಷ್ಟ ಮೂಲಾನಿ ಶೋಕಾನಿ
ತ್ರೀಣಿತ್ಯಕ್ತ್ವಾ ಸುಖೀಭವ ॥

Bahuratna Vasundhara in Kannada by 'Mallika'
Published by Lakshmi Prakashana,
No. 359, 14th Cross, Sadashivanagara
Bangalore-560 080

ಪ್ರಥಮ ಮುದ್ರಣ : ೧೯೬೮
ದ್ವಿತೀಯ ಮುದ್ರಣ : ೧೯೭೧
ತೃತೀಯ ಮುದ್ರಣ : ೧೧೯೪



ಬೆಲೆ : ನಲವತ್ತೈದು ರೂಪಾಯಿ

ಮುದ್ರಕರು :
ನ್ಯೂ ಐಡಿಯೊಸ್
ನಂ. ೩೦, ೩ನೇ ಅಡ್ಡ ರಸ್ತೆ, ಬೈರಸಂದ್ರ ಮುಖ್ಯ ರಸ್ತೆ
ಜಯನಗರ ಒಂದನೆಯ ಪೂರ್ವ ವಿಭಾಗ
ಬೆಂಗಳೂರು–೫೬೦ ೦೧೧

# ಬಹುರತ್ನಾ ವಸುಂಧರಾ

**ಮಲ್ಲಿಕಾ**

ಲಕ್ಷ್ಮೀ ಪ್ರಕಾಶನ
ನಂ. 359, 14ನೇ ಅಡ್ಡ ರಸ್ತೆ, ಸದಾಶಿವನಗರ
ಬೆಂಗಳೂರು–560 080

# ನಿವೇದನೆ

ಈ ಕಥಾ ಸಂಕಲನ ಬಹಳ ಹಿಂದೆ, ನನ್ನ ಸಾಹಿತ್ಯಕ್ಷೇತ್ರದ ಪ್ರಥಮಾಂಕದಲ್ಲಿ ಒಡಮೂಡಿದ ಚಿಂಕೃತಿ. ಮುಗ್ಧ–ರೌದ್ರಗಳ ಸಂಮಿಳನವಾಗಿ ನೋವು–ನಲಿವುಗಳ ಆಗರವಾಗಿ ಬಾಳಿನ ನಾನಾ ಪ್ರಾಕಾರಗಳಲ್ಲಿ ಮೈಯೊಡೆದ ಜೀವನ ಚಿತ್ರಗಳು. ಭಾರತೀಯರ ಬಾಳಿಗೆ ಧರ್ಮ–ಕರ್ಮಗಳ ಸಂಯೋಜನೆಯು ಹಿಡಿಯುವ ಕೈಗನ್ನಡಿಯಲ್ಲಿ ಸರ್ವತ್ರ ಸ್ಪಷ್ಟವಾಗಿ ಕಂಡುಬರುವ ವಸ್ತುಸ್ಥಿತಿ ಅಥವಾ ಸತ್ಯಕೃತಿಗಳನ್ನು ಸ್ವತಃ ಕಂಡುಕಾಣುತ್ತಿದ್ದರೂ ತಂತಮ್ಮ ಜೀವನ ಗತಿಯನ್ನು ರಾಜಮಾರ್ಗ ಹಿಡಿಸುವ ಸ್ಫೂರ್ತಿಯಾಗಲೀ, ಶ್ರದ್ಧೆಯಾಗಲೀ ಮೂಡದಿರುವುದು ಮುಠ್ಠಾಳತನ. ಹಳೆಹಳೆಯ ಕಂದಾಚಾರ ಜಡಭರತತ್ವಕ್ಕೆ ಪೂರಕ. ಇಂದಿಗೂ ಈ ದಿವ್ಯ ನಾಗರೀಕತೆಯ ಕಾಲಮಾನದಲ್ಲೂ ವಿಜ್ಞಾನ ನಭೋಗಾಮಿಯಾಗಿರುವ ವಿರಾಟ್ ಪ್ರಗತಿಯಲ್ಲೂ ನಾವಿರುವ ಸ್ಥಿತಿಗತಿ ತಲೆ ತಗ್ಗಿಸುವಂತಾದು ಎಂದರೆ ಅತ್ಯುಕ್ತಿಯಲ್ಲ. ಭಾರತ ರಾಷ್ಟ್ರಕ್ಕೆ ಸ್ವಾತಂತ್ರ್ಯ ಲಭಿಸಿ ಅರ್ಧ ಶತಮಾನದ ತುತ್ತತುದಿಯನ್ನೇರಿದ್ದರೂ ಆ ಸ್ವಾತಂತ್ರ್ಯದ ಸವಿಯ ಹುರುಳನ್ನು ಅರಿತುಕೊಳ್ಳದ ಜಡಭರತತ್ವ ಇಂದಿಗೂ ಎಂದಿಗೂ ಪ್ರಸ್ತುತ ಎಂದು ಹೇಳಿಕೊಳ್ಳಲು ಬಾಯೇ ಬರುವುದಿಲ್ಲ.

ಈ ಜಡಸ್ಥಿತಿ ಒಂದಾದರೆ, ರಾವಣ ಭೀಷಣ ಸ್ಥಿತಿ ಮತ್ತೊಂದು. ಇಂದಿನ ಪರಿಸ್ಥಿತಿಯನ್ನು ಅವಲೋಕಿಸಿದರೆ ಭಾರತ ವರ್ಷದ ಪುರೋಗತಿಗೆ ಅಡ್ಡಗಾಲು ಜಡಭರತತ್ವ ಮತ್ತು ರಾವಣ ಭೀಷಣತ್ವ. ಈ ದುರ್ದೆಶೆಯಿಂದ ಮೇಲೆತ್ತಬೇಕಾದರೆ ಆ ಪರಮಾತ್ಮನೆ ಕೈಹಿಡಿದು ನಡೆಸಬೇಕಲ್ಲದೆ ಮತ್ತೇನಿಲ್ಲ. ತಮಸೋಮಾಜ್ಯೋತಿರ್ಗಮಯ ಎಂಬ ಪ್ರಾರ್ಥನೆಯಲ್ಲದೆ ಮತ್ತೇನಿಲ್ಲ.

ಮಾರ್ಗಶಿರ ಬಹುಳ ಸಪ್ತಮಿ
ಸೋಮವಾರ

ಮಲ್ಲಿಕಾ
೨೦–೧೨–೧೯೯೩

# ಪರಿವಿಡಿ


| | | |
|---|---|---|
| ಬಹುರತ್ನಾ ವಸುಂಧರಾ | ... | ೧ |
| ತಾರಾಭಗವತಿ | .... | ೭೨ |
| ಮೇಜರ್ ರುದ್ರ | .... | ೧೨೦ |
| ಮಾದೇನಹಳ್ಳಿಗೆ ರೈಲು | .... | ೧೭೬ |

# ಬಹುರತ್ನಾ ವಸುಂಧರಾ

....ಬಿತ್ತರದ ಬಾಂದಳದಲ್ಲಿ ತಣ್ಣನೆಯ ತಂಗಾಳಿ ಒಯ್ಯೊಯ್ಯನೆ ಬೀಡಿ ಉತ್ತರದೆಡೆಯ ತಂಪನ್ನು ತರುಬಿ ತರುತ್ತಿದೆ.

...ತಂಪೂಡಿದರೂ ಮನಸ್ಸಾಗರದ ಅಲೆಗಳು ಮೆಲ್ಲಮೆಲ್ಲನೆ ಅಲ್ಲೋಲ ಕಲ್ಲೋಲವಾಗತೊಡಗಿದ್ದುವು.

...ಮುಂದೇನು ?

ಶಂಕರನ ಸಹಕಾರವೂ ದೊರೆಯಲಿಲ್ಲ. ವಿರಾಜನಿಗೆ ಸಮಾಧಾನವೂ ಇಲ್ಲ....ಏನು ಮಾಡಲಿ ?

ಯೋಚನೆಯ ಮಂಪರದಲ್ಲೇ ಹೊತ್ತು ಉರುಳಿತು. ಕಾಗೆ ಗುಬ್ಬಿಗಳು ಎಚ್ಚೆತ್ತು ಗದ್ದಲನೆಬ್ಬಿಸುವ ಮೊದಲೇ ಮುಂಬೈ ಜನಜೀವನ ಆರಂಭವಾಗಿತ್ತು. ವಿನುಮಯಿಯ ಚಟುವಟಿಕೆಗಳು ಆರಂಭವಾಗುವಷ್ಟರಲ್ಲಿ ಅರವಿಂದ್ ಗೃಹಶ್ರೇಣಿಯ ಜನ ಸದ್ದು ಗದ್ದಲವೆಬ್ಬಿಸಿದ್ದಾರೆ. ಎಡ ಬಲ ಮನೆಗಳಲ್ಲಿನ ಚಿಕ್ಕಪುಟ್ಟ ಮಕ್ಕಳ ಅಳುದನಿ ಕರ್ಣಪಟಲಗಳ ಮೇಲೆ ಬೀಳುತ್ತಿತ್ತು. ಆರೇಳು ಮಹಡಿಗಳ ಗಗನಚುಂಬೀ ಗೃಹಶ್ರೇಣಿಯಲ್ಲಿ ಐವತ್ತು ಅರವತ್ತು ಸಂಸಾರಗಳು ಬಾಳುವೆ ಹೂಡಿದ್ದಾರೆ. ಬಹಳ ಮಟ್ಟಿಗೆ ಶ್ರೀಮಂತರೇ ವಾಸಿಸುವ ತಾಣ ಅರವಿಂದ್ ಗೃಹಶ್ರೇಣಿ.

ವಿನುಮಯಿಯ ಶುಚಿ ಶೌಚ ಗೃಹದಿಂದ ಆರಂಭವಾಗಿ ವಸ್ತು ವಸ್ತುವನ್ನೂ ಆವರಿಸಿತು. ಸುತ್ತಮುತ್ತ ಸದ್ದು ಗದ್ದಲಗಳೆದ್ದರೂ, ಕಣ್ಣು ಕುಕ್ಕುವಂತೆ ಬೆಳಕು ಮೂಡಿದರೂ ವಿರಾಜ್ ಹಾಸಿಗೆ ಬಿಟ್ಟೆದ್ದಿರಲಿಲ್ಲ. ಒಮ್ಮೆ ಎಬ್ಬಿಸೋಣವೆನ್ನಿಸಿದರೂ ಇನ್ನೊಮ್ಮೆ ಈಗಲೇ ಏಕೆ ಎನ್ನಿಸಿ ಕಾಫಿ ತಿಂಡಿಗೆ ಕೈ ಹಚ್ಚಿದಳು ವಿನುಮಯಿ. ಕೈಗಳು ಚಟುವಟಿಕೆಯ ನೆಲೆಯಾಗಿದ್ದರೂ ಮನಸ್ಸು ನಾನಾ ಚಿಂತೆಗಳಲ್ಲಿ ಮಿಂದು ಮಿಲಿಮಿಲಿ ಕಾರಾಗಾರ. ಕಾಲಕಾಲಕ್ಕೂ ಮುಂಬೈ ಜೀವನ ಬೇಡ ಎಂಬಷ್ಟು ಮನಸ್ಸಿಗೆ. ನಮ್ಮವರನ್ನು ನೋಡದೆ ಐದು ವರ್ಷಗಳಾದುವು. ಬೆಂಗಳೂರಿಗೆ ಹೋಗಿ ಒಂದು ತಿಂಗಳು ಹಾಯಾಗಿದ್ದು ಬರೋಣ ಎಂದು

ಹಾತೊರೆಯುತ್ತಿತ್ತು ಜೀವ. ಹಾಗೆಂದು ವಿರಾಜನ ಮುಂದೆ ತನ್ನ ಬೇಡಿಕೆಯನ್ನು ಇಟ್ಟರೂ ಅವನು ನೀಡುತ್ತಿದ್ದುದು ನೀರಸವಾದ ಮೊಟಕು ಉತ್ತರ "ನೋಡೋಣ."

ನೋಡೋಣವೆನ್ನುತ್ತಲೇ ಐದು ಸಂವತ್ಸರಗಳು ಉರುಳಿದುವು.

ಈ ಸಲ ತಮ್ಮನ ಮದುವೆ ಇದ್ದುದರಿಂದ ವಿನುಮಯಿಯ ಉತ್ಸಾಹ ಗರಿಗೂಡಿದ ಹಕ್ಕಿ. ಕಳೆದ ತಿಂಗಳಿನಿಂದ ತನ್ನ ಕಾರ್ಯಕ್ರಮಕ್ಕೆ ಮೇಲಿಂದ ಮೇಲೆ ಪೀಠಿಕೆ ಹಾಕಿದ್ದಳು—ಅವಳು. ಒಂದೇ ಬಾರಿಗೆ ವಿಷಯವನ್ನು ಮುಂದಿಡುವುಕಿದ್ಕಂತ ಮೊದಲೇ ಸೂಚನೆ ಕೊಡುವುದು ಉತ್ತಮ ಎನ್ನುತಿತ್ತು ಎದೆಯ ಪುಕ್ಕಲು ಹಕ್ಕಿ.

ಒಂದು ವೇಳೆ ವಿರಾಜ್ ತನ್ನೊಂದಿಗೆ ಬರುವುದಾದರೆ ಮತ್ತೂ ಕ್ಷೇಮ. ಆದರೆ ಅವನ ರೀತಿಯೇ ಬೇರೆ. ಮುಂಬೈ ಬಿಟ್ಟು ಹೊರಗಡೆ ಇರುವುದೆಂದರೆ ದಡದ ಮೇಲಿನ ಮೀನಿನಂತಾಗುವ ಮಹಾನುಭಾವನನ್ನು ಕಾಯುತ್ತಾ ಕೂಡುವುದಕ್ಕಿಂತ ತಾನೇ ಹೋಗಿ ಬರುವುದು ಲೇಸು ಎನಿಸಿಕೆ. ಅಂದಿನಿಂದಲೂ ಮುಂಬೈ ಜೀವನದಲ್ಲಿ ಅವನ ಚಟುವಟಿಕೆಗಳೆಲ್ಲ ಹಾಸು ಹೊಕ್ಕಾಗಿ ಬೆರತುಕೊಂಡಿದ್ದುವು. ನಾನಾ ಮುಖಗಳಲ್ಲಿ ಪ್ರವಹಿಸುವ ಅವನ ಪ್ರಭಾವೀ ಶಕ್ತಿ ಹೊತ್ತಿನ ಕಣಕಣವನ್ನೂ ಅಮೂಲ್ಯವಾಗಿ ಪರಿಗ್ರಹಿಸುತಿತ್ತು. ಅಂದಮೇಲೆ ಬೆಂಗಳೂರಿನಲ್ಲಿ ಆರಾಮವಾಗಿ ತಿಂಗಳುಗಟ್ಟಲೆ ವಿರಾಜ್ ಇರುವುದಾದರೂ ಹೇಗೆ ?

ಇಬ್ಬರ ಚಟುವಟಿಕೆಗಳೂ ವಿರುದ್ಧ ಮುಖದಲ್ಲಿ ನಡೆಯುವಾಗ ವಿನುಮಯಿ ಕಣ್ಣುಗಳಲ್ಲಿ ಕಂಬನಿಯ ಕೋಡಿಯ ಪ್ರವಾಹ. ಎದೆಯ ಹಂಬಲವೆಲ್ಲ ಮಂಜಿನಂತೆ ಕರಗಿ ಬಾಳು ಬರಡಾಗಿ ತೋರುವುದು ಸತ್ಯ. ಮೇಲಾಗಿ ಕೈಕಾಲಗಳು ಆಡದಂತೆ ಎರಡು ಕೋಣೆಯ ವಾಸ. ಒಂದಿಷ್ಟು ಬೇಸರ ಪರಿಹಾರಾರ್ಥವಾಗಿ ಸ್ವಲ್ಪ ಹೊತ್ತು ಗಾಳಿಗೆ ಅಡ್ಡಾಡೋಣವೆಂದು ಬಾಲ್ಕನಿಗೆ ಕಾಲಿಟ್ಟರೆ ಸ್ವಲ್ಪವಾದರೂ ಜನರಿಲ್ಲದ ತಾವಿರಬೇಕೆ ? ಮನೆ ಮನೆಯ ಮಂದಿಯೂ ಬಾಲ್ಕನಿಯಲ್ಲಿ ಸಾಲುಗಟ್ಟಿ ಅಡ್ಡಾಡುತ್ತಿರುತ್ತಾರೆ. ತಣ್ಣಗಿರ

ಬೇಕು ಎಂದರೆ ಕದ ಮುಚ್ಚಿ ಒಳಗಡೆ ಕುಳಿತುಕೊಳ್ಳುವುದೊಂದೇ ದಾರಿ.

ಇದೆಂಥ ಜೀವನ...?

ಯಾವ ಜನ್ಮದ ಕರ್ಮವೋ! ನನ್ನನ್ನು ಮುಂಬೈಗೆ ನೂಕಿದೆ. ಬೆಂಗಳೂರಿನಲ್ಲೇ ಇದ್ದಿದ್ದರೆ ಅಥವಾ ಇನ್ನಾವುದೇ ಹಳ್ಳಿಯಲ್ಲಿದ್ದಿದ್ದರೆ? ನೂರಕ್ಕೆ ನೂರರಷ್ಟು ನೆಮ್ಮದಿಯಿಂದಿರಬಹುದಾಗಿತ್ತು. ಅದಕ್ಕೂ ಪಡೆದು ಕೊಂಡು ಬಂದಿರಬೇಕಲ್ಲ ?

ವಿರಾಜ್ ಹಾಸಿಗೆ ಬಿಟ್ಟು ಎದ್ದಾಗ ಕಿಟಕಿಯೊಳಗೆ ಹೂ ಬಿಸಿಲು ಮೈ ಚಾಚಿತ್ತು. ಹಿಂದಿನ ರಾತ್ರಿ ಆವನು ಮನೆಗೆ ಮರಳಿದಾಗ ಹೊತ್ತು ಮೀರಿದ್ದುದರಿಂದ ವಿನುಮಯಿ ಎಬ್ಬಿಸುವ ಗೋಜಿಗೆ ಹೋಗಲಿಲ್ಲ. ಅವನು ಒಂದೇ ಉಸುರಿಗೆ ಪ್ರಾತರ್ವಿಧಿಗಳನ್ನು ಮುಗಿಸುವಷ್ಟರಲ್ಲಿ ತಿಂಡಿ ಯೊಂದೇ ಅಲ್ಲ, ಅಡಿಗೆಯೂ ಆಗಿತ್ತು. "ಓಹ್, ಹೊತ್ತಾಯಿತು." ಎನ್ನುತ್ತಲೇ ಬಂದು ತಿಂಡಿಗೆ ಕುಳಿತ. ಅವನು ಕೂಡುವ ಮೊದಲೇ ತಿಂಡಿ ಅಣಿಯಾಗಿತ್ತು. ಬಸಿಯಲ್ಲಿ ಬಿಸಿ ಕಾಫಿಯನ್ನು ಮುಂದಿಟ್ಟು, ತಾನು ಹೊರಡುವುದನ್ನು ಇನ್ನೊಮ್ಮೆ ಖಚಿತಪಡಿಸಿಕೊಳ್ಳಲು ನುಡಿದಳು ವಿನುಮಯಿ "ನಾನು ರಾತ್ರಿಯ ಗಾಡಿಗೆ ಹೊರಡುವೆ." ನುಡಿ ಪೂರ್ಣ ಗೊಳ್ಳುವ ಮುನ್ನ ಮುಖದಲ್ಲಿ ಹಸನಾದ ನಗೆ ಅರಳಿತು.

ವಿರಾಜ್ ಹೆಚ್ಚು ಮಾತು ಬೆಳಸದೆ "ಆಗಲಿ" ಎಂದ. ಅದರ ಸಾಧ್ಯಾ ಸಾಧ್ಯತೆಯ ಬಗ್ಗೆ ಅವನು ಯೋಚಿಸಿದಂತೆಯೂ ತೋರಲಿಲ್ಲ. ಬಟ್ಟೆ ಬರೆಗಳನ್ನು ಗಡಬಡ ತೊಟ್ಟು ಉಸಿರಾಡಲೂ ಸಮಯವಿಲ್ಲದಷ್ಟು ಅವಸರ ವಾಗಿ ಆಫೀಸಿಗೆ ಹೊರಟ. ಅವನನ್ನು ಮೆಟ್ಟಲವರೆಗೂ ಹೋಗಿ ಬೀಳ್ಕೊಟ್ಟು ಒಳಬಂದ ವಿನುಮಯಿ ಒಂದು ಗಳಿಗೆ ಯೋಚಿಸಿ ಹೊರ ಡಲು ಅಣಿಯಾಗತೊಡಗಿದಳು. ಚಿತ್ತ ರೆಕ್ಕೆ ಪುಕ್ಕ ಬಿಚ್ಚಿದ ಹಕ್ಕಿಯಂತೆ ತನ್ನವರ ಬಳಿಗೆ ಹಾರಿ ಸುತ್ತಮುತ್ತ ಸುಳಿದಾಡುತ್ತಿದೆ ಆಗಲೇ. ಅಕ್ಕಂದಿರ ಮಕ್ಕಳಿಗೆ ಕೆಲವು ಫ್ಯಾನ್ಸಿ ಸಾಮಾನುಗಳನ್ನು ಕೊಂಡುಕೊಂಡಿದ್ದರೂ ಅವು ಅಷ್ಟು ಚೆನ್ನಾಗಿಲ್ಲ ಎಂಬಷ್ಟು ಅಸಮಾಧಾನ ಮನಸ್ಸಿಗೆ. ಒಂದು

ತಿಂಗಳ ಪರ್ಯಂತ ಇರುವುದಿಲ್ಲವಾದ್ದರಿಂದ ಸಾಮಾನು ಸರಂಜಾಮು ಜೋಡಿಸುವ ಅಗತ್ಯವೂ ಇತ್ತು. ಕೈಗೆ ಇನಿತೂ ಬಿಡುವಿಲ್ಲದಂತೆ ಕೆಲಸಕ್ಕೆ ಕೈ ಹಚ್ಚಿದಳು ವಿನುಮಯಿ. ಕೆಲಸಗಳ ನಡುವೆ ನೆರಮನೆಗಳಿಗಾಗಿ ಫೋನ್‌ಕಾಲ್‌ಗಳು ಬೇರೆ. ಮಾಡುವ ಕೆಲಸ ಅಷ್ಟಕ್ಕೆ ಬಿಟ್ಟು ನೆರೆಮನೆಗಳಿಗೆ ಹೋಗಿ ಯಾರ್ಯಾರಿಗೆ ಟೆಲಿಫೋನ್ ಬಂದಿದೆಯೋ ಅವರಿಗೆ ಹೇಳಿ ಅವರು ಬಂದು ಮಾತಾಡಿ ಹೋಗುವವರೆಗೆ ಕಾದಿದ್ದು ಕದ ಮುಚ್ಚಿಕೊಳ್ಳುವಷ್ಟರಲ್ಲಿ ಮನಸ್ಸಿಗೆ ಕಿರಿಕಿರಿ ಕಿನಿಸಿಗೆ. ಸೂಟ್‌ಕೇಸಿಗೆ ಬಟ್ಟೆಗಳನ್ನು ತುಂಬುತ್ತಿರುವಂತೆ ಮನಸ್ಸು ಮಿಾನಳನ್ನು ಹಲವಾರು ಬಾರಿ ನೆನೆಯಿತು .. ಪಾಪ ! ಅವಳಿಗೂ ಹೊರಡಲಿಕ್ಕೆ ತುಂಬ ಆಸೆಯಿತ್ತು. ಶಂಕರ್ ಒಪ್ಪಿದ್ದರೆ ಇಬ್ಬರೂ ಕೂಡಿ ಹೋಗಿಬರಬಹುದಾಗಿತ್ತು. ನನಗೂ ಒಬ್ಬಳೇ ಪಯಣಿಸುವುದು ಬೇಸರ.

ಯೋಚನೆ ಬರುವುದರೊಳಗಾಗಿ ಟೆಲಿಫೋನಿನ ಟಂಟಣಿನಾದ. ಟೆಲಿಫೋನಿಗೆ ಕೈ ಹಚ್ಚುವ ಮೊದಲೇ ಎದೆಯ ಹಕ್ಕಿ ಪ್ರಾರ್ಥಿಸಿತು...ದೇವರೇ ಈ ಕರೆ ನನಗಾಗಿಯೇ ಇರಲಿ.

"ಹಲೋ !"

"ಹಲೋ ! ವಿನೂ ಮಾವಿಾ !"

"ಓ...ನೀನಾ !...ಈಗ ಹಾಯಾಗಿ ಉಸಿರಾಡುವಂತಾಯ್ತು;"

" ಯಾರು ಅಂದುಕೊಂಡಿರಿ ?" ಹೂದನಿಯಲ್ಲಿ ಎಳೆ ನಗು ತುಂಬಿ ಹರಿಯಿತು.

" ನೆರೆಮನೆಗಳಿಗೇನೋ ಎಂಬ ಭಯ ಇದೆಯಲ್ಲಾ...."

ಎರಡೂ ಕಡೆಯಿಂದ ಕಿಲಕಿಲ ನಗುವಿನಲೆಯೆದ್ದಿತು.

"ಫೋನು ಇದ್ದರೂ ಕಷ್ಟ. ಇಲ್ಲದಿದ್ದರೂ ಕಷ್ಟ. ನಾನು ಶಿವಾಜಿ ಮಾರ್ಕೆಟ್ಟಿಗೆ ಬಂದು ನಿಮಗೆ ರಿಂಗ್ ಮಾಡಿದೆ ಮಾವಿಾ."

" ಶಿವಾಜಿ ಮಾರ್ಕೆಟ್ಟಿಗೆ...?"

"ಹೌದು. ಮನೆ ಸಾಮಾನಿಗಾಗಿ ಬಂದಿದ್ದೆ."

"ಈ ಗಲಾಟೆ ಗದ್ದಲ ನೋಡಿದರೆ ಹೋಗಹೋಗುವುದೇ ಬೇಡ. ಟೆಲಿಫೋನಿನಲ್ಲಿ ಹಾಯಾಗಿ ಮಾತಾಡೋಣ ಎನ್ನಿಸುತ್ತೆ. ಅಲ್ಲವೆ ಮಿನಾ ?"

"ಆದರೂ ನೋಡಿ ! ಈ ಜನ ಎಷ್ಟು ಮಜವಾಗಿರುತ್ತಾರೆ !"

"ಅದಕ್ಕೂ ಸಹ ಪಡೆದುಕೊಂಡು ಬಂದಿರಬೇಕು !"

ಎರಡೂ ಕಡೆ ಎಳೆನಗುವಿನ ತಿಳಿಸದ್ದು ಮರ್ಮರಿಸಿತು.

"ನೀವು ಬೆಂಗಳೂರಿಗೆ ಹೊರಡುವುದೆಂದು ಮಿನೂ ಮಾಮಿ ?"

"ಇಂದೇ ರಾತ್ರಿಯ ಗಾಡಿಗೆ. ನಿನ್ನೆ ಶಂಕರ್‌ಗೆ ರಿಂಗ್ ಮಾಡಿ ನಿನ್ನನ್ನೂ ಕಳುಹಿಸಲು ಕೇಳಿದೆ. 'ಹೇಗೂ ನಾವೂ ಬೇಸಿಗೆಗೆ ಹೋಗುವುದಿದೆಯಲ್ಲಾ, ಮತ್ತೇಕೆ ಈಗ ?' ಎಂದರು."

"ಅವರು ಸಲಸಲವೂ ಅನ್ನುವುದೇ ಹಾಗೆ" ದನಿ ವಿಜಾತೀಯ ವಾಗಿತ್ತು.

"ವಿರಾಜ್ ಸಹ ಹಾಗೆ ಅಂದರು. ನಾನು ಹೋಗಲೇಬೇಕು ಅಂದುದ ರಿಂದ ಒಪ್ಪಿಕೊಂಡಿದ್ದಾರೆ. ದೂರ ಪಯಣ. ನೀನೂ ಹೊರಟಿದ್ದರೆ ಇಬ್ಬರೂ ಆನಂದವಾಗಿ ಹೋಗಿಬರಬಹುದಾಗಿತ್ತು. ನನಗೂ ಒಬ್ಬಳೇ ಪಯಣಿಸುವುದು ಬೇಸರ. ನೀನೂ ಬರುತ್ತೀಯೆಂದು ಬಹಳವಾಗಿ ಆಸೆ ಪಟ್ಟಿದ್ದೆ. ನಿರಾಶೆಯಾಯಿತು."

"ನೀವು ಇನ್ನೊಂದು ಸಲ ಅವರನ್ನು ಕೇಳಿ ನೋಡಿ ಮಾಮಿ," ಗೋಗರೆದಳು ಮಿನ.

"ಒಮ್ಮೆ ಕೇಳಿಯಾಗಿದೆ, ಮತ್ತೆ ಹೇಗೆ ಕೇಳಲಿ ಮಿನಾ ?"

"ಏನಾದರೂ ಮಾಡಿ ಮಾಮಿ. ನನಗಂತೂ ಹೊಟ್ಟೆಯಲ್ಲಿ ತೊಳೆಸು ವಷ್ಟು ಸಂಕಟ."

"ಇನ್ನೊಮ್ಮೆ ಕೇಳುವುದೆಂದರೆ ಹೇಗೆ ?"

ನೀವು ದೊಡ್ಡವರು, ಅಷ್ಟೇಕೆ ಸಂಕೋಚ ?"

"ಹೇಗಮ್ಮಾ...."

"ನನಗಾಗಿ ಕೇಳಿಬಿಡಿ. ನನ್ನ ಹೆಸರು ಹೇಳದೆ ಅವರನ್ನು ನೀವೇ ಕೇಳುವ ರೀತಿಯಲ್ಲಿ ಕೇಳಿ ನೋಡಿ. ನಾನು ಇಲ್ಲಿ ಇನ್ನೂ ಅರ್ಧಗಂಟೆ ಇರುವೆ. ಇದೇ ನಂಬರಿಗೆ ರಿಂಗ್ ಮಾಡಿ ಅವರು ಏನೆಂದರೆಂಬುದನ್ನು ನೀವು ನನಗೆ ತಿಳಿಸಬಹುದು". ದನಿಯಲ್ಲಿ ಆಸೆಯು ಝರಿ ಹರಿದು ಬಂತು.

"ಆದೀತೆ ಮಾಮಿ. "?

"ಆಗಲಿ, ಮಿಾನಾ "

"ನಾನೇ ಹೇಳಿದ್ದೆಂದು ತಿಳಿದರೆ ನನ್ನ ಮೇಲೆ ಸಿಟ್ಟಾದಾರು ಮಾಮಿ."

"ಇಲ್ಲಮ್ಮಾ, ನಾನೇ ಕೇಳಿ ಹೇಳುವೆ."

"ತುಂಬ ಥ್ಯಾಂಕ್ಸ್."

ಟೆಲಿಫೋನಿನ ಸಂಪರ್ಕವನ್ನು ತುಂಡುಗಡಿದು ಒಂದು ಗಳಿಗೆ ಯೋಚಿಸಿದಳು ವಿನುಮಯಿ. ಮಿಾನಾ ಮದುವೆಯಾಗಿ ಬೆಂಗಳೂರು ಬಿಟ್ಟ ನಂತರ ಪುನಃ ಹೋಗಿರಲಿಲ್ಲ. ಅದಕ್ಕೆಂದೇ ನಿನ್ನೆ ರಿಂಗ್ ಮಾಡಿ ಶಂಕರನನ್ನು ಕೇಳಿಯೂ ಆಗಿತ್ತು. ಈಗ ಮತ್ತೊಮ್ಮೆ ಕೇಳುವುದೆಂದರೆ ಏನೋ ಒಂದು ಬಗೆಯ ಸಂಕೋಚ ಏನು ಮಾಡಲಿ ? ಹೇಗೆ ಕೇಳಲಿ ? ಆದರೆ ಮಿಾನಳಿಗೆ ಎಷ್ಟು ಆಸೆ ಇದೆ ? ಅವಳ ಆಸೆ ನೋಡಿದರೆ ಸಂಕಟವಾಗುತ್ತದೆ. ಇನ್ನೊಮ್ಮೆ ಕೇಳಿದರೂ ಬಹುಶಃ ಹಾಡಿದ್ದೇ ಹಾಡಬಹುದು ಶಂಕರ.

ಯೋಚನೆಯ ತೀವ್ರ ಗತಿಯಲ್ಲಿ ಟೆಲಿಫೋನಿಗೆ ಕೈ ಹಚ್ಚಿದಳು ವಿನುಮಯಿ.

"ಹಲೋ ! ಶಂಕರ್"

"ಓ ...ಹಲೋ ! ಮಾಮಿ !"

"ನಾನು ರಾತ್ರಿಯ ರೈಲಿಗೆ ಹೊರಡುತ್ತಿದ್ದೇನೆ ?"

"ಓಹೋ ! ವಿರಾಜ್ ಹೊರಡುತ್ತಾರೆಯೋ ?"

"ಇಲ್ಲ. ನಾನೊಬ್ಬಳೇ"

"ನಾವು ಬೇಸಿಗೆಯಲ್ಲಿ ಹೋಗುವ ಯೋಚನೆ ಇದೆ. ಇಲ್ಲದಿದ್ದಲ್ಲಿ ಮೀನಳನ್ನು ನಿಮ್ಮೊಂದಿಗೆ ಕಳುಹಿಸಬಹುದಾಗಿತ್ತು. ಅವಳಿಗೂ ತುಂಬ ಆಸೆ ಇದೆ."

"ಪಾಪ. ಬಂದವಳು ತಿರುಗಿ ಹೋಗಲಿಲ್ಲ ಅಂದಮೇಲೆ ಎಷ್ಟು ಆಸೆ ಇರಲಿಕ್ಕಿಲ್ಲ ?"

"ಏನೇ ಇರಲಿ, ಈ ಸಲ ನಾವು ಹೋಗುವವರೇ ?"

"ಹಾಗಾದರೆ......."

"ಹ್ಞಾ...ನೀವು ಹೊರಡಿ. ನಾನು ಮೀನಾ ಬೇಸಿಗೆಯಲ್ಲಿ ಹೋಗಿ ಬರುತ್ತೇವೆ."

"ಸರಿ."

ರಿಸೀವರನ್ನು ಕೆಳಗಿಟ್ಟಾಗ ಮನಸ್ಸಿಗೆ ವ್ಯಾಕುಲವಾಯಿತು. ಹೇಗೆ ಹೇಳಲಿ ಮೀನಳಿಗೆ ? ಅವಳು ಇನ್ನೆಷ್ಟು ಸಂಕಟಗೊಳ್ಳುವಳೋ. ಬೇಸಿಗೆ ಯಲ್ಲಿ ಹೋಗಿ ಬರುವುದಾದರೆ ಬಹಳ ದೂರವಿಲ್ಲ. ಆದರೂ ಮದುವೆ ಯೆಂದರೆ ಬಂಧು ಬಳಗವೆಲ್ಲಾ ಕೂಡಿರುತ್ತಾರೆ. ಮನೆ ಮನೆಗೆ ಹೋಗಿ ನೋಡುವ ತಾಪತ್ರಯ ತಪ್ಪುತ್ತೆ. ಎಲ್ಲರೊಡನೆಯೂ ಕೂಡಿ ಬೆರೆಯುವ ಸಾಧ್ಯತೆಯೂ ಇದೆ. ಪಾಪ, ಎಷ್ಟು ಆಸೆಯಿಂದ ಕಾದಿರುತ್ತಾಳೋ ಮೀನ ..

ಒಲ್ಲದ ಮನಸ್ಸಿನಿಂದಲೇ ರಿಂಗ್ ಮಾಡಿ ಮೀನಳಿಗೆ ವಿಷಯ ತಿಳಿಸಿ, "ಮಧ್ಯಾಹ್ನ ಹೊತ್ತಿಗೆ ಮುಂಚೆ ಬಾ ಮೀನಾ. ಸಾಯಂಕಾಲದವರೆಗೂ ಇಲ್ಲಿದ್ದು ಹೋಗಬಹುದು" ಎಂದಳು ಸಾಂತ್ವನಗೈಯುವ ದನಿಯಲ್ಲಿ.

"ಆಗಲಿ. ಬರುವೆ ಮಾಮೀ." ಎನ್ನುವಾಗ ದನಿ ಗದ್ಗದವಾಯಿತು.

"ಮೀನಾ...ಬೇಸರಿಸಬೇಡಮ್ಮಾ.? ದನಿಯಲ್ಲಿ ಹಾಲ್ಜೇನು ಹರಿದು ಬಂತು -- ಕದಡಿದ ಬಗೆಗೆ ನೆಮ್ಮದಿಯನ್ನೂಡಿಸುವಂತೆ.

"ಬೇಸರಿಸಿ ಮಾಡುವುದೇನು ?"

"ಮೀನಾ ! ನಿನ್ನ ದನಿ ನೋಡಿದರೆ ತಿಳಿಯದೆ ?"

"ಇಲ್ಲ ಮಾಮಿಾ-"

"ಮಧ್ಯಾಹ್ನ ಖಂಡಿತಾ ಬಾ."

"ಆಗಲಿ."

"ಚೀರಿಯೋ !"

"ಚೀರಿಯೋ."

ರಿಸೀವರನ್ನು ಸ್ವಸ್ಥಾನದಲ್ಲಿಟ್ಟಾಗ ಹೃದಯ ಭಾರವಾಯಿತು. ಹಿಂದಿನ ದಿನ ಅರ್ಧ ಬರೆದ ಕಾಗದವನ್ನು ಪೂರ್ತಿಗೊಳಿಸಿದಳು ವಿನುಮಯಿ. ಬೆಂಗಳೂರಿಗೆ ಹೊರಡುವ ಉತ್ಸಾಹ ಮೈಗೆ ನೂರ್ಮಡಿಯ ಚೈತನ್ಯವನ್ನೂಡಿಸಿತ್ತು. ಅಪ್ಪ ಅಮ್ಮ ಅಕ್ಕ ತಂಗಿ ಅಣ್ಣ ತಮ್ಮ ನೆಂಟರು ಇಷ್ಟರು ಕಾಲೇಜುಗಳ ಗೆಳತಿಯರು ಯಾರು ಹೌದು ? ಯಾರು ಅಲ್ಲ ? ಒಂದು ತಿಂಗಳ ಒಳಗಾಗಿ ಎಷ್ಟೆಲ್ಲ ಮಂದಿಯನ್ನು ನೋಡುವುದಿದೆ ? ಮುಂಬೈ ಜೀವನ ಸಾಕಾಗಿದೆ. ಇನ್ನೂ ಕೆಲವು ದಿನ ಇದ್ದು ಬರೋಣವೇ ಎಂಬಷ್ಟು ಆಸೆ ಮನಸ್ಸಿಗೆ. ಹೇಗೂ ನಾಲ್ಕೈದು ವರ್ಷಗಳಿಗೊಮ್ಮೆ ಹೋಗಿ ಬರುವುದಷ್ಟೇ. ಗಂಡಸರಿಗೆ ನಮ್ಮ ಕಷ್ಟ ಸುಖಗಳೊಂದೂ ಅರ್ಥವಾಗುವುದಿಲ್ಲ. ಆಗೊಮ್ಮೆ ಈಗೊಮ್ಮೆ ತಂದೆ ತಾಯಿ ನೋಡಿ ಬರಲು ಕಳುಹಿಸುವುದೆಂದರೂ ಎಷ್ಟು ಕಷ್ಟ ಇವರಿಗೆ ? ಇವರಂತೆಯೇ ನಮಗೆ ಬಂಧು ಬಳಗ ಅಂದರೆ ಆಸೆ ಇಲ್ಲವೇ ? ಕೊಂಡು ತಂದವರ ರೀತಿ ವರ್ತಿಸುವುದನ್ನು ನೋಡಿದರೆ ನನಗಂತೂ ಮೈಯೆಲ್ಲಾ ಕಿಡಿಕಿಡಿ. ಅಂದು ನೆರೆಮನೆಯ ರಮಾಬಾಯಿ ಅಂದಿದ್ದಳು. "ರೀ ! ಹೆಣ್ಣಿಗೆ ಮುಕ್ತಿ ಎಂಬುದು ಕನಸಿನ ಮಾತು." ಒಡನೆ ಸಣ್ಣ ನಗು ಅರಳಿತು.

ಟ್ರಿಣ್. ಟ್ರಿಣ್ ಟ್ರಿಣ್, ಟ್ರಿಣ್ !

"ಹಲೋ !"

"ಹಲೋ ವಿನೂ !"

"ಓ...ಶೈಲಾ ! ಯಾಕೋ ಬಲು ಅಪರೂಪ ?"

"ಅಯ್ಯೋ, ಇದೇನು ? ಮೊನ್ನೆ ಮಾತಾಡಲಿಲ್ಲವೇ ?"

"ಮೊನ್ನೆ ಮಾತನಾಡಿದರೆ ಸಾಕೆ ? ಈ ಕಡೆ ಬರಲಿಲ್ಲವಲ್ಲಾ ?"

"ನನ್ನನ್ನೇ ಬರಲಿಲ್ಲ ಅನ್ನುವುದು ಸರಿಯಲ್ಲ. ನೀನೊಂದಿನ ಬಾ. ನಾನೊಂದಿನ ಬರುವೆ !"

"ಮೊನ್ನೆ ನಾನು ತಾನೆ ಬಂದದ್ದು ?"

"ಅದಕ್ಕೆಂದೇ ಈ ದಿನ ನಾನು ಬರುತ್ತಿದ್ದೇನೆ !"

"ಒಳ್ಳೆಯದು ! ಯಾವಾಗ ಬರುವೆ ?"

"ನೀನು ಬೆಂಗಳೂರಿಗೆ ಒಯ್ಯಲಿಕ್ಕೆ ಫ್ಯಾನ್ಸಿ ಥಿಂಗ್ಸ್ ಬೇಕು ಅಂದೆಯಲ್ಲ. ಮಕ್ಕಳಿಗೆ ಬೇಕಾಗುವಂಥ ಒಳ್ಳೆಯ ಫ್ಯಾನ್ಸಿ ಥಿಂಗ್ಸ್ ಇವೆ. ಸಾಯಂಕಾಲ ಹೋಗಿ ಬರೋಣ ಬಾ."

"ಎಲ್ಲಿ ?"

"ರಾಣಾಪೇಟ್‌ನಲ್ಲಿ."

"ಸಂಜೆ ಇಲ್ಲಿಗೆ ಮೀನಾ ಬರುತ್ತಾಳೆ."

"ಬಂದರೆ ಬರಲಿ. ಮೂವರೂ ಒಟ್ಟುಗೂಡಿ ಹೋಗೋಣ."

"ಹೊತ್ತಿಗೆ ಮುಂಚೆ ಬರದಿದ್ದಲ್ಲಿ ತೊಂದರೆ..." ಒಂದುಗಳಿಗೆ ಯೋಚಿಸಿ ನುಡಿದಳು ವಿನುಮಯಿ.

"ನೋಡೋಣ. ಅವಳು ಬಂದ ಮೇಲೆ ಹೋದರಾಯಿತು."

"ಸರಿ....ಕ್ರಾಫರ್ಡ್ ಮಾರ್ಕೆಟ್ಟನಲ್ಲಿ ಕೆಲವನ್ನು ತೆಗೆದುಕೊಂಡೆ. ಅವುಗಳ ಮಾಟ ಅಷ್ಟೇನು ಚೆನ್ನಾಗಿಲ್ಲ. ನನಗೆ ಏನು ಮಾಡಲಿ ಎಂಬ ಯೋಚನೆಯಾಗಿತ್ತು."

"ರಾಣಾಪೇಟ್‌ನಲ್ಲಿ ಸೊಗಸಾಗಿವೆ."

"ಒಂದು ಗಂಟೆ ವ್ಯಾಪಾರ ಅಷ್ಟೆ. ಹೋಗಿ ಬರೋಣ."

"ಆಗಲಿ, ವಿನುಮಾ."

"ಎಷ್ಟೊತ್ತಿಗೆ ಬರುವೆ ?"

"ನನಗಿಂದು ಬಹಳ ಕೆಸಲವಿದೆ. ನಿನ್ನ ಮನೆಯಲ್ಲಿ ಕೂಡುವಷ್ಟು ವೇಳೆಯಿಲ್ಲ. ಮೀನ ಬರುವ ಸಮಯಕ್ಕೆ ಸರಿಯಾಗಿ ಬರುವೆ. ಮೂವರೂ ಹೋಗಿ ಜಟಪಟ ಮುಗಿಸಿಕೊಂಡು ಬರೋಣ."

"ನಿನಗೆ ವಿೂನಾ ಬಂದುದು ತಿಳಿಯುವ ಬಗೆ...?"

"ನಾನೇ ರಿಂಗ್ ಮಾಡುವೆ."

"ನಿನಗೂ ಟೆಲಿಫ್ಫೋನಿಲ್ಲ. ವಿೂನಳಿಗೂ ಇಲ್ಲ. ಇದೊಂದು ದೊಡ್ಡ ತಾಪತ್ರಯ. ಬೆಳಿಗ್ಗೆ ವಿೂನಾ ಶಿವಾಜಿ ಮಾರ್ಕೆಟ್ಟಿನಿಂದ ರಿಂಗ್ ಮಾಡಿದ್ದಳು."

"ಪಾಪ, ಅವಳಿಗೆ ನೀನು ಹೊರಟಿರುವುದು ಸಂಕಟ ಮೂಡಿಸಿರಬಹುದು."

"ಛೇ! ಪಾಪ ಎಲ್ಲರನ್ನೂ ನೋಡಿಕೊಂಡು ಬರುವ ಹಂಬಲ ಅವಳಿಗೂ ಇತ್ತು."

"ಒಂದೇ ಸಲಕ್ಕೆ ತನ್ನವರನ್ನೆಲ್ಲಾ ಬಿಟ್ಟು ಕೊಡುವುದೆಂದರೆ ಎಂತಹವರಿಗೂ ಕಷ್ಟ."

"ನಿಜ, ಶೈಲಾ."

"ಹೆಣ್ಣಾಗಿ ಹುಟ್ಟಿದರೆ ಈ ಪಾಡು."

"ನಮ್ಮವರ ದೃಷ್ಟಿಕೋನ ಬದಲಾದರೆ ಎಲ್ಲಾ ಸರಿ ಹೋಗುತ್ತೆ."

"ಅದು ಇನ್ನೊಂದು ಜನ್ಮಕ್ಕೆ!"

ಎರಡೂ ಕಡೆಯಿಂದ ಕಿಲಕಿಲನೆ ನಗುವಿನಲೆಯೆದ್ದಿತು.

ಅವಳಿಗೆ ಟಾಟಾ ಹೇಳಿ ರಿಸೀವರನ್ನು ಕೆಳಗಿಟ್ಟಾಗ ಮುಖ ಅರಳಿತು.

ಶೈಲಾ ಮುಂಬೈ ಗೆಳತಿ. ವಿನುಮಯಿ ಬೆಂಗಳೂರಿನಿಂದ ಮುಂಬೈಗೆ ಬಂದು ಸಂಸಾರ ಹೂಡಿದ ಹೊಸದರಲ್ಲಿ ರಾಣಾ ಹೋಟೆಲಿನ ಪಕ್ಕದಲ್ಲಿದ್ದ ಕಿಷ್ಕಿಂದಾ ಪಟ್ಟಣದಲ್ಲಿ ಶೈಲಾ ಮರುಕೋಣೆಯ ನಿವಾಸಿನಿ. ಆಗಿನಿಂದಲೂ ಇಬ್ಬರಿಗೂ ಎಲ್ಲಿಲ್ಲದ ಸ್ನೇಹ. ನಾಲ್ಕು ವರ್ಷ ಅಕ್ಕಪಕ್ಕದಲ್ಲಿ ವಾಸಿಸಿದ್ದು, ಅನಂತರ ಬೇರೆಬೇರೆ ಸ್ಥಳಗಳಿಗೆ ವರ್ಗಾವಣೆ ಹೊಂದಿದರೂ ... ಸಮಯ ಸಂದರ್ಭಗಳಲ್ಲಿ ಒಟ್ಟುಗೂಡಿ ಕಾರ‍್ಯಕಲಾಪ ನಡೆಸುತ್ತಿದ್ದರು. ಕೊಂಡು ತರುವ ವೇಳೆಗಳಲ್ಲಿ ಇಬ್ಬರೂ ಕೂಡಿ ಆರಿಸಿದರೇನೇ ಮನಸ್ಸಿಗೆ ಹಿತ. ಇಬ್ಬರಿಗೂ ದೇಹವೆರಡಾದರೂ ಜೀವ ಒಂದು.

ಮೊದಲೇ ಗೊತ್ತಿದ್ದರೆ ಮಿಾನಳಿಗೂ ತಿಳಿಸಬಹುದಾಗಿತ್ತು. ಮಿಾನಾ ಬರುವುದು ಹೊತ್ತು ಮಾಡಿದಲ್ಲಿ ತೊಂದರೆಯಾಗುತ್ತೆ. ಪಾಪ. ಮಿಾನಾ ಇಂದು ಎಷ್ಟು ಅತ್ತಿದ್ದಾಳೊ...! ಯೋಚನೆ ಬರುವುದರೊಳಗಾಗಿ ಗೋಡೆಯ ಮೇಲಿನ ಹಲ್ಲಿ ಚಕಚಕ ನುಡಿಯಿತು. ಛೀ ! ಬಲಗಣ್ಣೇಕೆ ಇಷ್ಟೊಂದು ಅದುರುತ್ತಿದೆ ? ಏನಿರಬಹುದು ? ಬಲಗಣ್ಣು ಅದುರಿದಾಗಲೆಲ್ಲ ತಂಟೆ ತಾಪತ್ರಯ ಇದ್ದೇ ಇರುತ್ತದೆ. ಪುನಃ ಹಲ್ಲಿ ಲೊಚಗುಟ್ಟಿತು. ಛೀ ! ಇದೆಲ್ಲಿ ಸೇರಿಕೊಂಡಿದೆ ಇಲ್ಲಿ ? ಮಾತು ಮಾತಿಗೂ ಲೊಚಗುಟ್ಟುತ್ತೆ. ಕತ್ತೆತ್ತಿ ನೋಡಿದಳು ವಿನುಮಯಿ ; ಹಲ್ಲಿ ದೃಷ್ಟಿಗೆ ಗೋಚರಿಸಲಿಲ್ಲ.

ಮಾತೆತ್ತಿದರೆ ಶಂಕರ್ ಹಣದ ಕೊರತೆಯನ್ನು ಮುಂದಿಡುತ್ತಾರೆ. ಅಷ್ಟೊಂದು ಅಡಚಣೆಯಿದ್ದರೂ ಕಲಿತ ಸತಿಗೆ ಕೆಲಸ ಮಾಡಲು ಅವಕಾಶ ಕೊಡುವುದಿಲ್ಲವೇಕೆ ? ಕಲಿತರೂ ಮಿಾನಾ ಹೊರಹೊರಡುವಂತಿಲ್ಲ. ಇಷ್ಟೊಂದು ಸಂಕುಚಿತ ಭಾವನೆ ಇದ್ದರೆ ಹೇಗೆ ?

ಮಿನರ್ವಾ ಮಿಲ್ಲಿನ ಸೈರನ್ ಸಿಳ್ಳೆ ಹಾಕಿತು. ಕ್ಹೂಊಊಊ !

ಮೊದಲನೆಯ ಪಾಳಿನ ಕೆಲಸಗಾರರನ್ನು ಸಾಗಿಸಲು ಸಾಲುಗಟ್ಟಿ ಹೊರಡುವ ಕೆಂಪು—ಕಪ್ಪು ಬಸ್ಸುಗಳ ಸದ್ದು ಗದ್ದಲ ಕಿವಿಯ ಮೇಲೆ ಲಟ್ಟಿ ಹೊಡೆದಂತೆ ಬೀಳಹತ್ತಿತ್ತು. ಸಾಕಪ್ಪಾ, ಈ ಮುಂಬೈ ಜೀವನ. ನಾಲ್ಕು ಎಕರೆ ಜಮಿಾನಿದ್ದರೆ ಹಾಯಾಗಿರಬಹುದು. ಈ ಸದ್ದು ಗದ್ದಲದಲ್ಲಿ ನಡೆಸುವ ವಿಲಾಸೀ ಜೀವನ ನೆನೆಸಿಕೊಂಡರೆ ಮೈನವಿರೇಳಿಸುತ್ತದೆ.

ರಾಜಾಭಾಯಿ ಟವರ್ ಗಡಿಯಾರ ಗಂಭೀರ ದನಿಯಲ್ಲಿ ಹನ್ನೆರಡು ಬಾರಿ ಗಂಟೆ ಬಾರಿಸಿತು. ದಿಟ್ಟಿ ಗೋಡೆಯ ಮೇಲಿನ ಗಡಿಯಾರದ ಕಡೆ ಹರಿಯಿತು. ಅದಾಗಲೇ ಹತ್ತು ನಿಮಿಷ ಮುಂದೆ ಹೋಗಿದೆ ಮುಳ್ಳನ್ನು ಹಿಂದೆ ತಳ್ಳಿ ಹನ್ನೆರಡರ ಸಂಖ್ಯೆಗೆ ನಿಲ್ಲಿಸಿದಳು ವಿನುಮಯಿ. ಮರು ಕ್ಷಣದಲ್ಲಿ ಅದು ಎಷ್ಟು ಮುಂದೋಡಿದರೆ ಅಷ್ಟು ಕ್ಷೇಮ ಎನ್ನಿಸಿ ನಗುವುಕ್ಕಿ ಬಂತು.

ಹತ್ತು ನಿಮಿಷ ಮಾತ್ರವಲ್ಲ—ಹತ್ತು ದಿನ ಮುಂದಾಗಿ ಮುಂಬೈ ಬಿಟ್ಟರೂ ಕ್ಷೇಮ.

ತಲೆ ಬಾಗಿಲ ಕರೆಗಂಟೆ ಕಿರ್ರನೆ ಸದ್ದು ಮಾಡಿ ಕರೆ ನೀಡಿತು. ಮನೆ ಮನೆಯ ಕರೆಗಂಟೆಗಳೂ ಕಿರ್ರನೆ ಕೂಗುತ್ತಿರುತ್ತವೆ. ಎಷ್ಟೋ ಬಾರಿ ನೆರೆ ಮನೆಯ ಕರೆ ಇಲ್ಲೇ ಮೊಳಗಿದಂತಾಗಿ ಕದ ತೆರೆದದ್ದೂ ಉಂಟು. ಅಂತಲೇ ಮತ್ತೊಮ್ಮೆ ಖಚಿತಪಡಿಸಿಕೊಂಡಮೇಲೆ ಬಾಗಿಲು ತೆಗೆಯುವುದು ರೂಢಿ. ಇನ್ನೊಮ್ಮೆ ಕರೆಗಂಟೆ ಮೊಳಗುವವರೆಗೆ ಕಾದಿದ್ದು ಬಾಗಿಲು ತೆರೆದಳು ವಿನು ಮಯಿ. ಕಾಕಿಯುಡಪಿನ ಪೋಸ್ಟ್‌ಮನ್ ನಾಲ್ಕಾರು ಕಾಗದಗಳ ಸಹಿತ ನಿಂತಿದ್ದ. ಅವನಿಗೆ "ವಂದನೆ" ಹೇಳಿ ಕಾಗದಗಳನ್ನು ತೆಗೆದುಕೊಂಡು ಕದ ಮುಚ್ಚಿಕೊಂಡಳು. ಅದರಲ್ಲಿ ಒಂದು ತನ್ನ ಹೆಸರಿಗೆ. ಅಪರಿಚಿತ ಹಸ್ತಾಕ್ಷರ. ಯಾರದ್ದಿರಬಹುದು ? ಹಿಂದೆ ಮುಂದೆ ತಿರುಗಿಸಿ ನೋಡಿ ಒಡೆಯುವಾಗಲೇ ಮೈ ಜುಮು ಜುಮುಗುಟ್ಟಿತು. ಈ ಹಿಂದೆಯೂ ಕೆಲವು ಅಪರಿಚಿತ ಪತ್ರ ಗಳು ಬಂದಿದ್ದುವು. ಅವು ಹೊತ್ತು ತಂದುದು ವಿರಾಜನ ಮೇಲೆ ಹಲವಾರು ದೂರು ! ಓದಿ ನೋಡಿದರೆ ಇಂದೂ ಅದೇ ಹಾಡೇ...ಅಯ್ಯೋ ದೇವರೇ !

ಅದರಲ್ಲಿದ್ದುದು ನಾಲ್ಕೇ ಪಂಕ್ತಿ. ವಿರಾಜ್ ಎರಡು ಜಡೆಯ ಹುಡುಗಿಯೊಂದಿಗೆ ದುರ್ವ್ಯವಹಾರ ನಡೆಸುತ್ತಿದ್ದಾನೆಂದು ಸುದ್ದಿ ! ಈ ಸುದ್ದಿ ಇಂದು ನಿನ್ನೆಯದಲ್ಲ. ಅಂದಿನಿಂದಲೂ ಕೇಳಿ ಬರುತ್ತಿದೆ. ಮನ ಸ್ಸಿಗೆ ಅದೊಂದು ಹಿರಿಯ ದುಃಖ. ಯಾವುದೋ ಕಾಣದ ಕೈಗಳು ಹೃದಯವನ್ನು ಮೆಲ್ಲನೆ–ಬಹುಮೆಲ್ಲನೆ ಹಿಂಡತೊಡಗಿದವು. ಮೈಯಲ್ಲಿನ ಶಕ್ತಿ ಸಮಸ್ತವೂ ಕರಗಿ ನೀರಾಗಿ ಹರಿದು ಹೋದಂತೆ ಭಾಸವಾಯಿತು. ಹಾಗೇ ಪಲ್ಲಂಕದ ಮೇಲೆ ಕುಸಿದು ಕುಳಿತಳು.

ವಿರಾಜನಿಗೆ ಎಷ್ಟು ಬಾರಿ ಹೇಳಲಿಲ್ಲ ? ನೂರು ಬಾರಿ ಸಾವಿರ ಬಾರಿ ಹೇಳಿದ್ದಾಯ್ತು. ಕಾಡಿದ್ದಾಯ್ತು. ಬೇಡಿದ್ದಾಯ್ತು. ಆದರೂ ವಿರಾಜ್ ಮಣಿಯುವವನಲ್ಲ. ಕುದುರೆ ಜೂಜು, ಕ್ಲಬ್ಬುಗಳ ಸಹವಾಸದಲ್ಲಿ ಈ ಹವ್ಯಾಸವನ್ನೂ ಹಚ್ಚಿಕೊಂಡಿದ್ದ. ಅದು ಇಂದಿಗೂ, ಎಂದಿಗೂ ಬಗೆ ಹರಿಯುವ ಪ್ರಶ್ನೆಯಲ್ಲ. ಹೇಳಿ ಕೇಳಿ ಜೀವ ಸೋತು ಹೋಗಿದೆ. ಮನಸ್ಸು ದಣಿದಿತ್ತು. ಕಾಗದವನ್ನು ಮತ್ತೆ ಮತ್ತೆ ತಿರುಗಿಸಿ ನೋಡಿದಳು. ಯಾರ ಹಸ್ತಾಕ್ಷರವೋ ದೇವರಿಗೇ ಗೊತ್ತು. ಊರು ಹೆಸರುಗಳೊಂದೂ ಇರಲಿಲ್ಲ.

ಒಮ್ಮೆ ಅದನ್ನು ಮುದುಡಿಸಿ ಎಸೆಯೋಣವೆನ್ನಿಸಿದರೂ ಮತ್ತೆ ಏನೋ ಯೋಚನೆ ಬಂದು ಪುಸ್ತಕದಡಿಯಲ್ಲಿಟ್ಟಳು. ಮುಖ ಮೈಗಳಲ್ಲಿ ಬೆವರು ಬಸಿಯಿತು. ಹಣೆಯ ಮೇಲೆ ಹನಿಗಳು ತುಂತುರು ತುಂತುರಾಗಿ ಮೂಡಿದುವು.

ಹೊರಗಡೆಯ ಗದ್ದಲವೆಲ್ಲ ಒಮ್ಮೆಲೇ ಎದೆಯೊಳಕ್ಕಿಳಿದಂತಾಯಿತು.

ಆದರೆ ಅದು ಇಂದು ನಿನ್ನೆಯದೇ ? ಏತಕ್ಕಾಗಿ ದುಃಖ ? ಎಷ್ಟು ಬಾರಿ ಆತನೊಡನೆ ತರ್ಕವಿತರ್ಕ ಹೂಡಲಿಲ್ಲ ? ಎಷ್ಟು ಬಾರಿ ಬುದ್ಧಿ ಹೇಳಲಿಲ್ಲ ? ವಿರಾಜ್ ಕಲಿಯದವನೇ ? ಅಥವಾ ನಿನ್ನೆ ಮೊನ್ನೆಯ ಕೂಸೆ ? ಇರುಳು ಕಂಡ ಬಾವಿಗೆ ಹಗಲು ಧುಮುಕುವ ಸಾಹಸಿಗರಿಗೆ ಮಾಡುವುದೇನು ?

...ಆದರೂ....

"ನೀವು ಕಲಿತವರಾಗಿ ತಿಳಿದವರಾಗಿ ಹೀಗಾದರೆ ಹೇಗೆ ವಿರಾಜ್ ?"

ಅಂದು ತಾನೆಂದಾಗ ಬಂದ ಉತ್ತರವಾದರೂ ಎಂಥಾದ್ದು ?

"ಇದೆಲ್ಲಾ ಅಪಾರ್ಥ ವಿನೂ ! ಕೆಲಸವಿಲ್ಲದ ಜನಕ್ಕೆ ಸುದ್ದಿ ಹರಡುವುದೇ ಒಂದು ಉದ್ಯೋಗ !"

"ಸರಿ, ಸರಿ. ಇದರಿಂದ ಅವರ ಹೊಟ್ಟೆ ತುಂಬುವುದೇ ?"

"ಹೊಟ್ಟೆ ತುಂಬ ಬೇಕಾಗಿಲ್ಲ. ಮನಸ್ಸಿಗೆ ಹಿತವಾದರೆ ಸೈ."

"ನಿಮಗಾಗಿ ನಾನು ಎಂತಹ ತ್ಯಾಗಕ್ಕಾದರೂ ಸಿದ್ಧಳಾಗುವೆ. ನೀವು ನನಗಾಗಿ ಏನಾದರೂ ತ್ಯಾಗಮಾಡಬಲ್ಲಿರಾ ?"

"ನಿನ್ನ ಬಯಕೆ ಏನೆಂಬುದನ್ನು ತಿಳಿಯಬಹುದೇ ?"

"ಮೊದಲು ನೀವು ಮಾತು ಕೊಡಿ."

"ನಾನು ಹಗಲೆಲ್ಲ ದುಡಿಯುವ ವ್ಯಕ್ತಿ. ನಿನ್ನಂತೆ ಮನೆಯಲ್ಲಿ ಆರಾಮವಾಗಿ ಕಳೆಯುತ್ತಿದ್ದಲ್ಲಿ ನನಗೆ ಯಾವ ಹವ್ಯಾಸವೂ ಬೇಕಿರಲಿಲ್ಲ. ಕೆಲಸ ಮುಗಿದ ನಂತರ ಬಹಳವಾಗಿ ದಣಿದ ಮೈಗೆ ಏನಾದರೂ ಅಲ್ಪ ಸ್ವಲ್ಪ ಸಿಹಿಕಾರ ಬೇಕೇ ಬೇಕಾಗುತ್ತೆ."

"ಸಿಹಿಕಾರ ನಮ್ಮಲ್ಲೇ ಇರುವಾಗ ಎಂಜಲಿಗೇಕೆ ಕೈ ಚಾಚಬೇಕು? ಸಿಹಿಕಾರಗಳ ಚಟಕ್ಕಿಂತ..." ಮಾತನ್ನು ಮುಂದುವರಿಯಗೊಡದಂತೆ ನಡುವೆ ಬಾಯಿ ಹಾಕಿದ ವಿರಾಜ್.

"ದಿನಾ ಅಂಬಲಿಯುಣ್ಣುವುದಾದರೆ ಯಾರಿಗೆ ಹಿತ?"

"........."

"ನಿನಗೆ ಇದೆಲ್ಲಾ ಅರ್ಥವಾಗುವುದಿಲ್ಲ ಸುಮ್ಮನಿರು."

"ದಯಮಾಡಿ...."

"ನನಗೆಲ್ಲಾ ಗೊತ್ತು. ನೀನು ಇದರಲ್ಲಿ ತಲೆ ಹಾಕುವ ಅಗತ್ಯ ವಿಲ್ಲ."

"ವಿರಾಜ್! ನೀವು ಕೇಳಬಹುದು ಬಿಡಬಹುದು, ಹೇಳುವುದು ನನ್ನ ಧರ್ಮ!"

"ಹ್ಞೂ....ಹೇಳಿಕೋ..."

ಈ ಕೇಳಿಕೆ ಬೇಡಿಕೆಗಳು ಎಷ್ಟು ಬಾರಿ ನಡೆಯಲಿಲ್ಲ? ಎಷ್ಟು ಕಂಬನಿಯು ಕೋಡಿ ಹರಿಯಲಿಲ್ಲ? ತಿದ್ದಿಕೊಳ್ಳುವ ವ್ಯಕ್ತಿಯಾಗಿದ್ದರೆ ಎಂದೋ ತಿದ್ದಿಕೊಳ್ಳಬಹುದಾಗಿತ್ತು. ಆದರೂ ಮನಸ್ಸು ಮಣಿಯಲಿಲ್ಲ, ಬುದ್ಧಿ ಬೆಳೆಯಲಿಲ್ಲ. ರೇಸಿನಲ್ಲಿ ಲಕ್ಷಗಟ್ಟಲೆ ಕಳೆದುದೂ ಉಂಟು. ಗಳಿಸಿದುದೂ ಉಂಟು. ಜೊತೆಗೆ ವಿಸ್ಕಿ ಸೀಸೆಗಳೂ ಬರಿದಾಗುತ್ತಿದ್ದುವು. ಮಡದಿಯ ದೀನ ಬೇಡಿಕೆಗೆ ಅವನ ದೈನ್ಯ ಉತ್ತರ ಮೊಳಗುತಿತ್ತು. "ವಿನೂ, ನಾನು ಕಳೆದ ಹಣವನ್ನೆಲ್ಲ ಮರಳಿ ಪಡೆದೆನೆಂದರೆ ಮುಗಿಯಿತು. ಕುದುರೆ ರೇಸಿಗೆ ಶರಣು ಹೊಡೆದುಬಿಡುವೆ! ಅನಂತರ ನನಗೆ ಅದರ ಹವ್ಯಾಸ ಬೇಡವೇ ಬೇಡ!"

ಆದರೆ...!

ವಿರಾಜ್ ಬೆಳಿಗ್ಗೆ ಮನೆ ಬಿಟ್ಟರೆ ರಾತ್ರಿ ಹನ್ನೊಂದು ಹನ್ನೆರಡರ ಮೇಲೆ ಮನೆಗೆ ಮರಳುತ್ತಿದ್ದ. ಎಂದಾದರೊಮ್ಮೆ ಸಂಜೆಯ ಹೊತ್ತು ಮಡದಿಯೊಡನೆ ಕಳೆದರೆ ಮುಗಿಯಿತು. ಊಟ ಆಫೀಸಿಗೆ ಬರುತಿತ್ತು. ಚಹಕ್ಕೆ ನಟರಾಜ ಹೋಟೆಲ್ ತಪ್ಪದೆ ಸಹಕಾರ ನೀಡುತ್ತದೆ. ಅಂದ ಮೇಲೆ ಮನೆಗೆ ಹೋಗುವುದೇನಿದೆ? ಸಮಯ ಬಿದ್ದರೆ ಮನೆಗೆ ಹೋಗಿ

ಮುಖ ಮಾರ್ಜನ ಮಾಡಿ ಬಟ್ಟೆ ಬದಲಿಸಿ ಕ್ಲಬ್ಬುಗಳ ಕಡೆ ತೆರಳುತ್ತಿದ್ದ. ವಿನುಮಯಿಗೆ ವಿರಾಜನ ರೀತಿ ನೀತಿಗಳನ್ನು ಕಂಡುಕೊಳ್ಳಲು ಬಹಳ ದಿನಗಳು ಬೇಕಾಗಲಿಲ್ಲ. ಮನನೊಂದು ಅವಳು ಕ್ಲಬ್ಬಿಗೆ ಶರಣು ಹೊಡೆದದ್ದೇನೋ ಆಯಿತು. ಆದರಿಂದ ಹಾದಿಯುಲ್ಲಿದ್ದ ಕಲ್ಲು ಮುಳ್ಳುಗಳು ಮತ್ತಷ್ಟು ಅರುಗಾದವು. ವಿರಾಜ್ ತನ್ನ ವಿಲಾಸೀಜೀವನದಲ್ಲಿ ದಿಟ್ಟ ಹೆಜ್ಜೆ ಇಟ್ಟ. ವಿನುಮಯಿಗೆ ಏಕಾಂಗಿ ಜೀವನ ಬೇಸರವೆನಿಸಿ ಬೆಂಗಳೂರಿಗೆ ಹೋಗುವ ಯೋಚನೆ ಮೇಲಿಂದ ಮೇಲೆ ಮೂಡುತ್ತದೆ. ಅದಕ್ಕೆ ವಿರಾಜನದು ಒಂದೇ ಉತ್ತರ—

"ನನಗೆ ಹೋಟೆಲ್ ಊಟ ಆಗುವುದಿಲ್ಲ ವಿನೂ ...!"

ಈ ಸಲ ವಿನುಮಯಿಯ ಬೇಡಿಕೆಯನ್ನು ತಳ್ಳಿ ಹಾಕುವಂತಿರಲಿಲ್ಲವಾದ್ದರಿಂದ ಒಪ್ಪಿಗೆಯ ಮುದ್ರೆ ಬಿದ್ದಿತು. ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿಗೆ ಕೊಟ್ಟಿದ್ದಾರೆಂಬುದು ವಿನುಮಯಿಗೂ ಗೊತ್ತು. ಗಮನಿಸಿದರೂ ಗಮನಿಸದಂತಿರುವುದು ಕ್ಷೇಮ ಎನ್ನುತ್ತದೆ ಎದೆಯ ಹಕ್ಕಿ. ಹಲವಾರು ಚಿಂತೆಗಳ ಬೀಡಾದ ಮನಸ್ಸು ಬೆಂಗಳೂರನ್ನು ಬಹಳವಾಗಿ ಬಯಸುತ್ತಿತ್ತು. ಅಲ್ಲಿನ ಜೀವನ ನಿರ್ಮಲವಾಗಿ ಸಂತಸಪೂರ್ಣವಾಗಿ ಅಮೃತೋಪಮವಾಗಿ ಮನವನ್ನು ಸೆಳೆಯುತ್ತದೆ. ಏಳು ವರ್ಷಗಳ ದಾಂಪತ್ಯ ಜೀವನದಲ್ಲಿ ಮಕ್ಕಳ ಭಾಗ್ಯವೂ ಬಂದಿರಲಿಲ್ಲ. ಆ ಬಯಕೆಯೂ ಉಂಟಾಗಲಿಲ್ಲ. ಇನ್ನೂ ಕೆಲವು ವರ್ಷಗಳು ಕಳೆದು ವಿರಾಜನ ಬುದ್ಧಿ ತಿಳಿಯಾದ ಮೇಲೆ ಮಕ್ಕಳನ್ನು ಪಡೆಯುವುದಾದರೆ ನಿಜವಾಗಿಯೂ ಮಹಾಭಾಗ್ಯ ಎನ್ನುತ್ತದೆ ಅಂತರಂಗ. ಮನಸ್ಸೂ ಸಾನಯದಿಂದ ಒಪ್ಪಿಕೊಳ್ಳುತ್ತಿತ್ತು.

ಮಿಸಾನ ಮೂರು ವರ್ಷಗಳ ಹಿಂದೆ ಗೃಹಿಣಿಯಾಗಿ ಮುಂಬೈಗೆ ಬಂದ ಮೇಲೆ ಇನ್ನೊಬ್ಬ ಗೆಳತಿಯನ್ನು ಸಂಪಾದಿಸಿಕೊಂಡಳು ವಿನುಮಯಿ. ಮಿಸಾನ ವಿರಾಜನಿಗೆ ದೂರದ ಅಕ್ಕನ ಮಗಳು. ಅವಳನ್ನು ವಿರಾಜನಿಗೆ ಕೊಡಬೇಕೆಂದು ಅಕ್ಕ ಭಾವಂದಿರ ಪ್ರಯತ್ನವೂ ನಡೆದಿತ್ತು. ಆದರೆ ವಿರಾಜನ ಒಲವು ವಿನುಮಯಿಯ ಕಡೆಗೆ ವಾಲಿದುದರಿಂದ ಅಕ್ಕ ಭಾವಂದಿರು ನಿರಾಶರಾಗಿದ್ದರು. ಆ ಹಳೆಯ ಘಟನೆಯಿಂದಾಗಿ ಮಿಸಾನಳಿಗೆ

ಸಂಕೋಚ. ಮೊದಮೊದಲು ವಿನುಮಯಿ ಒತ್ತಾಯಪೂರ್ವಕವಾಗಿ ಮನೆಗೆ ಎಳೆದೊಯ್ಯುತ್ತಿದ್ದಳು. ಕ್ರಮೇಣ ಮಿಾನ ಸಂಕೋಚವನ್ನು ಬದಿಗಿಟ್ಟು ಮಾಮ ಮತ್ತು ವಿನೂ ಮಾಮಿಯರೊಡನೆ ಸ್ವಚ್ಛಂದವಾಗಿ ಬೆರೆಯತೊಡಗಿದಳು. ಮಾತಿಗೆ ಮೊದಲೇ ಕುಲುಕುಲು ನಗುವ ಸ್ವಭಾವದ ಹುಡುಗಿ. ಮಾಟವಾದ ಮೈಯಿನ ಅಂದವಾದ ಅವಳು ಅತ್ಯಂತ ಚಟುವಟಿಕೆಯ ಹೆಣ್ಣು. ಹಾಲ್ಗಲ್ಲದ ಮೇಲೆ ಹೂ ನಗೆಯನ್ನು ಚೆಲ್ಲುತ್ತಾ ಬಂದಳೆಂದರೆ ತಲೆ ಬಾಗಿಲವರೆವಿಗೂ ಹೋಗಿ ಎದುರುಗೊಳ್ಳು ವಷ್ಟು ಮನಸ್ಸು ಅರಳುತಿತ್ತು. ಇಲ್ಲೇ ಎಲ್ಲಾದರೂ ಹತ್ತಿರದಲ್ಲಿ ಮನೆ ಸಿಕ್ಕಿದರೆ ಅವಳಿಗೂ ತನಗೂ ಬಹಳ ಹೊಂದಿಕೆಯಾಗುತಿತ್ತು ಎಂಬಷ್ಟು ಆಸೆ ವಿನುಮಯಿಗೆ. ಮಿಾನಳಿಗೂ ಅಷ್ಟೇ ಹಿತ. ಇಬ್ಬರಿಗೂ ಕೈ ಬಿಡುವು ಇರುವಾಗ ಬೆಂಗಳೂರಿನ ವಿಷಯಗಳು ಚರ್ವಿತ ಚರ್ವಣವಾಗು ತ್ತಿದ್ದುವು. ಪರಸ್ಪರ ಹಿತಾಹಿತಗಳನ್ನು ಕುರಿತು ವಿಚಾರ ವಿನಿಮಯಗಳಾಗು ತ್ತಿದ್ದುವು.

ಹೊತ್ತು ಗೊತ್ತುಗುರಿಯಿಲ್ಲದೆ ಓಡಿತು. ನಡುನೆತ್ತಿಯ ಮೇಲೆ ಸೂರ್ಯ ಧಳ ಧಳ ಉರಿಯ ಹತ್ತಿದ.

ಹದ್ದು ಕಾಗೆ ಗುಬ್ಬಿಗಳು ಅಲ್ಲಲ್ಲೆ ಹಾರಾಡಿ ತಿಂಡಿ ತಿನಿಸುಗಳಿಗಾಗಿ ಹೊಂಚು ಹಾಕುತ್ತಿವೆ. ಮಂಗಗಳ ಹಿಂಡೂ ಸಮಯ ಸಾಧಿಸಿ ಕೈಗೆ ಸಿಕ್ಕಿದುದನ್ನು ಎತ್ತಿಕೊಂಡು ಓಡುತ್ತಿವೆ.

ಸ್ವಾರ್ಥಕ್ಕಾಗಿ ಏನೆಲ್ಲ ಮಾಡುತ್ತೆ ಈ ಜಗತ್ತು ?

ಮನಸ್ಸು ಚಿಂತೆಯ ಬೀಡಾಗಿದ್ದರೂ ಹೊಟ್ಟೆ ಹಸಿವಿನಿಂದ ಘೇಳಿ ಟ್ಟಿತು. ಒಬ್ಬಳೇ ಉಣ್ಣುವುದು ಬೇಸರವೆನ್ನಿಸಿದಾಗ ತಟ್ಟೆಯನ್ನು ಕೈಯಲ್ಲಿಟ್ಟುಕೊಂಡು ಕಿಟಕಿಯಿಂದ ಕಿಟಕಿಗೆ ಚಲಿಸುತ್ತಾ ಊಟ ಮಾಡು ವುದು ರೂಢಿ. ಹೊತ್ತು ನೆತ್ತಿಗೇರಿ ಬಿಸಿಲು ರಣಗುಡಿಯುತ್ತಿದ್ದರೂ ರಸ್ತೆ ಯಲ್ಲಿ ಜನಸಂದಣಿ ಕಡಿಮೆಯಾಗಿರಲಿಲ್ಲ. ಬಣ್ಣ ಬಣ್ಣದ ಕಾರುಗಳು ಭರ್ರನೆ ಹರಿಯುತ್ತಿವೆ. ಬಸ್ಸು ಟ್ರಾಮುಗಳ ಗದ್ದಲವೂ ಕಿವಿಗೆ ಎರಕ ಹೊಯ್ದಂತೆ ಬೀಳುತ್ತಿದೆ. ಅಲ್ಲಿಂದ ನೋಟ ಶಿವಾಜಿ ಪಾರ್ಕ್ ಕ್ರಾಫರ್ಡ್ ಮಾರ್ಕೆಟ್ ಕಡೆ ಹರಿಯಿತು. ಅಲ್ಲಿಯೂ ಬಣ್ಣಿಸಲಾಗದ ಜನ ಸಂದಣಿ.

ನೋಟ ಪುನಃಪುನಃ ಅತ್ತಲೇ ಹರಿದಾಡಹತ್ತಿತ್ತು. ಹೊತ್ತು ಕಳೆಯಲ್ಲ ಬೇರೆ ದಾರಿಯಿಲ್ಲದ ಹೆಣ್ಣಿಗೆ ಹಾಗೆ ನೋಡುತ್ತಾ ನಿಲ್ಲುವುದು ಎಷ್ಟೋ ಹಿತ.

ಊಟ ಮುಗಿಯಿತು. ಬಸಿ ಬಟ್ಟಲುಗಳನ್ನು ತೊಳೆದಿಟ್ಟಳು.

ಟ್ರಣ್, ಟ್ರಣ್, ಟ್ರಣ್, ಟ್ರಣ್.

"ಹಲೋ...! "

"ಹಲೋ ವಿನೂ !?

"ಓ...ಊಟ ಆಯಿತೆ ನಿಮ್ಮದು ?"

"ಹೌದು. ನೀನಿಂದು ಹೊರಡಲೇಬೇಕೆ ?"

"ಈಗಲೂ 'ಹೋಗುವುದಿಲ್ಲ' ಅಂದರೆ ಸಾಕಾಗಿದೆಯೇನೋ ನಿಮಗೆ ?"

"ನಿಜ, ವಿನೂ, ಮದುವೆಗೆ ಇಷ್ಟು ದೂರದಿಂದ ಹೋಗಬೇಕೆ ? ಹತ್ತಿರವಿದ್ದವರು ಕೂಡಿ ಮಾಡಿಕೊಳ್ಳುತ್ತಾರೆ. ದೂರದಲ್ಲಿರುವವರಿಗೇಕೆ ತೊಂದರೆ ? ಬೇಸಿಗೆ ಸುಮಾರಿಗೆ ನಾವಿಬ್ಬರೂ ಹೋದರಾಯಿತು. ಈಗ ನೀನೊಬ್ಬಳೇ ಪ್ರಯಾಣ ಮಾಡುವ ತೊಂದರೆ ಬೇರೆ. ನಿನ್ನೊಂದಿಗೆ ಮಿನಾ ಬರುವ ಹಾಗಿದ್ದರೆ ತೊಂದರೆ ಇರಲಿಲ್ಲ."

" ನೀವು ಮನಸ್ಸು ಮಾಡಿದರೆ ಈಗಲೂ ಅವಳನ್ನು ಹೊರಡಿಸ ಬಹುದು."

"ಹ್ಞಾ.... ಹ್ಞಾ ! ಐನೂರು ರೂಪಾಯಿಗಳ ಗಂಟೆಂದರೆ ಸಾಮಾನ್ಯವಲ್ಲ. ಹೆಂಗಸರಿಗಿನ್ನೇನು ! ದುಡ್ಡು ಕಾಸಿನ ಬೆಲೆ ತಿಳಿಯು ತ್ತದೆಯೆ ? ತಿರುಗಿ ತಿಂದು ಮಜಾ ಮಾಡಿದರೆ ಸರಿ."

"ಪರವಾಯಿಲ್ಲ ನೀವು ! ಐದು ವರ್ಷಕ್ಕೊಮ್ಮೆ ಹೊರಟರೂ ಹೀಗೆಂದರೆ ಆಯಿತು. ಹಾಗೆ ನಾವೇನು ಜೀವರಹಿತರೇ ? ನಮ್ಮ ಕುಟುಂಬ ಅಂದರೆ ನಮಗೆ ಆಸೆ ಇಲ್ಲವೇ ? ನೀವು ಅದೆಷ್ಟು ಬಾರಿ ನಿಮ್ಮ ವರನ್ನು ನೋಡುವುದಿಲ್ಲ ?"

"ಹತ್ತಿರ."

"ದೂರ ಅಂತಲೇ ಐದು ವರ್ಷಕ್ಕೊಮ್ಮೆ ಊರಿಗೆ ಹೊರಡುವ ಏರ್ಪಾಡು."

"ನೀನಿನ್ನು ತಿಂಗಳುಗಟ್ಟಲೆ ಇದ್ದುಬಿಡುತ್ತಿ. ಊಟಕ್ಕೂ ತೊಂದರೆ, ಒಬ್ಬನೇ ಇರುವುದೂ ಬೇಸರ."

"ನೀವೊಂದು ತಿಂಗಳು ಇರಲು ಬೇಸರ ಎನ್ನುತ್ತಿದ್ದೀರಿ. ನಾನು ಏಳು ವರ್ಷಗಳಿಂದ ಒಬ್ಬಳೇ ಇರಬೇಕಾದರೆ ಎಷ್ಟು ಬೇಸರ ಪಟ್ಟಿರ ಲಿಕ್ಕಿಲ್ಲ ?"

"ಹೆಂಗಸರಿಗೇನು ? ನೆರೆಹೊರೆಯವರೊಂದಿಗೆ ಹರಟೆಯಲ್ಲಿ ಹೊತ್ತು ಕಳೆಯುತ್ತೀರಿ ! ನಮ್ಮ ಹಾಗೋ ?"

"ನೀವು ಹೆಣ್ಣಾಗಿ ಹುಟ್ಟಿದ್ದಿದ್ದರೆ ನಮ್ಮ ಕಷ್ಟ ನಿಮಗೆ ತಿಳಿಯು ತ್ತಿತ್ತು."

"ಪಾಪ, ಬಹಳ ಕಷ್ಟ." ದನಿ ರಾಗವಾಗಿ ಹೊರಬಿತ್ತು.

"ಹೋಗಲಿ. ಈಗ ಮಿನಾನಾಗೊಂದು ಟಿಕೆಟ್ ಕೊಡಿಸುವಿರಾ ?"

"ಒಳ್ಳೆ ಚೆನ್ನಾಗಿದೆ ! ಹಣ ಆಕಾಶದಿಂದ ಉದುರುವ ವಸ್ತುವಲ್ಲ ! ಅವಳಲ್ಲಿರಲಿ ಬಿಡು. ನನಗೆಂದಾದರೂ ಬೇಸರವಾದರೆ ಹೋಗಿ ಉಂಡು ಬರ ಬಹುದು ! ಹಿಹ್ಹಿಹ್ಹೀ !"

"ಪರವಾಯಿಲ್ಲ ! ಅವಳು ಅದಕ್ಕೆಲ್ಲಾ ಬೇಕು ! ನಾನವಳಿಗೆ ಹೇಳಲೇ ?"

"ಹೇಳು !" ಕಿಲಕಿಲಿ ನಗು ಹೊರಹೊಮ್ಮಿತು.

"ಮಹಾ ಸ್ವಾರ್ಥಿ !"

"ಈಗ ಹೇಳು. ಟಿಕೆಟ್ ತೆಗೆದುಕೊಳ್ಳುವುದೇ ? ಬೇಡವೇ ?"

"ತೆಗೆದುಕೊಳ್ಳಿ. ನಾನು ಹೋಗಲೇಬೇಕು !"

"ಸರಿ."

"ಸಂಜೆಯಲ್ಲಿ ನಾನೊಂದಿಷ್ಟು ಷಾಪಿಂಗ್ ಹೋಗುವುದಿದೆ, ಬರು ವಿರಾ ?"

"ಇಂದು ಸಾಧ್ಯವೇ ಇಲ್ಲ. ಬಸ್ಸಿನಲ್ಲಿ ಹೋಗು."

"ಸರಿ."

" ಟಾ ಟಾ !" ಎನ್ನುತ್ತಾ ವಿರಾಜ್ ರಿಸೀವರನ್ನು ಕೆಳಗಿಟ್ಟ.

ಹಿಡಿದಿಟ್ಟ ಉಸಿರೆಲ್ಲಾ ಒಂದೇ ಬಾರಿಗೆ ಹೊರ ಹರಿದು ಬಂತು.

ವಿರಾಜ್ ಒಂದೆರಡು ದುರ್ಬಲತೆಗಳನ್ನು ತಿದ್ದಿಕೊಂಡಲ್ಲಿ ಎಂತಹ ಗೌರವವಿತ್ತು...ಇಲ್ಲೊಂದು ಮನೆ ಕಟ್ಟಲು ಹೇಗಾದರೂ ತೊಡಗಿಸಿದರೆ ಕೈಯಲ್ಲಿ ಒಡಾಡುವ ಹಣನೆಲ್ಲ ಅದರ ಮೇಲೆ ಬೀಳುತ್ತೆ. ಕೈತುಂಬ ಕೆಲಸ ವಾಗುವುದರಿಂದ ಹಾಳು ಹವ್ಯಾಸಗಳಲ್ಲಿ ತಲೆಹಾಕಲು ಬಿಡುವೂ ಆಗುವು ದಿಲ್ಲ. ಮನೆ ಇದ್ದರೆ ಒಂದು ಆಸ್ತಿ ಇದ್ದ ಹಾಗೂ ಆಯಿತು. ಬುದ್ಧಿ ಬಂದ ಹಾಗೂ ಆಯಿತು. ಒಳ್ಳೆಯದಾದರೆ ಯಾರಿಗೆ ಬೇಡ ? ಭಗವಂತ ಅವರನ್ನು ದಾರಿಗೆ ಹಚ್ಚಿದರೆ ಸಾಕು....

o o o o

ಕ್ಹೂಊಊಊ ! ಕ್ಹೂಊಊಊ !

ಮಂಗೇಶ್ ಮಿಲ್ಲಿನ ಸೈರನ್ ಕರ್ಣ ಕಠೋರವಾಗಿ ಮೊಳಗಿತು.

ಹೊತ್ತು ಮೂರರ ಸಂಖ್ಯೆಯ ಅಂಚನ್ನು ದಾಟಿತು. ಮಧ್ಯಾಹ್ನದ ಉರಿ ಬಿಸಿಲ ಝಳ ಮೈಯಲ್ಲಿ ಒಂದೇ ಸಮನೆ ಬೆವರಿನ ಹೊಳೆಯನ್ನು ಬರಿ ಸುತ್ತಿದೆ. ಶುದ್ಧ ಬಿಳಿಯ ಬಟ್ಟೆಗಳನ್ನು ವಿನಾ ಬೇರೆ ಬಟ್ಟೆಗಳನ್ನುಡಲು ಮನಸ್ಸಾಗದಂತಹ ಬೆವರಿನ ಮಹಾ ಮಾಘಸ್ನಾನ.

ವಿನುಮಯಿ ಒಗೆದ ಬಟ್ಟೆಬರೆಗಳನ್ನು ಮಡಿಸ ಹತ್ತಿದಳು. ಕೈ ಕೆಲಸ ಮಾಡುತ್ತಿದ್ದರೂ ತಲೆ ಹಲವಾರು ಯೋಚನೆಗಳ ಬೀಡಾಗಿತ್ತು. ಮನಸ್ಸಿಗೆ ಶಾಂತಿ ಇಲ್ಲದ ಮೇಲೆ ಏನಿದ್ದರೇನು ? ವಿರಾಜ್ ಏಕೆ ಹೀಗಾ ದರು ? ಕಾರ್ಯಾಕಾರ್ಯಗಳ ಹಿತಾಹಿತಗಳ ವಿವೇಚನೆ ಇದ್ದೂ ಹೀಗಾದರೆ ಹೇಗೆ ?

ಕಣ್ಣುಗಳಲ್ಲಿ ಕಂಬನಿಗಳು ಮೆಲ್ಲನೆ ಮೊಳದುವು.

ವಿರಾಜ್ ಉದ್ದಿಮೆ ಕ್ಷೇತ್ರದಲ್ಲಿ ಚಾಣಾಕ್ಷ ವ್ಯಕ್ತಿ. ಮೋಲ್ಪ್ಲಾಸ್ ಕಂಪನಿಯ ಡೈರೆಕ್ಟರು. ಹಲವಾರು ಹಿರಿಯ ಸಂಸ್ಥೆಗಳ ಷೇರುಗಳನ್ನು ಕೊಂಡಿದ್ದ. ಕೆಲವಾರು ಕಂಪನಿಗಳಲ್ಲಿ ಪಾಲುದಾರನಾಗಿದ್ದ. ಸ್ವತಃ ತಾನೇ ಯಾವುದನ್ನೂ ಹೊತ್ತಿರಲಿಲ್ಲವಾಗಿ ಕೈಗೆ ಸಾಕಷ್ಟು ಬಿಡುವು. ಕೆಲಸ ಮಾಡಲಿ ಬಿಡಲಿ ಡಿವಿಡೆಂಡ್ ಬರುತಿತ್ತು. ಜೂಜು ಕಟ್ಟೆಗಳಲ್ಲಿ

ಕಳೆದರೂ ಪೇಯ ಸಮುದ್ರದಲ್ಲಿ ಮುಳುಗಿದರೂ ಗೆಳೆತಿಯರ ಮನರಂಜನೆ ಗೈದರೂ ತನ್ನ ಹೊಟ್ಟೆ ಬಟ್ಟೆಗಳಿಗೆ ಹಣ ಕೊರತೆ ಬೀಳುತ್ತಿರಲಿಲ್ಲ. ಮೇಲಾಗಿ ತನಗೂ ಸ್ವರ್ಗಕ್ಕೂ ಮೂರೇ ಗೇಣು ಎಂಬಷ್ಟು ಮೈಯ್ಯಲ್ಲಿ ಉತ್ಸಾಹ.

ಎಂದಾದರೂ ವಿನುಮಯಿ ಕಾಡಿಬೇಡಿದರೆ ಗೋಳಿಟ್ಟು ಕಂಬನಿ ಮಿಡಿದರೆ ಸಾಂತ್ವನಗೈಯುವ ದನಿಯಲ್ಲಿ "ಕೆಲವು ದಿನ ತಾಳಿಕೋ, ಕಳೆದ ಹಣವನ್ನಿಷ್ಟು ಗಳಿಸಿಕೊಳ್ಳುವೆ" ಎನ್ನುತ್ತಿದ್ದ.

ಆದರೆ ವಿರಾಜ್ ಆದಿ ಅಂತ್ಯಗಳನ್ನೆಂದೂ ಅರಿಯ. ಪುನಃ ಕಾಡಿ ಬೇಡಿದರೆ ಉತ್ತರ ಕಟುವಾಗಿ ಹೊರಬೀಳುತ್ತಿತ್ತು.

"ನಿನಗೇಕೆ ಇದೆಲ್ಲಾ. ನಿನ್ನ ಪಾಡಿಗೆ ನೀನು ಬಿದ್ದಿರು,"

"ಒಂದಲ್ಲ, ಹತ್ತು ಬಾರಿ ನೀವು ಯೋಚಿಸಿ ನೋಡಿರಿ."

"ನನಗೆಲ್ಲಾ ಗೊತ್ತು, ನೀನೇನೂ ಹೇಳಲೇಬೇಕಾಗಿಲ್ಲ."

"ನಾನು ಹೇಳಿಯೇ ಹೇಳುವೆ. ಅದು ನನ್ನ ಕರ್ತವ್ಯ."

"ಹ್ಞೂ.......ಹೇಳಿಕೋ......"

"ಹೊರಗೆ ದುಡಿಯುವ ನಮಗೆ ಎಷ್ಟು ಚಿಂತೆಗಳಿರುತ್ತದೆಂಬುದು ನಿನ ಗೇನು ಗೊತ್ತು?" ಒಂದು ಗಳಿಗೆ ತಡೆದು "ಈ ಮನಸ್ಸಿಗೆ ಸ್ವಲ್ಪವಾದರೂ ರಂಜನೆ ದೊರೆಯದಿದ್ದರೆ ಹುಚ್ಚಾಗುವುದೆ ಸರಿ."

"ಈಗ ನಿಮ್ಮಂತೆ ಎಷ್ಟು ಮಂದಿ ಇಲ್ಲ ? ಎಲ್ಲರೂ ನಿಮ್ಮಂತೆ ಹಾಳು ಹವ್ಯಾಸಗಳಿಗಿಳಿಯುತ್ತಾರೆಯೆ ?"

"ನಿನಗೇನು ಗೊತ್ತು ? ಸುಖ ಸಂಪತ್ತು ಭೋಗ ಭಾಗ್ಯಗಳು ಕುಳಿತಲ್ಲಿಗೆ ಬಂದು ಬೀಳುವ ವಸ್ತುಗಳಲ್ಲ. ಮೈ ಮುರಿಯೆ ದುಡಿಯ ಬೇಕು."

"ಆದರೂ ವಿಚಾರ ಮಾಡಿ ವಿರಾಜ್."

"ಈಗ ನಿನಗಾಗಿರುವ ಕೊರತೆಯೇನು ? ಈ ಸಣ್ಣ ಸಣ್ಣ ವಿಚಾರ ಗಳಿಗೆಲ್ಲಾ ನೀನೇಕೆ ತಲೆ ಹಾಕಬೇಕು ?"

"........."

"ನನಗೂ ಗೊತ್ತು. ನಮ್ಮ ಅನೇಕ ವ್ಯಾಪಾರಗಳು ತಪ್ಪು ಎಂದು. ಆದರೂ ಬದುಕಬೇಕೆಂದರೆ ಸ್ವಲ್ಪವಾದರೂ ಮನರಂಜನೆ ಬೇಕು."

"ಕೊನೆಯ ಪಕ್ಷ .."

"ಹೇಳುವುದು ಬಹಳ ಸುಲಭ."

"..........."

"ನೋಡೋಣ, ಕಾಲ ಎಂದೂ ಒಂದೇ ತೆರನಾಗಿರುವುದಿಲ್ಲ."

ಆದರೂ ವಿರಾಜ್ ಮಣಿಯಲಿಲ್ಲ. ಪಥ ಬದಲಾಗಲಿಲ್ಲ.

ವಿಚಾರಗತ್ತರಿಯಲ್ಲಿ ಸಿಕ್ಕಿ ನಲುಗಿದಳು ವಿನುಮಾ. ಮನದಾಳದಲ್ಲಿ ಕಸಿವಿಸಿ ಮೂಡಿತು. ಕೈಗಳು ಯಾಂತ್ರಿಕವಾಗಿ ಕೆಲಸ ಮಾಡುತ್ತಿದ್ದುವು. ಕಣ್ಣುಗಳಲ್ಲಿ ಕಂಬನಿಯು ಧಾರಾಕಾರವಾಗಿ ಸುರಿಯಿತು. ಈ ಹಿಂದೆ ಈ ಪ್ರಕಾರ ಎಷ್ಟು ದೂರುಗಳು ಬಂದಿರಲಿಲ್ಲ ? ಆದರೆ ಇಂದೇಕೋ ಸಹಿಸಲಾರದಷ್ಟು ತಳಮಳ. ಎಂದೂ ಇಲ್ಲದ್ದು ಇಂದೇಕೆ ಹೀಗೆ ? ತನ್ನವ ರೆಡೆಗೆ ಹಾರಲಿರುವ ಮನಸ್ಸು ಮುಗಿಲಿನೆತ್ತರಕ್ಕೆ ಏರಿದರೂ ವಿಲಿ ವಿಲಿಗೊಂಡಿತು.

ಕದಡಿ ಬಗ್ಗಡವಾದ ಬಗೆಗಿಷ್ಟು ಶಾಂತಿಯನ್ನು ಪಡೆದುಕೊಳ್ಳ ಬೇಕೆಂದರೆ ಕೈಗೂ ಮನಸ್ಸಿಗೂ ಹಿತವಾಗಿರುವ ಕೆಲಸ ಹೊಂಚಿಕೊಳ್ಳ ದಿದ್ದಲ್ಲಿ ಸಾಧ್ಯವೇ ಇಲ್ಲ. ನನ್ನ ಚಿತ್ರ ಕಲೆಯನ್ನು ಊರ್ಜಿತಗೊಳಿಸಿ ಕೊಂಡಿದ್ದರೆ ನನ್ನ ಸೌಭಾಗ್ಯಕ್ಕೆ ಎಣೆಯೇ ಇರಲಿಲ್ಲ. ಛೀ ! ಛೀ ! ಎಂತಹ ಅನ್ಯಾಯ.......ಕಲೆಯನ್ನು ಕರಗತ ಮಾಡಿಕೊಂಡ ಅಮೂಲ್ಯ ಹಸ್ತಗಳು ಅಡುಗೆ ಮುಸುರೆಗಳಿಗೆ ಮೀಸಲಾಗಬೇಕೆ ? ನನ್ನ ಕಲೆಯನ್ನು ವಿರಾಜ್ ಬೆಳೆಯಗೊಟ್ಟಿದ್ದರೆ ಇಷ್ಟರೊಳಗಾಗಿ ನಾನೊಬ್ಬ ಶ್ರೇಷ್ಠ ದರ್ಜೆಯ ಕಲೆಗಾರ್ತಿಯಾಗುತ್ತಿರಲಿಲ್ಲವೇ ? ಎಲ್ಲಕ್ಕೂ ವಿರಾಜ್ ನಕಾರ ಹೊಡಿ ದರಲ್ಲ.... ? ತನಗೆ ಹಲವು ಹಾದಿಗಳನ್ನು ಹೊಂಚಿಕೊಂಡ ವ್ಯಕ್ತಿ ನಾನು ಬಯಸಿದ ಒಂದಕ್ಕೂ ಅನುಮತಿ ನೀಡಲಿಲ್ಲ. ಛೀ... ವಿರಾಜ್ ಕಲಿತವರು, ವಿಶಾಲ ಮನೋಭಾವನೆಯುಳ್ಳ ವ್ಯಕ್ತಿ ಎಂದು ತಿಳಿದಿದ್ದುದು ತಲೆಕೆಳಗಾಯಿತು. ಒಂದು ವೇಳೆ ವಿರಾಜ್ ಹಾಳು ಹವ್ಯಾಸಗಳಿಲ್ಲದೆ ನಿರ್ಮಲ ಜೀವನ ನಡೆಸಿದ್ದರೆ ನನ್ನ ಚಿತ್ರಕಲೆ ಮಣ್ಣು ಪಾಲಾದರೂ

ಯೋಚನೆ ಇರಲಿಲ್ಲ. ಬಾಳೇ ಅಮೃತ ಸೇಚನವಾಗುತ್ತಿತ್ತು ; ಸ್ವರ್ಗೋಪಮವಾಗುತ್ತಿತ್ತು.

ಆದರೆ ಆದ ಬಗೆ ?

ತಲೆಬಾಗಿಲ ಕರಗಂಟೆ ಕಿರ್ರನೆ ಸದ್ದು ಮಾಡಿ ಕರೆ ನೀಡಿತು. ಬಹುಶಃ ಮಿಣಾ ಬಂದಳೇನೋ ಎಂದುಕೊಳ್ಳುತ್ತಲೇ ಬಾಗಿಲಿಗೋಡಿದಳು. ಮುಖ ಅರಳಿತು. ಚಿಂತೆಯನ್ನು ಬದಿಗಿಟ್ಟು ಬಾಗಿಲು ತೆರೆದರೆ ಪ್ರತ್ಯಕ್ಷಳಾದುದು ನೆರೆಮನೆಯಜ್ಜಿ. ಉಬ್ಬಿದ ಹಲ್ಲನ್ನು ಪ್ರದರ್ಶಿಸುತ್ತಾ ಮೊಟ್ಟಮೊದಲೇ ಅವಳೆಂದಳು. "ನಮಗೆ ಅಗತ್ಯವಾಗಿ ಒಂದಿಷ್ಟು ಕಾಫೀಪುಡಿ ಬೇಕಾಗಿತ್ತು ಬಂದೆ. ತಂದ ಮೇಲೆ ಕೊಡುವೆ."

ಹಿಂದೆ ಇಂತಹ ಎಷ್ಟೋ ವಾಗ್ದಾನಗಳು ತಿರುಗಿ ಬಾರದ ಹಾದಿಗೆ ಅಡರಿದ್ದುವು. ಈ ಸಲವೂ ಹಾಗೆಯೇ ಎಂಬುದರ ಅರಿವಾಗಿತ್ತು. ಡಬ್ಬದಿಂದ ಸ್ವಲ್ಪ ಕಾಫೀ ಪುಡಿಯನ್ನು ತೆಗೆದು ಕಾಗದದ ಚೂರಿನಲ್ಲಿಟ್ಟು ಮಡಿಸಿ ಅವಳ ಕೈಗೆ ನೀಡಿದಳು ವಿನುಮಯಿ. ಅಜ್ಜಿ ಉಬ್ಬಿದ ಹಲ್ಲನ್ನು ಮತ್ತಷ್ಟು ಪ್ರದರ್ಶಿಸುತ್ತಾ—"ನಿಮಗೆ ಒಬ್ಬರೇ ಇದ್ದೂ ಇದ್ದೂ ಬೇಸರವಾಗಿತ್ತೇನೋ ದಿನಾ ನಿಮ್ಮವರನ್ನು ಮನೆಗೆ ಬರಮಾಡಿಕೊಳ್ಳಿ. ಈಗಿನವರನ್ನು ಹಾಗೇ ಬಿಡುವುದು ಸರಿಯಲ್ಲ. ಬಿಟ್ಟರೆ ಹಕ್ಕಿ ಸಿಕ್ಕುವುದುಂಟೆ ?"

ಸಾಲ ಪಡೆದುದಕ್ಕೆ ಎರಡು ಒಳ್ಳೆಯ ಮಾತಾಡಿ ಹೋಗಬೇಕೆಂದು ಅಜ್ಜಿಯ ಆಸೆ. ಆದರೆ ವಿನುಮಯಿ ಇಂಗು ತಿಂದ ಮಂಗನಂತಾದಳು. ಮನಸ್ಸು ಮಿಲಿಮಿಲಿಗುಟ್ಟಿತು.

ಕಾಡಿ ಬೇಡಿ ಹೊಟ್ಟೆ ತುಂಬುವ ಅಜ್ಜಿಯ ಮನೆಯಲ್ಲಿ ಇಬ್ಬರು ಕಲಿತಃ ನಿಷ್ಣಾತರಾದ ಹುಡುಗಿಯರಿದ್ದಾರೆ. ಅವರನ್ನು ಕೆಲಸಕ್ಕೆ ಕಳುಹಿಸುವುದು ಇಷ್ಟವಿಲ್ಲ. ಹುಡುಗಿಯರಿಗೆ ಕೆಲಸವೂ ಮದುವೆಯೂ ಇಲ್ಲದೆ ಸಂಕಟದ ಗಣಿಗಳಾಗಿದ್ದಾರೆ. ಹೀಗೆ ತಿರಿದಾದರೂ ತಿಂದಾರೆಯೇ ಹೊರತು ನಾಗರಿಕ ಜೀವನಕ್ಕೆ ಹೊಂದಿಕೊಳ್ಳಲಾರರು...

"ಬರ್ತ್ತೇನ್ರಿ...ವಿನುಮಾ !"

"ಆಗಲಿ, ಅಜ್ಜಿ."

"ತುಂಬಾ ಥ್ಯಾಂಕ್ಸ್ !"

ಅಜ್ಜಿ ಸೊಂಟದ ಸುತ್ತಿನಿಂದ ಸಣ್ಣ ಕಾಗದದ ಮಡಿಕೆಯನ್ನು ತೆಗೆದು –"ನಿನ್ನೆ ನಾವೆಲ್ಲಾ ಮಂಗೇಶ್ ದೇವಸ್ಥಾನದ ಕಡೆ ಹೋಗಿದ್ದೆವು. ಮೊಮ್ಮಕ್ಕಳಿಬ್ಬರೂ ವನಭೋಜನ ಮಾಡಬೇಕೆಂದು ಕಾಟ ಕೊಟ್ಟಿದ್ದರ ಮೇಲೆ ಹೋಗಿದ್ದಾಯ್ತು. ದೇವರಿಗೆ ಕಾಯೊಡಿಸಿ, ಹೂದೋಟದಲ್ಲಿ ಅಡ್ಡಾಡಿ, ನದಿತೀರದಲ್ಲಿ ವನಭೋಜನ ಮಾಡಿ ಬಂದೆವು. ಪ್ರಸಾದ ತೆಗೆದುಕೊಳ್ಳಿ."

...ಪಾಪ ಹುಡುಗಿಯರಿಗೆ ಅಷ್ಟಾದರೂ ಮನರಂಜನೆ ಬೇಡವೇ ?

ಎರಡೂ ಕೈಗಳನ್ನೊಡ್ಡಿ ಪ್ರಸಾದವನ್ನು ಸ್ವೀಕರಿಸಿದಳು ವಿನುಮಯಿ.

"ಬಹಳ ಉಪಕಾರವಾಯಿತು ವಿನುಮಾ !"

"ಓ ಇದೆಲ್ಲಾ ಏನು ?"

ಬಚ್ಚು ಕೆನ್ನೆಗಳ ಮೇಲೆ ಎಳೆನಗುವನ್ನು ಸೂಸಿ ಹೊರಟಳು ಅಜ್ಜಿ.

ಮುಂದಣ ಕದ ಮುಚ್ಚಿ ನೋಟವನ್ನು ಗಡಿಯಾರದ ಮೇಲೆ ಹೊರಳಿಸಿದಳು ವಿನುಮಾ. ಹೊತ್ತು ನಾಲ್ಕರ ಸಂಖ್ಯೆಯನ್ನು ಸಮೀಪಿಸಿತ್ತು. ಇಷ್ಟೊತ್ತಾದರೂ ಮೀನಾ ಶೈಲಾ ಇಬ್ಬರೂ ಬರಲಿಲ್ಲವಲ್ಲಾ...ಬೇಗನೆ ಬಂದಿದ್ದರೆ ರಾಣಾಪೇಟ್ ಕಡೆ ಹೋಗಿ ಹೊತ್ತಿಗೆ ಮುಂಚೆ ಮನೆ ಸೇರಿಕೊಳ್ಳಬಹುದಾಗಿತ್ತು.

...ನಾವೊಂದು ನೆನೆದರೆ...

ಮರುಕ್ಷಣದಲ್ಲಿ ಕರೆಗಂಟೆ ಕಿರ್ರನೆ ಸದ್ದುಮಾಡಿ ಕರೆನೀಡಿತು. ಮೀನಾ ಬಂದಿರಬಹುದೆಂಬ ಉತ್ಸಾಹ ಕಾಲಿಗೆ ಬುದ್ಧಿ ಹೇಳಿದರೂ ಒಂದುಗಳಿಗೆ ತಡೆದು ನಿಂತಳು ವಿನುಮಯಿ. ನೋಡುತ್ತಿದ್ದಂತೆ ಕರೆಗಂಟೆ ಮತ್ತೆ ಸದ್ದುಗೈಯಿತು. ಉತ್ಸಾಹದಿಂದ ಕದ ತೆರೆದರೆ ದಿನ ಪತ್ರಿಕೆಯಾತ ಬಿಲ್ಲಿನ ಸಹಿತ ನಿಂತಿದ್ದ. ಕೈಯಲ್ಲಿ ಚೀಲ, ಮಾಸಲು ಬಟ್ಟೆ. ಬಡತನವೇ ಮೈವೆತ್ತು ಬಂದಂತೆ ಸೀರಿ ಸೀಕಲಾದ ಮೈ....ಮುಖದ ಮೇಲಿನ ಅಸಂಖ್ಯಾತ ರೇಖೆಗಳ ಮಧ್ಯೆ ಎಳೆನಗುವನ್ನು ಸೂಸಿ ಬಿಲ್ಲನ್ನು ಮುಂದೆ ಹಿಡಿದ.

ದೃಶ್ಯ ಮನದಲ್ಲಿ ಮರುಕವನ್ನು ಮೂಡಿಸಿತು. ಪತ್ರಿಕೆಯ ಹಣವನ್ನು ಕೊಟ್ಟು ಅವನ ಕೈಗೊಂದು ರೂಪಾಯಿಯನ್ನು ನೀಡಿದಳು. ಬಾಲ್ಕನಿಯಲ್ಲಿ ನಿಂತಿದ್ದ ರಮಾಬಾಯಿ ವಿನುಮಯಿಯನ್ನು ಕಂಡು ಇತ್ತಲೇ ಬಂದಳು.

"ನೀವು ಬೆಂಗಳೂರಿಂದ ಬಂದುದೆಂದು ?"

"ಹೋಗಿ ಬಹಳ ದಿನಗಳಾಗಿವೆ. ಎಲ್ಲಕಡೆ ಸುತ್ತುವುದಿದೆ. ಒಂದು ತಿಂಗಳಾದರೂ ಇದ್ದು ಬರೋಣವೆಂದು ಮನಸ್ಸು."

"ಛೀ ! ಅಷ್ಟುದಿನ ಉಳಿದು ನಿಮ್ಮ ಹಾದಿಗೆ ನೀವೇ ಮುಳ್ಳಾಗ ಬೇಡಿ."

'ಏನು' ಎಂಬಂತೆ ಅವಳನ್ನೇ ಮಿಕಿಮಿಕಿ ನೋಡಿದಳು, ವಿನುಮಾ.

"ಗೃಹಿಣಿ ಇಲ್ಲದಿದ್ದಲ್ಲಿ ಗೃಹಸ್ಥರ ಮನಸ್ಸು ಹಲವು ದಾರಿಗಳಲ್ಲಿ ಹರಿಯುತ್ತದೆ. ಕೇವಲ ಒಂದು ತಿಂಗಳ ಸುಖಕ್ಕಾಗಿ ಬಾಳಿನುದ್ದಕ್ಕೂ ಗೋಳು ಹಚ್ಚಿಕೊಳ್ಳುವುದಾದೀತು !"

ವಿನುಮಾ ಮುಗುಳ್ನಗು ಬೀರಿದಳು.

"ನಮ್ಮಪ್ಪ ಅಮ್ಮ ಯಾವಾಗಲೂ ಕರೆಯುತ್ತಾರೆ. ಹೋದರೆ ಇಲ್ಲಿ ಇನ್ನೇನು ಪಾಡೋ ಎಂದು ನಾನೇ ಹೋಗುವುದಿಲ್ಲ. ಈ ಮಹಾರಾಯನ ಹೊಡೆತ ಬಡಿತ ಸಹಿಸಿಕೊಂಡು ಇಲ್ಲೇ ಬಿದ್ದಿದ್ದೇನೆ ನೋಡಿ."

ವಿನುಮಯಿ ಮಾತಾಡಲಿಲ್ಲ. ಕರುಳು 'ಚುರುಕ್' ಎಂದಿತು.

"ಈ ಗಂಡು ಜನ್ಮಕ್ಕೆ ಧರ್ಮಕರ್ಮ ಇರುವುದಿಲ್ಲ. ತಿಳಿದೂ ತಿಳಿದೂ ನಾವು ಕೈಬಿಟ್ಟರೆ ನಮಗೇ ನಷ್ಟ."

"ಬಹಳ ದಿನ ನಿಲ್ಲುವುದಿಲ್ಲ. ಬೇಗನೆ ಬಂದು ಬಿಡುವೆ" ನುಡಿಯಲಾರದೆ ನುಡಿಯಿತು ನಾಲಿಗೆ.

ರಮಾಬಾಯಿ ಹೊರಟಳು. ಅವಳ ನುಡಿ ಹಿಂದೆಯೇ ಉಳಿಯಿತು. ಒಳ ಬರುತ್ತಲೂ ಪುಸ್ತಕದಡಿಯಲ್ಲಿ ಹಣಿಕಿ ನೋಡುತ್ತಿದ್ದ ಅನಾಮಧೇಯ ಪತ್ರ ಪ್ರಮಾಣ ಪ್ರಸಿದ್ಧವಾಗಿ ನಕ್ಕಿತು. ಒಮ್ಮೆಲೇ ಮನಸ್ಸು ಮುದುಡಿ ಮೆಲ್ಲನೆ – ಬಹು – ಮೆಲ್ಲನೆ ಮೈಯಲ್ಲಿ ನಸು ಕಂಪನದ ಅಲೆ ಹರಿದಾಡ ತೊಡಗಿತು.

ಅವಿಚಾರಕನ ಅಂಗ ಸುಖಕ್ಕಾಗಿ ಸಂಸಾರ ಸುಖಕ್ಕಾಗಿ ಚಿತ್ರಕಲೆ ಯನ್ನು ಬಲಿಗೊಟ್ಟು ನನ್ನ ಬಾಳ್ವೆಯನ್ನು ವೃಥಾ ವ್ಯರ್ಥಗೊಳಿಸಿ ಪಡೆದ ಭಾಗ್ಯವೇನು ? ನನ್ನ ತ್ಯಾಗಕ್ಕೆ ಅಸೀಮ ಪ್ರೇಮಕ್ಕೆ ಬಂದ ಪುರಸ್ಕಾರ ವೇನು ? ಅಶ್ರಾಂತ ಆತ್ಮ ಯುದ್ಧಕ್ಕೆ ಆಂತರಿಕ ವಿಶ್ವಾಸಕ್ಕೆ ಧರ್ಮ ಸಂಕಟಕ್ಕೆ ಶ್ರದ್ಧೆ. ಭಕ್ತಿಗಳಿಗೆ ಸ್ನೇಹ ಮಾರ್ಜನೆಗಳಿಗೆ ನಿಜವಾಗಿಯೂ ಗೌರವ ದೊರಕಿದೆಯೇ ? ಕೊನೆಯ ಪಕ್ಷ ಮನುಷ್ಯತ್ವಕ್ಕಾದರೂ ಮೋಹ ಒಲಿಯಬಾರದೆ ? ಹೇಗೆ ಇದರ ಪರಿಹಾರ ?

ಒಂದು ಗಳಿಗೆ ಮೈಮರೆತು ನಿಂತಳು ವಿನುಮಾ. ಕಣ್ಣು ನೋಟ ಕಿಟಕಿಯಲ್ಲಿ ತೂರಿ ದೂರ ದಿಗಂತದಲ್ಲಿ ನೀಲ ಸಾಗರಿಯನ್ನಪ್ಪಿ ಮೋಹದಿಂದ ಮುದ್ದುಗೈವ ನೀಲ ಗಗನವನ್ನು ನಿಟ್ಟಿಸುತ್ತಿತ್ತು. ನೋಡೆ ನಿಬ್ಬೆರಗಾಗಿ ನಿಟ್ಟಿಸಿ ನೋಡೆ, ಶ್ರದ್ಧೆ ಗೌರವಗಳೆರಡೂ ಒಂದಾಗಿ ತಬ್ಬಿವೆ ಅಲ್ಲಿ ! ಮೈ ಮರವಟ್ಟು ನಿಂತಳು ವಿನುಮಾ. ಕ್ಷಣ ಕ್ಷಣಗಳು ಕ್ಷಯಿಸಿದುವು. ಗಳಿಗೆ ಗಳಿಗೆಗಳು ನಿಮಿರಿ ನಡೆದುವು. ಮಿಾನಿಗೆ ಕೈ ಹಚ್ಚುವುದರಿಂದ ನೀರು ಕದಡಿ ಬಗ್ಗಡವಾಗುವಂತೆ ಮನಸ್ಸು ಅರಳಿದರೂ ಬಗ್ಗಡವಾಯಿತು. ಕಣ್ಣುಗಳಂಚಿ ನಲ್ಲಿ ಹನಿಗಳು ಫಳಫಳನೆ ಮಿಂಚಿದುವು.

ಹೊತ್ತು ಮೆಲ್ಲನೆ ಉರುಳಿತು.

ಕಣ್ಣುಗಳಂಚಿನಲ್ಲಿ ಮಿಂಚಿದ ಹನಿಗಳು ಕೆನ್ನೆಯ ಮೇಲುರುಳಿ ಧಾರಾ ಕಾರವಾಗಿ ಹರಿದು ಎದೆಯ ಮೇಲೆ ಬಿದ್ದು ಸೀರೆಯ ಸೆರಗಿನಲ್ಲಿ ಹಿಂಗಿ ಕಣ್ಮರೆಯಾದುವು. ಎರಡೂ ಕೈಗಳಿಂದ ಕಣ್ಣುಗಳನ್ನು ತೀಡಿ ಕೊಂಡಳು ವಿನುಮಾ. ಅಂತರಂಗದ ನೋವು ಮುಖಕ್ಕೆ ಹೊಂಗೆಂಪಿನ ಮುದ್ರೆಯೊತ್ತಿತು.

ಎರಡು ಜಡೆಯ ಹುಡುಗಿ ! ಯಾರಿರಬಹುದು ಅವಳು ? ಆಫೀಸಿ ನಲ್ಲಿರುವವರಲ್ಲಿ ಎರಡು ಜಡೆಯ ಹುಡುಗಿ ಸಿಲ್ವಿಯಾ....! ಕೊಬ್ಬಿದ ಮೈಯ್ಗೆ ಹಬ್ಬವಾಗುವಂತಹ ತುಂಬು ಮೈಯಿನ ಹೆಣ್ಣು. ಅವಳಲ್ಲಿ ಇನ್ನೇನು ತೃಪ್ತಿ ಕಂಡಾರು ವಿರಾಜ್ ? ಬುದ್ಧಿಯೇ ? ರೂಪವೇ ?... ಮಾಂಸದ ಶರೀರವೊಂದು ಹಿರಿಯ ತೆರೆಯಾಗದಿದ್ದರೆ ಅಂತರಂಗದ

ದುರ್ಗಂಧವೆಲ್ಲ ಬೀದಿಬೀದಿಗೂ ಹರಡುತಿತ್ತೋ ಏನೋ! ಛೀ! ಛೀ! ನಿಜವಾಗಿಯೂ ಎಂತಹ ಅವಮಾನ...

ಏಳು ವರ್ಷಗಳ ದಾಂಪತ್ಯ ಜೀವನದಲ್ಲಿ ವಿರಾಜ್ ಸವಿದ ಸವಿಗೆ ಎಣೆಯುಂಟೇ? ಹಾಲ್ಜೇನಿನ ಹೊಳೆಯಲ್ಲಿ ಮಿಂದು ಮನದಣಿಯೆ ಸುಖದಮೃತವನ್ನು ಹೀರಿ ವೈಮನಸ್ಸುಗಳನ್ನು ಬಿರಿಯುವಂತೆ ತುಂಬಿ ಕೊಂಡ ವಿರಾಜ್. ಕಲಿತು ಬಲಿತು ಜಗದ್ ವ್ಯಾಪಾರಗಳನ್ನು ಅರಿತ ಆಧುನಿಕ ವ್ಯಕ್ತಿ ವಿರಾಜ್. ಆದರೂ...

ಕಣ್ಣಿನಲ್ಲಿನ ಹನಿಗಳು ಸರ್ರನೆ ಕೆಳಗಡೆ ಜಾರಿ ಕಾದ ಇಸ್ತ್ರಿ ಪೆಟ್ಟಿಗೆಯ ಮೇಲೆ ಬಿದ್ದು ಚೊಯ್‌ನೆ ಹಿಂಗಿದಾಗಲೇ ಸ್ವಿಚ್ಚು ಹಾಕಿದುದರ ಗಮನ ಒಡನೆ ಇಸ್ತ್ರಿ ಪೆಟ್ಟಿಗೆಗೆ ಕೈ ಹಚ್ಚಿದಳು — ವಿನುಮಯಿ. ಗರಿ ಗರಿ ಇಸ್ತ್ರಿ ಯೂದ ಬಟ್ಟೆಗಳು ಪೆಟ್ಟಿಗೆಯನ್ನು ಸೇರಿದುವು. ಹಾಳು ಯೋಚನೆಗಳ ಬೀಡಿನಲ್ಲಿಯೂ ಕೆಲಸ ಅಚ್ಚುಕಟ್ಟಾಗಿ ಸಾಗಿತು.

ಇನ್ನೇನು ಶೈಲಾ ಬರುವ ಹೊತ್ತು. ಕಣ್ಣುಗಳನ್ನು ನೋಡಿದೊಡ ನೆಯೇ ನನ್ನ ಮನಸ್ಥಿತಿಯನ್ನು ಅರಿತುಕೊಂಡಾಳು ಎಂಬ ಯೋಚನೆಯೂ ಬಂತು. ತಣ್ಣೀರಿನಲ್ಲಿ ಮುಖ ಮಜ್ಜನ ಮಾಡಿ ಕಂಬನಿಯ ಕಲೆಯನ್ನು ನಿವಾರಿಸಿಕೊಂಡಳು ವಿನುಮಯಿ.

ಅಸಾಮರ್ಥೀಯ ಪತ್ರ ಸದ್ದಿಲ್ಲದೆ ಬೀರುವಿನಲ್ಲಿ ಅಡಗಿತು.

೦ ೦ ೦ ೦

....ರಾಜಾಬಾಯಿ ಟವರ್ ಗಡಿಯಾರ ಗಂಟೆ ಬಾರಿಸಿತು. ಢಣ್. ಢಣ್. ಢಣ್. ಢಣ್. ಢಣ್.

....ಗೋಡೆಯ ಮೇಲಿನ ಅನ್‌ಸೋನಿಯಾ ಗಡಿಯಾರ ಮರುದನಿ ಗೊಟ್ಟಿತು. ಢಣ್. ಢಣ್. ಢಣ್. ಢಣ್. ಢಣ್

ಐದು ಗಂಟೆಯಾದರೂ ಮಿಾನಾ ಬರಲಿಲ್ಲವಲ್ಲಾ, ಬಹುಶಃ ಬರುವು ದಿಲ್ಲವೆಂದು ತೋರುತ್ತೆ. ಶಂಕರ್ ಮನೆಗೆ ಮುಂದಾಗಿ ಬಂದಿದ್ದರೆ ಸಾಕು.

ಟ್ರೇಣ್. ಟ್ರೇಣ್. ಟ್ರೇಣ್. ಟ್ರೇಣ್.

"ಹಲೋ!"

"ಹಲೋ ವಿನುಮಾ !"

"ಓ....ಶೈಲಾ ! ಐದು ಗಂಟೆಯಾದರೂ ಇನ್ನೂ ಬರುವುದರಲ್ಲೇ ಇದ್ದಿ ?"

"ವಿಮಾನಾ ಬಂದಿದ್ದಾಳೆಯೆ ?"

"ಇಲ್ಲ. ಅವಳೂ ಬರಲಿಲ್ಲ."

"ಬರುವುದು ದಿಟವೇ ?"

"ಬರಬೇಕಾಗಿತ್ತು, ಹೇಗೆ ಹೇಳಲಿ ?"

"ಹೊರಟೆರು, ನೋಡೋಣ. ಅಷ್ಟರೊಳಗಾಗಿ ಬಂದರೆ ಅನುಕೂಲ."

"ಬಾ, ತಯಾರಿರುವೆ."

ರಿಸೀವರನ್ನು ಸ್ವಸ್ಥಾನದಲ್ಲಿ ಅಳವಡಿಸಿದಳು ವಿನುಮಯಿ.

ಹೊತ್ತು ಮೆಲ್ಲನೆ ಮುಂದುವರಿಯಿತು. ಚಹ ನೀರಿಗೆ ಸ್ವಿಚ್ ಹಾಕಿ ಬಸಿ ಬಟ್ಟಲುಗಳನಿಟ್ಟು ಸಿಹಿಕಾರಗಳನ್ನು ಹೊಂದಿಸಿ ಚಹಕ್ಕೆ ಹಾಲು ಸಕ್ಕರೆ ಬೆರಸುವುದರೊಳಗಾಗಿ ಕರಗಂಟೆ ಒಂದೇಸಮನೆ ಅರಚಿತು. ಆರರೆ ! ಇದೇನು ನಿಲ್ಲುವಂತೆಯೇ ಇಲ್ಲ. ಓಡಿ ಬಂದು ಮುಂದಣ ಕದ ತೆರೆದಳು ವಿನುಮಯಿ.

"ಏ...ತುಂಟೀ ! ನೋಡಿದರೆ ಎರಡು ಮಕ್ಕಳ ತಾಯಿ !"

ಪರಸ್ಪರ ದರ್ಶನ ಲಾಭದಿಂದ ಗೆಳತಿಯರ ಮುಖಗಳು ಹೂವಿನಂತೆ ಅರಳಿದುವು.

"ದೇವರು ಕೊಟ್ಟಿದ್ದರೆ ಅಮ್ಮನವರಿಗೆ ಇಷ್ಟರೊಳಗಾಗಿ ನಾಲ್ಕು ಬರುತ್ತಿದ್ದುವು !"

"ಹ್ಞಾ....ಹ್ಞಾ, ಅದೇನು ಹಂದಿಯೋ ?"

"ಅಲ್ಲ. ವಿ...ನು...ಮಾ !"

"ನಿನಗೆ ತಮಾಷೆ....ಎಷ್ಟೆಂದರೂ ಹುಡುಗಿ !"

"ನೀನು ಬಹಳ ಮುದುಕಿ ಕಣೆ !"

ಶೈಲಳನ್ನು ಬಿಗಿದಪ್ಪಿ ಒಳಗಡೆ ಎಳೆದೊಯ್ದು ಸ್ಟೌವಿನ ಮುಂದೆ ನಿಲ್ಲಿಸಿ "ನೋಡು, ಅರ್ಧ ಶೋಧಿಸಿದ ಚಹ ಹಾಗೇ ಇದೆ. ಸ್ಟೌವ್ ಸಹ

ಆರಿಸಲಿಲ್ಲ. ಇದೆಲ್ಲಾ ನಿನ್ನ ದೆಸೆಯಿಂದಲೇ ಆದದ್ದು. ನೀನೀಗ ಬೆಂಚಿನ ಮೇಲೆ ನಿಲ್ಲಬೇಕು !"

"ಓ......ಹೋ......ಹೋ....... !"

ಎರಡೂ ಕಡೆಯಿಂದ ಕಿಲಕಿಲ ನಗುವಿನ ಹೊನಲು ಹುಚ್ಚೆದ್ದು ಹರಿಯಿತು.

"ಇದುವರೆವಿಗೂ ಚಹ ಮುಗಿಸದೆ ಏನು ಮಾಡುತ್ತಿದ್ದೆ ವಿನುಮಾ ?"

"ನೀನೂ ಮೀನಾ ಬರುತ್ತಿರುವುದರಿಂದ ನಾನೇಕೆ ಒಬ್ಬಳೇ ತೆಗೆದು ಕೊಳ್ಳಲಿ ? ನಿಮಗಾಗಿಯೇ ಕಾದೆ. ಮೀನಾ ಬರಲಿಲ್ಲ. ನೀನು ಟೆಲಿಫೋನು ಮಾಡಿದ ಮೇಲೆ ನೀನು ಬರುವ ಸಮಯಕ್ಕೆ ಸರಿಯಾಗಿ ಚಹಕ್ಕಿಟ್ಟೆ."

"ಹೊರಗಿನಿಂದ ಬರುವವರಿಗಾಗಿ ಕಾದು ನೀನು ನಿನ್ನ ಹೊತ್ತನ್ನೇಕೆ ತಪ್ಪಿಸಿಕೊಳ್ಳುತ್ತಿ ?"

"ಒಬ್ಬಳೇ ತಿನ್ನುವುದು ಬೇಸರ."

ಸಿಹಿಕಾರವನ್ನು ಅವಳಿಗೆ ನೀಡಿ ತಾನೂ ಮೆಲ್ಲುತ್ತಾ ನುಡಿದಳು ವಿನುಮಾ.

"ಛೀಃ ! ಮೀನಾ ಬರಲಿಲ್ಲವಲ್ಲಾ, ಅವಳೂ ಬಂದಿದ್ದರೆ ಚೆನ್ನಾಗಿತ್ತು. ಏನು ಮಾಡೋಣ ಈಗ ? ಅವಳನ್ನು ಬರಲಿಕ್ಕೆ ಹೇಳಿ ನಾನು ಹೊರಟರೆ ಹೇಗೆ ?"

"ಸ್ವಲ್ಪ ಹೊತ್ತು ನೋಡೋಣ."

"ಅವಳು ಬಂದರೆ ವಿನಾ...."

"ಏಕಷ್ಟು ಆತಂಕ ? ಟ್ಯಾಕ್ಸಿ ತೆಗೆದುಕೊಂಡು ಹೋದರೆ ಅರ್ಧ ಗಂಟೆ ಯೊಳಗಾಗಿ ಹಿಂದಿರುಗಬಹುದು."

"ಇಷ್ಟರೊಳಗಾಗಿ ಶಂಕರ್ ಮನೆಗೆ ಬಂದಿರುತ್ತಾರೆ. ಅಂದಮೇಲೆ ಬರುತ್ತಾಳೋ ಇಲ್ಲವೋ ಅದೂ ಅನುಮಾನ."

"ಓ...ಬಂದಲ್ಲಿ ಇಬ್ಬರೂ ಬರಬಹುದು."

"ನಿಜ..." ತಲೆಯಲುಗಿಸಿದಳು ವಿನುಮಯಿ.

ಸಿಹಿ ಕಾಗದಗಳು ಕರಗಿದುವು. ಹಬೆಯಾಡುತ್ತಿದ್ದ ಚಹವನ್ನು ಗುಟುಕಾಗಿ ಹೀರಿ ಚಹದ ಸಿಹಿಯನ್ನು ಸವಿದು ಬಿಸಿ ಬಟ್ಟಲುಗಳನ್ನು ತೊಳೆದಿಟ್ಟು ಹೊರಡಲು ಅಣಿಯಾದರು. ಆದರೂ ವಿಮಾನಾ ಬರಲಿಲ್ಲ. ಇನ್ನೇನು ಮಾಡುವುದು ?

"ನೆರೆಮನೆಯಲ್ಲಿ ಬೀಗದ ಕೈ ಕೊಟ್ಟು ಹೋಗೋಣ. ಬಂದರೆ ಅರ್ಧ ಗಂಟೆ ಮನೆಯಲ್ಲಿಸುತ್ತಾರೆ. ಅದರಿಂದೇನು ತೊಂದರೆ ?" ಎಂದಳು ಶೈಲಾ.

ಯೋಚನೆ ಸಾಧು ಎನಿಸಿತು—ವಿನುಮಯಿಗೆ.

ಇಬ್ಬರೂ ಹೊರಟರು. ಮನೆ ಬಾಗಿಲ ಕೀಲಿ ನೆರೆಮನೆಯನ್ನು ಸೇರಿತು. ಮೆಟ್ಟಿಲನ್ನು ಸರಸರ ಇಳಿಯುವಾಗಲೂ ವಿಮಾನಾ ಬಂದಿದ್ದರೆ ಎಂಬ ಯೋಚನೆ ವಿನುಮಯಿಗೆ. ಮೆಟ್ಟಿಲಿಳಿದು ಬಸ್ಸಿನ ನಿಲ್ದಾಣದ ಹಾದಿ ಹಿಡಿದಾಗಲೂ ನೋಟ ಅವಳಿಗಾಗಿ ತಡುಕಿತು. ದಿಟ್ಟಿಗೆ ಬಿದ್ದುದು ಗದ್ದಲ ಮಯ ವಾತಾವರಣದಲ್ಲಿ ಗಣನಾತೀತವಾದ ಜನ ಜಂಗುಳಿ.

...ಅಬ್ಬಾ ! ಮುಂಬೈ ಕುರಿಗಳ ರೊಪ್ಪಕ್ಕಿಂತ ಕಡೆಯಾಗುತ್ತಿದೆ...

"ಈ ಗಲಾಟೆ ಗದ್ದಲ ನೋಡಿದರೆ ಹೊರಗಡೆ ಕಾಲಿಡುವುದೇ ಬೇಡ ಅನ್ನಿಸುತ್ತೆ."

"ನಿಜ...ಈ ಹೊಟ್ಟೆ ಕೇಳಬೇಕಲ್ಲ?"

ಇಬ್ಬರ ಮುಖದಲ್ಲೂ ನಗೆ ಮಲ್ಲಿಗೆ ಅರಳಿತು.

ಕೈ ಕೈ ಹಿಡಿದುಕೊಂಡು ಜನಸಂದಣಿಯನ್ನು ದಾಟಿ ಟ್ಯಾಕ್ಸಿಯ ನಿಲ್ದಾಣದ ಕಡೆ ಹೆಜ್ಜೆ ಹಾಕಿದರು. ಹೆಜ್ಜೆಹೆಜ್ಜೆಗೂ ಜನ. ಹಾದಿ ನಡೆಯಬೇಕಾದರೆ ಉಸಿರು ಕಟ್ಟಿದಂತಾಯಿತು.

"ನೀನು ಎಷ್ಟು ಕಷ್ಟ ಪಡುತ್ತೀಯಮ್ಮಾ ? ನನಗೆ ಇದೆಲ್ಲಾ ಬಹಳ ಸಲೀಸು !"

"ನೀನು ಬಿಡು, ಯಾವ ಗಂಡಿಗೂ ಕಡಿಮೆಯಲ್ಲ!" ನಕ್ಕು ನುಡಿದಳು ವಿನುಮಾ.

"ಹಾಗೆಂದು ಬಿಟ್ಟರೆ ಮುಗಿಯಿತು. ನೀನು ಒಂದಿನ ಹೋಗಿ ಬರಲಿಕ್ಕೆ ಜೀವ ಹಿಂಡಿಕೊಳ್ಳುತ್ತಿ. ನಾನು ದಿನಾ ಓಡಾಡಬೇಕಲ್ಲ, ಹೇಗಿರಬಹುದು ?" ಹುಬ್ಬೇರಿಸಿದಳು ಶೈಲಾ.

"ಸರಿ, ನಾನು ಓಡಾಡಲಿಲ್ಲವೇ"

"ಇದು ಎಷ್ಟೋ ವಾಸಿ. ಫ್ಲೋರಾ ಫೌಂಟನ್ ಬಳಿ ಬಂದರೆ ನೀನು ಜಜ್ಜಿ ಕುಸಿದು ಬೀಳದಿದ್ದರೆ ಮತ್ತೇಕೆ ?"

"ಓ.... ಹೋ....ಹೋ ? ಪರವಾಯಿಲ್ಲ ಹುಡುಗಿ ! ನೀನಿಲ್ಲಿಗೆ ಬರುವುದಕ್ಕಿಂತ ಎರಡು ವರ್ಷ ಮೊದಲೇ ಬಂದಿದ್ದೆ ಶೈಲಾ !"

"ಅದೇನು ಮಹಾ ? ಒಂದೆರಡು ವರ್ಷವೂ ಹಾದಿ ನಡೆದು ಬಸ್ಸು ಟ್ರಾಮುಗಳಲ್ಲಿ ಓಡಾಡಲಿಲ್ಲ. ಅಷ್ಟರೊಳಗಾಗಿ ಕಾರು ! ಹಾರ್ಡಿಂಜ್ ರಸ್ತೆ, ಕ್ವೀನ್ಸ್ ರೋಡು, ಮಹಾತ್ಮ ಗಾಂಧಿ ರಸ್ತೆಗಳಂತಹ ರಸ್ತೆಗಳಲ್ಲಿ ಇಂಪಾಲಾ ಕಾರಿನಲ್ಲಿ ಸರ್ರನೆ ದಾಟ ಬಿಟ್ಟರೆ ಮುಗಿಯಿತು !"

"ಶೈಲಾ ರಾಣೀ ! ನಮಗೆ ಕಾರು ಬಂದುದು ಈಚೆಗಷ್ಟೆ ? ಅದರ ಮೊದಲು ನಮ್ಮ ಕಾಲೇ ಕಾರು. ಈಗಲೂ ತಾನೇ ಏನು ? ಕಾರು ಆಫೀಸಿನಲ್ಲಿ ; ನಾನು ಇಲ್ಲಿ."

"ಆದರೂ ನೀನು ನಮ್ಮಂತೆ ವಾಮ ಮಾರ್ಗಗಳಲ್ಲಿ ಅಲೆಯಬೇಕಿಲ್ಲವಲ್ಲಾ. ರಾಜಮಾರ್ಗದಲ್ಲಿ ರಾಣಿಯಂತೆ ಓಡಾಡುತ್ತಿ !"

"ರಾಜ ಮಾರ್ಗಗಳಲ್ಲಿ ಕಾರು ಬಸ್ಸು ಜನ ಜಾಪತ್ತುಗಳ ಓಡಾಟ ದೇವರಿಗೇ ಪ್ರೀತಿ !"

"ಎಷ್ಟಾದರೂ ಫ್ಲೋರಾ ಫೌಂಟನ್ ನಾರಿಮನ್ ರಸ್ತೆಗಳಂತಿಲ್ಲ."

"ಇಲ್ಲೂ ಸಹ ಅಷ್ಟೆ. ಗಂಟೆ ಗಟ್ಟಲೆ ಬಸ್ಸಿಗಾಗಿ ಕ್ಯೂ ನಿಲ್ಲಲಾರದೆ ಕ್ರಾಫರ್ಡ್ ಮಾರ್ಕೆಟ್ಟಿಗೆ ನಡೆದೇ ಹೋಗಿದ್ದೇನೆ. ಕೊಂಡು ತರುವ ಕಷ್ಟ ನೋಡಿದರೆ ಉಣ್ಣುವುದೇ ಬೇಡ ಅನ್ನಿಸುತ್ತೆ. ಆಗ ಹೆಚ್ಚಾಗಿ ಬಾಡಿಗೆ ಸೈಕಲ್ ತುಳಿಯುತ್ತಿದ್ದೆ."

"ಈಗಿನ ಇಂಪಾಲಾ ಕಾರ್ ಟಾಜ್ ಹೋಟೆಲ್, ನಟರಾಜಾ ಹೋಟೆಲ್‌ಗಳ ಸುಗಂಧ ಆಗ ಮೂಗಿಗೆ ತಟ್ಟಿದ್ದಿದ್ದರೆ ರಾಣಿಯವರು ಬಾಡಿಗೆ ಸೈಕಲ್ ತುಳಿಯುತ್ತಿದ್ದರೇನು ?"

"ಬಿಡು, ಮಿಡಿಯಾಗದೇ ಹಣ್ಣಾಗುವುದಿಲ್ಲ."

ಶೈಲ ಮಾತನಾಡದೆ 'ನಿಜ' ಎಂಬಂತೆ ತಲೆದೂಗಿದಳು.

ತಿಲಕ್ ರಸ್ತೆ ಬಜಾಜ್ ರಸ್ತೆ ಕೂಡುವೆಡೆ ಟ್ಯಾಕ್ಸಿ ನಿಲ್ದಾಣ. ನಾಲ್ಕು ಕಾಲುಗಳೂ ಚುರುಕುಗೊಂಡುವು. ವಿಮಾನಾ ಒಬ್ಬಳೇ ಬಂದಿರಬಹುದೇನೋ ಎಂಬ ಯೋಚನೆಯೊಂದಿಗೆ ಎರಡು ಜಡೆಯ ಹುಡುಗಿಯೂ ತಲೆಯಲ್ಲಿ ಹುಚ್ಚೆದ್ದು ನರ್ತಿಸುತ್ತಿದ್ದಳು.

ರಾಜಾಭಾಯಿ ಟವರ್ ಗಡಿಯಾರ ಗಂಟೆ ಭಾರಿಸಿತು...ಢಣ್ !

"ಓ, ಆಗಲೇ ಐದೂವರೆ ! ಇನ್ನು ಎಲ್ಲಾ ಮುಗಿಸಿ ಮನೆ ಮುಟ್ಟು ವುದು ಆರೂವರೆಯಾಗುತ್ತೆ. ಇಂದು ವಿರಾಜ್‌ಗೆ ರಿಂಗ್ ಮಾಡಿ ರಾಣಾ ಪೇಟೆಗೆ ಹೋಗುವುದಿದೆ. ಮಧ್ಯಾಹ್ನ ಇಲ್ಲೀ ಬಂದು ಬಿಡಿ, ಮನೆಯಲ್ಲೇ ಚಹ ಮುಗಿಸಿಕೊಂಡು ಹೋದರಾಯಿತು ಎಂದಿದ್ದೆ. ಅವರು ಬಂದಿದ್ದರೆ ಹಾದಿ ನಡೆಯುವ ತೊಂದರೆ ಇರುತ್ತಿರಲಿಲ್ಲ. ಬೇಗನೇ ಮನೆಗೆ ಹಿಂದಿರುಗ ಬಹುದಾಗಿತ್ತು."

"ಅವರಲ್ಲೋ ಇದ್ದಾರೆ ಬಿಡು ವಿನುಮಾ ! ಮರಾಠ ಮಂದಿರ್ ! ಮೆಟ್ರೋಪೋಲ್ ! ರೋಟರಿ ಕ್ಲಬ್ ! ಲಯನ್ಸ್ ಕ್ಲಬ್...!"

ನಡುವೆ ಬಾಯಿ ಹಾಕಿದಳು ವಿನುಮಯಿ "ಓ....ಹೋ...ಹೋ ! ಆಯಿತೋ ? ಇನ್ನೂ ಉಂಟೋ ?"

"ಉಂಟು. ಮಹಾಲಕ್ಷ್ಮಿ ರೇಸ್‌ಕೋರ್ಸ್ !"

"ಸಧ್ಯ. ಅದು ವರ್ಷವೆಲ್ಲಾ ನಡೆದಿದ್ದರೆ ಮುಗಿದೇಹೋಗುತ್ತಿತ್ತು." ಮುಖದಲ್ಲಿ ನೀರಸ ನಗೆ ಮೂಡಿತು. ತನು ಮನಗಳು ಕಸಿವಿಸಿಯ ಕುಂಡ ಗಳಾದವು.

ವೋಲ್ಟಾಸ್ ಕಂಪೆನಿಯ ಸಿಳ್ಳೆ ಕೂಗು ಹಾಕಿತು. ಕ್ಹೂಊಊಊ ! ಕ್ಹೂಊಊಊ ! ಕ್ಹೂಊಊಊ !

ಇನ್ನು ಡೈರೆಕ್ಟರ್ ವಿರಾಜನಿಗೆ ಬಿಡುವು. ಸೀದಾ ಮನೆಗೆ ಬರು ತ್ತಾರೋ ಅಥವಾ ಕ್ಲಬ್ಬಿನ ಕಡೆಗೆ ಧಾವಿಸುತ್ತಾರೋ. ವಿರಾಜ್ ಎಲ್ಲಾ ಸರಿ. ವಿದ್ಯೆ, ಬುದ್ಧಿ, ಗುಣ, ರೂಪ, ಧನ, ಮಾನ ಎಲ್ಲಾ ಅತುಳ ಸಂಪ ತ್ತನ್ನೂ ಉಂಡು ಅರಗಿಸಿಕೊಂಡ ಸನ್ಮಾನ್ಯ ವ್ಯಕ್ತಿ. ಈ ಕೆಲವಷ್ಟು ದುಶ್ಚಟಗಳನ್ನು ಬಿಟ್ಟರೆ ನಿಜವಾಗಿಯೂ ಅಪೂರ್ವ ನಿಧಿ !

ಹಾದಿ ಸಾಗುತ್ತಿತ್ತು.

ಜನ...ಜನ...ಜನ...ಜನ.

ಗೆದ್ದಲಗೂಡಿಗಿಂತಲೂ ಕಡೆಯಾಗುತ್ತಿದೆ ಮುಂಬೈ. ಹಾದಿ ಸಾಗಿದುದರ ಪರಿವೆಯೇ ಇಲ್ಲ. ಶೈಲಾ ಟ್ಯಾಕ್ಸಿಯನ್ನು ಹಿಡಿದಾಗಿತ್ತು. ಟ್ಯಾಕ್ಸಿವಾಲಾ ಕದ ತೆರೆದು ಹಿಡಿದುಕೊಂಡು ನಿಂತ. ಇಬ್ಬರೂ ಹತ್ತಿ ಕುಳಿತುಕೊಂಡರು.

ಡುರ್‌ರ್‌ರ್‌ರ್‌ರ್‌ರ್‌ರ್ ! ಪೋಂ ! ಪೋಂ !

೦ ೦ ೦ ೦ ೦

....ಮೇಲೆ ರಣ ಬಿಸಿಲು. ಕೆಳಗೆ ಕಾದ ನೆಲ.

ಇಷ್ಟರೊಳಗಾಗಿಯೇ ವಿನೂಮಾಮಿಯ ಮನೆಗೆ ಹೋಗಬೇಕೆಂದು ಬಯಸಿದ್ದ ಮಿನಾಳಿಗೆ ಒಂದೊಂದೇ ಅಡ್ಡಿ ಆತಂಕಗಳು ತಡೆಹಾಕಿದುವು. ಎಲ್ಲವನ್ನೂ ನಿವಾರಿಸಿ ಹೊರಡುವಷ್ಟರಲ್ಲಿ ಹೊತ್ತು ಮೀರಿತು. ಇನ್ನೂ ಒಂದು ತಿಂಗಳ ಪರ್ಯಂತ ಆತ್ಮೀಯವಾಗಿ ಮಾತುಕತೆಯಾಡುವಂತೆಯೂ ಇಲ್ಲ. ಇಬ್ಬರೂ ಕೂಡಿದಾಗಲೆಲ್ಲಾ ಮಾತುಕತೆಯಲ್ಲಿ ಹೊತ್ತು ಕಳೆಯುತ್ತಿದ್ದರು. ಆಂತರಿಕವಾದ ವಿಚಾರಗಳೂ ಚರ್ವಿತ ಚರ್ವಣವಾಗುತ್ತಿದ್ದುವು. ಆತ್ಮೀಯರ ನಡುವೆ ಹೊತ್ತು ಸಾನಂದದಿಂದ ಉರುಳುತಿತ್ತು. ಮುಂಬೈಯಿಯ ಗಡಿಬಿಡಿಯ ಜೀವನದಲ್ಲಿ ಆ ಘಳಿಗೆ ನಿಜವಾಗಿಯೂ ಸುಮುಹೂರ್ತ.

"ಬಹಳ ದೂರವಾಯಿತು ಮಾಮಿ. ಹತ್ತಿರವಾಗಿದ್ದರೆ ಚೆನ್ನಾಗಿರುತ್ತಿತ್ತು" ಮಿನಾಳ ಆಶಯ.

"ನಿಜ. ಮಿನಾ, ನೀನೂ ದೂರ. ಶೈಲಳೂ ದೂರ. ಇಬ್ಬರಿಗೂ ಟೆಲಿಫೋನಿಲ್ಲ. ಒಂದೇ ಊರಿನಲ್ಲಿದ್ದರೂ ಎಲ್ಲೋ ಇದ್ದ ಹಾಗಿದೆ" ಎಂಬುದು ವಿನುಮಳ ಗೋಳು.

ಆದರೆ ಈ ಹಾಳು ಮುಂಬೈಯಲ್ಲಿ ಒಂದು ಇಂಚು ಜಾಗವೂ ಸಹ ಬಯಸಿದಲ್ಲಿ ಸಿಗುವುದಿಲ್ಲ, ಸದ್ದು ಗದ್ದಲದಲ್ಲಿ ಹೊರಗೆ ತಲೆ ಹಾಕುವುದೂ ಕಷ್ಟ ... ಹಳ್ಳಿಯಲ್ಲಿದ್ದರೂ ಕಷ್ಟ. ದಿಳ್ಳಿಯಲ್ಲಿದ್ದರೂ ಕಷ್ಟ. ಯೋಚನೆ ಬರುತ್ತಲೂ ಸಣ್ಣ ನಗುವುಕ್ಕಿ ಬಂತು. ಬಿಸಿಲಿನ ತಾಪಕ್ಕೆ ಮೈ ಒಂದೇ ಸಮನೆ ಬೆವರುತಿತ್ತು. ಈಗಲೀಗ ಮುಂಬೈಯಲ್ಲಿ

ಮಿಲ್ಲು ಬಟ್ಟೆಗಳನ್ನಲ್ಲದೆ ಬೇರೆ ಬಟ್ಟೆಗಳನ್ನುಡುವಂತೆಯೇ ಇಲ್ಲ. ಒಂದು ತಾಸಿನೊಳಗಾಗಿ ಬಟ್ಟೆಗಳು ಬೆವರಿನಲ್ಲಿ ತೊಯ್ದು ಒದ್ದೆಯಾಗಿರುತ್ತವೆ. ಬಸ್ಸು ಟ್ರಾಮುಗಳ ಕೊಳಕು ಮೆತ್ತಿ ಮನೆ ಮುಟ್ಟುವಷ್ಟರಲ್ಲಿ ಬಟ್ಟೆ ಒಗೆಯುವ ಕೆಲಸವನ್ನು ಪುನಃ ಹೊಂಚಿಕೊಂಡಂತಾಗುತ್ತದೆ. ಅದರಿಂದ ಹೊರ ಹೋಗುವುದೂ ಬೇಸರ. ಹಾಗೆಂದು ವಾಸದ ಗೂಡಿನಲ್ಲಿ ಒಬ್ಬಳೇ ಉಸಿರಾಡುವುದೂ ಬೇಸರ.

ಟ್ರಾಮಿನ ಪ್ರಯಾಣ ಮುಗಿಸಿ, ಮಿಲ್ಸಾಕಿಂಗ್ ಸರ್ಕಲ್ ದಾಟಿ, ಕಾಕಾ ಕಾಲೇಲ್‌ಕರ್ ರಸ್ತೆಯಲ್ಲಿ ಹಾದು ಅರವಿಂದ್ ಗೃಹ ಶ್ರೇಣಿಯ ಬಳಿಗೆ ಬರುವವರೆಗೂ ತಲೆಯೆತ್ತಿ ನೋಡಲೂ ಸಹ ಸಮಯವಿರಲಿಲ್ಲ. ಒಂದೇ ಸಮನೆ ಸಾಗಿತು ಹಾದಿ. ಯಾಕೋ ಮನದಲ್ಲಿ ಕಿನಿಸಿಗೆ ಏನೋ ಒಂದು ಬಗೆಯ ಕಳವಳ.

ಎಂದೂ ಇಲ್ಲದ್ದು ಇಂದೇಕೆ ಹೀಗೆ ?

ವಿನೂವಾಮಿಯೊಂದಿಗೆ ನಾನೂ ಹೋಗುವುದಾಗಿದ್ದಿದ್ದರೆ ಎಷ್ಟು ಸಂತೋಷವಾಗಿರುತಿತ್ತು ಪಯಣ ? ಒಂದು ತಿಂಗಳು ಸಂತೋಷವಾಗಿದ್ದರೆ ಹತ್ತು ವರ್ಷ ಆಯುಸ್ಸು ವೃದ್ಧಿಯಾಗುತ್ತದೆ. ಈ ಮುಂಬೈಯಲ್ಲಿದ್ದರೆ ಹತ್ತು ವರ್ಷ ಕಡಿಮೆ ಅಂದರೆ ಅದೇನೂ ತಪ್ಪಲ್ಲ. ಎಲ್ಲರನ್ನೂ ನೋಡಿ ಮೂರು ವರ್ಷಗಳಾದುವು. ತಂಗಿಯರು ಹೇಗಿದ್ದಾರೋ ? ಆ ಯೋಚನೆ ಬಂದೊಡನೆಯೇ ಕಣ್ಣುಗಳಲ್ಲಿ ರಂಗು ಮೂಡಿ ನೀರು ತುಂಬಿತು.

ಮಿನಾ ಯೋಚನೆಯ ಮಂಪರದಲ್ಲೇ ಅರವಿಂದ್ ಗೃಹಶ್ರೇಣಿಯ ಮೆಟ್ಟಿಲನ್ನು ದಡದಡ ಏರಿದಳು. ಕೆಳಗಿನಿಂದ ಏರುವಾಗ ಮೇಲಿನಿಂದ ಇಳಿಯುವವರು ಎದುರಾದರು. ಅವರಿಗೆ ಹಾದಿ ಬಿಟ್ಟು ಬಿಟ್ಟು ಏರುವಾಗ ನಡಿಗೆಯು ನಿಧಾನವಾಯಿತು. ಚಿತ್ತಭಿತ್ತಿಯಲ್ಲಿ ಅಪ್ಪ ಅಮ್ಮ ಅಕ್ಕಂದಿರು ಅಣ್ಣಂದಿರು ತಂಗಿಯರು ಮಿಂಚಿ ಮಾಯವಾದರು. ತಮ್ಮವರ ಸವಿನೆನಪು ಮನದಲ್ಲಿ ದುಗುಡವೆಬ್ಬಿಸಿತು. ಕಣ್ಣುಗಳು ಮರುಕ್ಷಣದಲ್ಲಿ ಪೂರ್ತಿ ತುಂಬಿ ಬಂದವು. ಮೇಲಿನವರು ದಡ ದಡ ಇಳಿದು ಬಂದುದ

ರಿಂದ ಸಾಲು ಮೆಟ್ಟಿಲಿನ ಕಬ್ಬಿಣದ ಸರಳನ್ನು ಹಿಡಿದುಕೊಂಡು ಬದಿಗೆ ನಿಂತು ಕಂಬನಿಯನ್ನು ಶೀಡಿಕೊಂಡಳು.

"ಕಣ್ಣಿಗೆ ಧೂಳು ಬಿತ್ತೇನ್ರಿ?" ಗಂಡು ದನಿ ಗುಂಡು ಹೊಡೆದಂತೆ ಕಿವಿಯನ್ನು ತಾಗಿತು. ಮೀನಾ ಥಟ್ಟನೆ ಕಣ್ತೆರೆದಳು. ಹಚ್ಚ ಹಳದಿಯ ರುಮಾಲು ಧರಿಸಿದ ಅಪ್ಪಟ ಮರಾಠ ದೇಶಸ್ಥ...ನಿಡಿದಾದ ಮೀಸೆಯನ್ನು ಚೇಳಿನ ಕೊಂಡಿಯಂತೆ ದುಂಡಗೆ ಸುತ್ತಿದ್ದಾನೆ. ಕಿವಿಯಲ್ಲಿ ವಜ್ರದ ಮಂಟಿ. ತೆಳ್ಳನೆಯ ಬಿಳಿಯ ನಿಲುವಂಗಿ, ಕಚ್ಚೆ ಪಂಚೆ, ಪಾದಗಳಲ್ಲಿ ಝರಿಯ ಭಡಾವು. ಮೈಯ ಹಸಿವೆಯನ್ನೆಲ್ಲ ಕಣ್ಣು ತುಟಿಗಳಲ್ಲಿ ಹರಿಹಾಯಿಸಿ ಮೈಗೆ ಮೈ ತಾಗುವಷ್ಟು ಶೀರ ಸನಿಹದಲ್ಲಿ ನಿಂತಿದ್ದಾನೆ. ನೋಡಿದೊಡನೆ ಮೈಗೆ ಬಿಸಿನೀರು ಎರಚಿದಂತಾಯಿತು. ನೆಟ್ಟ ನೋಟದಲ್ಲಿ ಹೊಟ್ಟೆಯ ಹಸಿವೆಯನ್ನಿಂಗಿಸಿಕೊಳ್ಳುವಂತೆ ನೋಡುತ್ತಾ ಅವನೆಂದ "ಧೂಳು ಬಿದ್ದರೆ ಕಣ್ಣುಜ್ಜಬೇಡಿರಿ. ನಿಮಗೆ ತೊಂದರೆಯಾಗಿದ್ದರೆ ಮೇಲಿನವರೆಗೆ ರಟ್ಟೆ ಹಿಡಿದುಕೊಳ್ಳುವೆ!"

"ಏನೂ ಬೇಕಿಲ್ಲ!" ಒಂದೇ ನುಡಿಯಲ್ಲಿ ಎದೆಯ ಸಿಟ್ಟೆಲ್ಲ ನುಗ್ಗಿ ಬಂತು.

ಅವನು ಪಿಚ್ಚನೆ ಹಲ್ಲನ್ನು ಬಿಟ್ಟು ಮೆಟ್ಟಿಲಿಳಿದ.

ಆಪಾದಮಸ್ತಕವೂ ಮುಳ್ಳು ಮುರಿದಂತಾಯಿತು. ನರನಾಡಿಗಳಲ್ಲಿ ಕೋಪದ ಝರಿ ಲಾವಾರಸದಂತೆ ಹರಿದಾಡಿತು. ಕಣ್ಣುಗಳನ್ನು ಶೀಡಿಕೊಳ್ಳುತ್ತಲೇ ಮೆಟ್ಟಿಲುಗಳನ್ನು ಏರತೊಡಗಿದಳು.

"ನಿಧಾನ ಕಣವ್ವಾ ಎಲ್ಲಾದರೂ ಮೇಲಿನಿಂದ ಬಿದ್ದೀಯ!"

ದನಿ ಬಂದ ಕಡೆ ನೋಟ ಹರಿಯಿತು. ಎದುರಿಗೆ ಬಚ್ಚುಬಾಯಿ ಆಡಿಸುತ್ತಾ ನಿಂತದ್ದು ಎಪ್ಪತ್ತರ ಹರಯದ ಹೆಣ್ಣು.

"ಇಲ್ಲ"

"ಅಷ್ಟೇಕೆ ಅವಸರ!"

"ಏನಿಲ್ಲ ಅಜ್ಜೀ."

ಅಲ್ಲಿ ನಿಲ್ಲದೆ ಒಂದೇ ಉಸುರಿಗೆ ಮೆಟ್ಟಿಲನ್ನೇರಿದಳು ಮೀನಾ. ಮನೆ ಮನೆಯ ನಂಬರನ್ನೂ ನಿಟ್ಟಿಸಿತು ನೋಟ. ಬುಸು ಬುಸು ಮೇಲುಸಿರು

ಬಿಡುತ್ತಾ, ಆರನೆಯ ಮಹಡಿಯನ್ನು ಮುಟ್ಟುತ್ತಲೂ ಬಾಲ್ಕನಿಯ ನೇರಕ್ಕೆ ಹೆಜ್ಜೆ ಹಾಕಿದಳು. ಅಲ್ಲಿಂದ ನಾಲ್ಕನೆಯದೇ ವಿನುಮಯಿಯ ವಾಸಗೃಹ. ಬಾಗಿಲ ಬಳಿಗೆ ಹೋಗುತ್ತಲೂ ಮೊದಲ ನೋಟಕ್ಕೆ ಗೋಚರಿಸಿದುದು ಬಾಗಿಲಿಗೆ ತಗುಲಿಸಿದ ಬೀಗ.

ಇದೇನು ?

ಎಲ್ಲೂ ಹೋಗದೆ ಮನೆಯಲ್ಲಿರುವುದಾಗಿ ತಿಳಿಸಿದ್ದ ಮಾವಿ ಹೋದು ದಾದರೂ ಎಲ್ಲಿಗೆ ? ಬಹುಶಃ ಪಕ್ಕದ ಮನೆಗೆ ಹೇಳಿ ಬರಲು ಹೋಗಿದಧ್ದೂ ಇರಬಹುದು. ಯೋಚನೆ ಬರುವುದರೊಳಗಾಗಿ ನೋಟ ಸಾಲುಮನೆಗಳ ಪರಿಶೀಲನೆಗೆ ಹೊರಟಿತು.

"ಓ...ಏನಮ್ಮಾ? ಬಂದು ಎಷ್ಟೊತ್ತಾಯಿತು ?"

ಬೆನ್ನ ಹಿಂದೆ ದನಿ ಬರುತ್ತಲೂ ಮರಾಠ ದೇಶಸ್ಥನ ನೆನಪು ಮೂಡಿ ಮೈ ಜುಂಮ್ಮೆಂದಿತು. ಥಟ್ಟನೆ ತಿರುಗಿ ನೋಡಿದಳು. ನೆರೆ ಮನೆಯ ರಮಾಬಾಯಿ ಇಳಿ ಬಿಸಿಲಿಗೆ ಮೈಯೊಡ್ಡಿ ನಿಂತು—"ವಿನುಮಯಿ ಅವರ ಗೆಳತಿಯೊಂದಿಗೆ ರಾಣಾಪೇಟ್ ಕಡೆ ಹೋಗಿದ್ದಾರೆ. ಇನ್ನೇನು ಬರಬಹುದು. ನಿಮಗೆ ಬೀಗದಕೈ ಕೊಡಲು ನನ್ನ ಕೈಗೆ ಕೊಟ್ಟಿದ್ದಾರೆ."

ರಮಾಬಾಯಿ ಒಳ ಹೋಗಿ ಬೀಗದಕೈ ತಂದು ಕೊಟ್ಟಳು. ಮುಖ ದಲ್ಲಿ ಎಳೆನಗು ಮಿನುಗಿ ಮಾಯವಾಯಿತು.

ಮಿಾನ ಮುಗುಳು ನಗೆ ಬೀರಿ—"ತುಂಬ ಥ್ಯಾಂಕ್ಸ್ !"

"ಪರವಾಯಿಲ್ಲ..." ರಮಾಬಾಯಿ ಪುನಃ ತನ್ನ ಹಲ್ಲುಗಳ ಪ್ರದರ್ಶನ ಮಾಡಿದಳು.

ಮಿಾನಾ ಬೀಗ ತೆಗೆದು ಒಳಹೋದಳು. ಬಟ್ಟೆಗಳನ್ನು ತುಂಬಿ ಅಣಿ ಯಾದ ಪೆಟ್ಟಿಗೆ ಮೊದಲು ಕಣ್ಣಿಗೆ ಬಿತ್ತು. ಖಾಲಿ ಮನೆ 'ಬಿಕೋ.' ಎನ್ನುತ್ತಿದೆ. ಒಂದು ಗಳಿಗೆ ಪಲ್ಲಂಕದ ಮೇಲೆ ಕುಳಿತಳು. ಪುಸ್ತಕ ಪತ್ರಿಕೆಗಳು ಅವಳ ನೆರವಿಗೆ ಮುಂದಾದುವು. ಅವುಗಳಲ್ಲೂ ಹೆಚ್ಚು ಹೊತ್ತು ಮನಸ್ಸನ್ನಿಡಲಾಗಲಿಲ್ಲ. ಅಲ್ಲಿಂದ ಕಣ್ತೆಗೆದರೆ ದಿಟ್ಟಿಗೆ ಪುನಃ ಪೆಟ್ಟಿಗೆ ಬಿತ್ತು. ಒಡನೆ ಚಿತ್ರಭಿತ್ತಿಯಲ್ಲಿ ಅಪ್ಪ ಅಮ್ಮ ಸುಳಿದಳಿದು.

"ಮುಂಬೈ ಯಾವ ಮಹಾ ದೂರ ವಿನಾ? ಏಕೆ ಅಷ್ಟೊಂದು ಯೋಚನೆ? ವರ್ಷಕ್ಕೊಮ್ಮೆ ಬಂದು ಹೋದರಾಯಿತು. ನಾವೂ ಯಾರಾದರೂ ಬರುತ್ತಿರುತ್ತೇವೆ. ಬೇಸರಿಸಬೇಡ" ಎಂದಿದ್ದರು ಅಪ್ಪ.

"ಸಮಯ ಸಂದರ್ಭಗಳಲ್ಲಿ ತಕ್ಷಣ ಹೋಗಿ ಬರುವ ಹಾದಿಯಿಲ್ಲ; ಅದೇ ಬೇಸರ. ವಿರಾಜ್ ವಿನುಮಯಿ ಇದ್ದಾರೆ. ಹೋಗಿ ಬರುತ್ತಿದ್ದರೆ ನಿನಗಷ್ಟು ಬೇಸರ ಕಾಣಿಸದೇನೋ. ನನಗಂತೂ ಈಗಲೇ ವ್ಯಥೆ ಹತ್ತಿದೆ" ಎಂದು ಕಂಬನಿ ಮಿಡಿದಿದ್ದರು ತಾಯಿ.

"ಭಾವ ಇಂಜನೀಯರು! ನಮ್ಮನ್ನು ನಾಳೆಯೇ ಮರೆತುಬಿಡುತ್ತೀಯೋ ಏನೋ." ಹುಬ್ಬು ಹಾರಿಸಿದ್ದರು ಹುಡುಗಿಯರು.

ಈಗ ನೋಡಿದರೆ ಈ ಜೀವನ ಸಾಕು ಎನಿಸಿಬಿಟ್ಟಿದೆ. ಸ್ವಲ್ಪ ದಿನಗಳಾದರೂ ತಣ್ಣಗಿದ್ದು ಬರುವಂತಿಲ್ಲ. ಯಾವಾಗಲೂ ಶಂಕರ್ ಅನ್ನುವುದೇ ಹಾಗೆ. 'ಈಗ ಹೋಗೋಣ, ಆಗ ಹೋಗೋಣ' ಅಷ್ಟರೊಳಗಾಗಿ ಮತ್ತೇನಾದರೂ ತಂಟೆ ತಕರಾರು ಕಾದಿರುತ್ತೆ. ಕೊನೆಯ ಪಕ್ಷ ಅಪ್ಪ ಅಮ್ಮನಾದರೂ ಈ ಕಡೆ ಬರಲಿಲ್ಲ. ಒಂದೇ ಬಾರಿಗೆ ಎಲ್ಲರನ್ನೂ ಮರೆತು ಬಿಡುವುದೆಂದರೆ ಹೇಗೆ? ಅದರಲ್ಲೂ ಈ ಮುಂಬೈ ಜೀವನ ನೆನೆಸಿಕೊಂಡರೆ ಎಲ್ಲಾದರೂ ಹೋಗಿ ಹಾಯಾಗಿ ಉಸಿರಾಡೋಣ ಎನ್ನಿಸುತ್ತೆ.

ಮುಂದಣ ಬಾಗಿಲನ್ನು ಮುಚ್ಚಿ ಟ್ರಾನ್ಸಿಸ್ಟರ್ ಸ್ವಿಚ್ಚನ್ನು ತಿರುಗಿಸಿದಳು ವಿನಾ. ಮೊದಲು ಹರಿದು ಬಂದುದು ಚಿತ್ರ ಸಂಗೀತ. ಅದು ಬೇಸರವೆನಿಸಿ ಬೇರೆಡೆಗೆ ತಿರುಗಿಸಿಳು. ನಂತರ ಕೇಳಿಬಂದುದು ಮೀರಾ ಭಜನ್.

ಆಹಾ! ಅದು ಎಷ್ಟು ಮೋಹಕ!

ಆದರೆ ಅದು ಕೆಲವೇ ನಿಮಿಷಗಳಲ್ಲಿ ಮುಗಿಯಿತು. ಅಯ್ಯೋ, ಮೊದಲೇ ಕೇಳಿದ್ದರೆ...?

ನೋಟ ಸುತ್ತಲೂ ಹೊರಳಿತು. ಮನೆಯ ಸಾಮಗ್ರಿಗಳನ್ನು ಅಚ್ಚುಕಟ್ಟಾಗಿ ಜೋಡಿಸಿಟ್ಟಾಗಿದೆ. ಇನ್ನು ಹೊರಡುವುದೊಂದು ಬಾಕಿ. ಯೋಚನೆ ಬಂದೊಡನೆಯೇ ಫಳಕ್ಕನೆ ಕಣ್ಣುಗಳಲ್ಲಿ ನೀರಾಡಿತು. ತಾನೂ

ಅವಳೊಂದಿಗೆ ಹೋಗಬಹುದಾಗಿದ್ದರೆ. ಕೇವಲ ಐನೂರು ರೂಪಾಯಿಗಳಿಗಾಗಿ ಎಷ್ಟೊಂದು ದುರ್ಭಿಕ್ಷ ? ನನ್ನನ್ನು ಕೆಲಸ ಮಾಡಗೊಡಿಸಿದ್ದರೆ ನನ್ನ ಖರ್ಚನ್ನು ನಾನೇ ಭರಿಸಬಹುದಾಗಿತ್ತು—ಯಾವುದೂ ಇಲ್ಲ.

ಒಳಗಡೆ ಒಂದು ಸುತ್ತು ಹಾಕಿ, ಕಿಟಕಿಯಿಂದ ಕಿಟಕಿಗೆ ಚಲಿಸಿ ಬೃಹತ್ ಮುಂಬೈಯಿಯ ಮೇಲೆ ಪಕ್ಷಿ ನೋಟ ಬೀರಿದರೆ ತಲೆ ಚಿಟ್ಟು ಹಿಡಿದಂತಾಯಿತು. ಎಲ್ಲಿಂದ ಎಲ್ಲಿಯವರೆಗೂ ನರಜಂತುಗಳು ಮುಲು ಮುಲು ಹರಿಯುವಂತೆ ತೋರುತ್ತಿದ್ದಾರೆ. ವಾಹನಗಳು ಬೊಬ್ಬೆ ಇಡುತ್ತಿವೆ. ಒಂದೆರಡು ಕ್ಷಣಗಳೊಳಗಾಗಿ ಬೇಸರ ಮೂಡಿತು. ಮತ್ತೆ ಮರಳಿ ಪಲ್ಲಂಕದ ಮೇಲೆ ಕುಳಿತಳು. ಟ್ರಾನ್ಸಿಸ್ಟರ್ ಯಾವುದೋ ಗೊತ್ತು ಗುರಿಯಿಲ್ಲದ ಹಾಡು ಹಾಡಿ ಬೇಸರ ಮೂಡಿಸಿತು. ಎದೆಯಾಳ ದಲ್ಲಿ ಏನೋ ಒಂದು ಬಗೆಯ ಸಣ್ಣ ಭಯ—ಭೀತಿ. ದೇಹಾದ್ಯಂತ ಮೈನವಿರೆದ್ದಿತು. ಎದ್ದು ಶತಪಥ ತಿರುಗಿದಳು. ಹೋಗಿಬಿಡೋಣವೇ ಎಂಬ ಯೋಚನೆಯೂ ಬಂತು. ಆದರೆ ವಿನೂಮಾಮಿಯನ್ನು ನೋಡದೆ ಹೋಗುವುದು ಹೇಗೆ ? ಅಪ್ಪ ಅಮ್ಮನಿಗೆ ಕಳುಹಿಸುವ ನಿರೂಪವೂ ಉಂಟಲ್ಲ ? ಗಂಡನನ್ನು ಕಾಡಿ ಬೇಡಿ ಹತ್ತು ರೂಪಾಯಿ ತೆಗೆದುಕೊಂಡು ಎರಡು ಜೋಡಿ ಅಂದವಾದ ಲೋಲಕ್ಕುಗಳನ್ನು ಫ್ಯಾನ್ಸಿ ಅಂಗಡಿಯಲ್ಲಿ ತೆಗೆದು ಕೊಂಡಿದ್ದಾಗಿದೆ. ಅದರೊಂದಿಗೆ ಮೂರು ವರ್ಷಗಳಿಂದ ಕಲೆ ಹಾಕಿದ ಸ್ಟ್ಯಾಂಪುಗಳನ್ನೂ ಕಳುಹಿಸುವುದಿದೆ. ಹುಡುಗಿಯರಿಬ್ಬರಿಗೂ ಬಗೆ ಬಗೆಯ ಸ್ಟ್ಯಾಂಪುಗಳನ್ನು ಕಲೆ ಹಾಕುವ ಅಭಿಲಾಷೆ. ಎಲ್ಲವನ್ನೂ ಸ್ವತಃ ನಾನೇ ಕೊಟ್ಟು ಬರುವಂತಿದ್ದರೆ...?

ಅಯ್ಯೋ, ಏನೆಲ್ಲ ಯೋಚನೆ ಬರುತ್ತೆ ? ನನ್ನ ಮನಸ್ಸೇಕೆ ಇಷ್ಟೊಂದು ಅಸ್ಥಿರ ? ಮತ್ತೂ ಮತ್ತೂ ಅದನ್ನೇ ಕುರಿತು ಯೋಚಿಸುವು ದೇನು ಚೆನ್ನ ? ಗಾಳಿಗೆ ಗುದ್ದಿ ನೋಯಿಸಿಕೊಂಡಂತಾಗುತ್ತಿದೆ ನನ್ನ ಸ್ಥಿತಿ. ಎಷ್ಟು ಲಭ್ಯವೋ ಅಷ್ಟರಲ್ಲೇ ತೃಪ್ತಿ ಪಟ್ಟರೆ ಮನಃಕ್ಲೇಶವೇ ಇರುವುದಿಲ್ಲ. ಆದರೂ....

ಮಾಮಿ ಬರುವುದು ಇನ್ನೆಷ್ಟು ಹೊತ್ತೋ ? ಒಬ್ಬಳೇ ಕುಳಿತು ಮಾಡುವುದೇನು ? ಅವರಂತೂ ಒಂದು ತಿಂಗಳು ಹಾಯಾಗಿ ಕಳೆದು

ಬರುತ್ತಾರೆ. ಈ ಹಾಳು ಚಿಂತೆಗಳಿಲ್ಲದೆ ಸ್ವಚ್ಛಂದವಾಗಿರುವುದೆಷ್ಟು ಚೆನ್ನ ? ವಿದ್ಯಾಭ್ಯಾಸ ಮುಗಿಸುವವರೆಗೆ ಚಿಂತೆ ಏನೆಂಬುದೇ ತಿಳಿದಿರಲಿಲ್ಲ. ಸಂಸಾರಕ್ಕೆ ಕಾಲಿಟ್ಟದ್ದೇ ತಡ ಮನಸ್ಸು ನೂರು ನೂರು ಚಿಂತೆಗಳ ಬೀಡು. ಹೆಜ್ಜೆ ಹೆಜ್ಜೆಯೂ ಮೊಟಕು...ಅದೇಕೆ ಹೀಗೆ ?

ಶಂಕರ್ ಮುಂಬೈ ಜೀವನಕ್ಕೆ ಹಣವೊದಗಿಸಲು ಸಮರ್ಥನಾದರೂ ಹಣದ ಥೈಲಿಯನ್ನು ದಿನೇ ದಿನೇ ವೃದ್ಧಿಗೊಳಿಸಲು ಅಸಮರ್ಥ. ದೈಹಿಕ ಶ್ರಮದ ದಣಿವನ್ನೂ ಮಾನಸಿಕ ಶ್ರಮದ ರೊಚ್ಚನ್ನೂ ತಲೆಯ ಮೇಲೆ ಹೊತ್ತು ಮನೆಗೆ ಮರಳುವುದು ಅವನ ಸ್ವಭಾವ. ಹೆಚ್ಚು ಮಾತನಾಡು ವಂತೆಯೂ ಇಲ್ಲ. ವಾರಕ್ಕೊಮ್ಮೆ ಬೀಚ್ ಮತ್ತು ಮಂಗೇಶ್ ದೇವಸ್ಥಾನ ಗಳ ಕಡೆ ಹೋಗಿ ಬಂದರೆ ಮುಗಿಯಿತು. ಕಳೆದುಳಿದ ಹೊತ್ತೆಲ್ಲಾ ವ್ಯರ್ಥ.

ಘಣ. ಘಣ. ಘಣ. ಘಣ. ಘಣ.

ಫೈರ್ ಎಂಜಿನ್ ! ಛೇಃ ! ಯಾವ ಕಡೆ ಬೆಂಕಿ ಬಿದ್ದಿದೆಯೋ ಏನೋ. ಸದ್ಯ ಬ್ರಾಹ್ಮೀ ಆಯಿಲ್ ಕಂಪನಿಗೆ ಬೀಳದಿದ್ದರೆ ಸಾಕು. ಅಂದೇ ಹೇಳಿದ್ದರು ಶಂಕರ್. "ಆಯಿಲ್ ಕಂಪನಿಗಳ ಸಹವಾಸ ಬಹಳ ಕಷ್ಟ. ಕೆಲಸಗಾರರು ಕಲಿತವರಲ್ಲ ; ಬೀಡಿ ಸಿಗರೇಟುಗಳ ಚಟದಿಂದ ಕಡ್ಡಿ ಗೀರಿದ ರೆಂದರೆ ಮುಗಿಯಿತು."

ಮೀನಾ ಕಿಟಕಿಯ ಬಳಿಗೆ ಹೋದಳು. ನೋಟ ಸುತ್ತ ಮುತ್ತಲೂ ಹರಿಯಿತು. ಅಲ್ಲಿಗೂ ಮನಸ್ಸು ನಿಲ್ಲಲಿಲ್ಲ. ಕಿಟಕಿಯಿಂದ ಕಿಟಕಿಗೆ ಓಡಾಡಿ ನೋಡಿದ್ದೂ ಆಯಿತು. ಭಯಭರಿತ ಮನಸ್ಸು ಮಿಲ್ಲುಗಳು ಉಗುಳುವ ಹೊಗೆಯನ್ನು ಬೆಂಕಿಯೆಂದೇ ಭ್ರಮಿಸಿತು.

ವೋಲ್ಟಾಸ್ ಕಂಪನಿಯ ನೇರಕ್ಕೆ ಬಾಯ್‌ಖಳಾ ಸ್ಟೇಷನ್ ಬಳಿ ಕಪ್ಪಗೆ ಹೊಗೆ ಕಾಣಿಸುತ್ತಿದೆಯಲ್ಲಾ ಏನು ಗತಿ ? ಬ್ರಾಹ್ಮೀ ಆಯಿಲ್ ಮಿಲ್ಲಿರುವುದೇ ಅಲ್ಲಿ ! ಛೇಃ ! ಛೇಃ ! ನನಗೆಷ್ಟು ಕಳವಳ ಆತಂಕ ? ಓ.... ರಾಣಾ ಮ್ಯೂಜಿಯಂ ಕಡೆಯೂ ಹೊಗೆಯೇಳುತ್ತಿದೆ, ಅಲ್ಲ ಅಲ್ಲ, ಆದೆಲ್ಲಿ ? ಕ್ಯಾಪಿಟಲ್ ಟಾಕೀಸ್ ಕಡೆ ಇರಬಹುದೆ ಎಲ್ಲೋ ಏನೋ. ಅಂತೂ ಈ ಮನಸ್ಸಿಗೆ ಭ್ರಾಂತಿ.

ಮೇಜಿನ ಮೇಲಿದ್ದ ಟೆಲಿಫೋನು ಟಂಟಣಿ ಸದ್ದು ಮಾಡಿ ಕರೆ ನೀಡಿತು.

"ಹಲೋ !"

"ಹಲೋ ವಿಾನಾ !"

"ಓ...! ಎಲ್ಲಿಂದ ಮಾತಾಡುತ್ತಿದ್ದೀರಿ ? ಇಂದೇಕೆ ಇಷ್ಟು ಹೊತ್ತು ? ನಿಮಗಾಗಿ ಬಹಳ ಹೊತ್ತು ಕಾದೆ ಶಂಕರ್."

"ಕೆಲಸವಿತ್ತು..........ಮನೆಯಲ್ಲಿ ನೀನಿರಲಿಲ್ಲ. ಹಾಗೇ ಚಂದ್ರ ರೆಸ್ಟೋರೆಂಟಿಗೆ ಬಂದೆ. ಇಲ್ಲಿಂದಲೇ ಮಾತಾಡುತ್ತಿರುವೆ."

"ಏನು ತೆಗೆದುಕೊಂಡಿರಿ ?"

"ಉಪ್ಪಿಟ್ಟು ಕಾಫಿ."

"ಮನೆಯಲ್ಲಿ ಅದನ್ನೇ ಮಾಡಿಟ್ಟು ಬಂದಿದ್ದೆ. ನೀವು ಒಳಗಡೆ ಹೋಗಲೇ ಇಲ್ಲವೇ ?"

"ಹೋಗದೆ ಏನು ? ಮುಖ ತೊಳೆದುಕೊಂಡು ಬಟ್ಟೆ ಬದಲಿಸಿ ಕೊಂಡು ಬಂದೆ. ಪಾತ್ರೆ ತೆಗೆದು ನೋಡಲಿಲ್ಲ ಅಷ್ಟೇ. ನೀನು ಹೇಗೆ ಬರುವೆ ?"

"ಮಾವಿಾ ಸ್ಟೇಷನ್ನಿಗೆ ಹೋಗುವಾಗ ಹಾಗೇ ಬರುವೆ ?"

"ಹಾಗಿದ್ದರೆ ನಾನು ಬರುವುದು ಬೇಕಿಲ್ಲವೇ ?"

"ಮತ್ತೇಕೆ ತೊಂದರೆ ?"

"ನೀನು ಬರುವುದು ತಡವಾಗಬಹುದು...?"

"ಹೌದು ; ಅಡಿಗೆ ಮಾಡಿಟ್ಟು ಬಂದಿದ್ದೇನೆ. ನೀವು ಊಟ ಮಾಡಿರಿ. ನನ್ನನ್ನು ಕಾಯುವುದು ಬೇಡ. ಎಲ್ಲಾದರೂ ಹೊರಗಡೆ ಹೋಗುವಿರಾ?"

"ಇಲ್ಲ. ಮನೆಯಲ್ಲಿ ಹಾಯಾಗಿ ಮಲಗಿಬಿಡುವೆ."

"ಇನ್ನೇನು ಆರಾಮು."

ಎರಡೂ ಕಡೆಯಿಂದ ಮೆಲುನಗೆಯು ಮರ್ಮರಿಸಿತು.

"ಊಟ ಮಾಡಿಬಿಡಿ."

"ಅಚ್ಛಾ !"

ನಾನೆಷ್ಟು ಭಯಪಟ್ಟಿದ್ದೆ. ಹಾಗೆಂದು ಹೇಳಿದರೆ ಶಂಕರ್ ನಕ್ಕು ಬಿಟ್ಟಾರು ! ಮನಸ್ಸು ಬಲು ಕೆಟ್ಟದ್ದು ವಿನಾಕಾರಣ ಕಳವಳ ಮಾಡಿಸುತ್ತೆ ;

ಹುಚ್ಚು ಹಿಡಿಸುತ್ತೆ. ಯೋಚನೆ ಮಾಡುತ್ತಲೂ ತನ್ನಷ್ಟಕ್ಕೆ ತಾನೇ ನಗುವುಕ್ಕಿ ಬಂತು. ದೈನಿಕವೊಂದನ್ನು ಹಿಡಿದು ಪಲ್ಲಂಕದ ಮೇಲೆ ಕುಳಿತುಕೊಂಡಳು. ದಿನಚರಿ ವರ್ತಮಾನಗಳನ್ನು ನೋಡುವುದರೊಳಗಾಗಿ ಪುನಃ ಟಿಂಟಿಣಿ ನಾದ.

"ಹಲೋ !"

"ಹಲೋ ಮಿನಾ ?"

"ಓ ! ಬಹಳ ಒಳ್ಳೆಯವರು ನೀವು ! ನನಗೆ ಬಾ ಎಂದು ಹೇಳಿ ಪೇಟೆಗೆ ಹೋಗುವುದೇ ?"

"ತಪ್ಪಾಯ್ತು ಮಿನಾ ! ನೀನು ಬರುತ್ತೀಯೆಂದು ಐದೂವರೆಯ ವರೆಗೂ ಕಾದೆ. ನಿನಗೆ ಟೆಲಿಫೋನು ಮಾಡಿದನಂತರ ಪೇಟೆಗೆ ಹೋಗುವುದು ನಿಶ್ಚಿತವಾಯಿತು."

"ಹೋಗಲಿ ಬಿಡಿ."

"ಇನ್ನು ಬಹಳ ಹೊತ್ತಾಗುವುದಿಲ್ಲ. ಇದೊ, ಹೊರಟೆ. ನೀನು ಬಂದಿದ್ದೀಯೋ ಇಲ್ಲವೋ ಎಂಬುದನ್ನು ತಿಳಿಯುವುದಕ್ಕಾಗಿ ರಿಂಗ್ ಮಾಡಿದೆ."

"ಹಿಂದಿರುಗಿ ಹೋಗೋಣವೆ ಎಂದು ಯೋಚಿಸುತ್ತಿದ್ದೆ."

"ಓ...ಇಲ್ಲಿಂದ ನಿನಗೇನಾದರೂ ತರಬೇಕೆ ?"

"ಏನೂ ಬೇಡ ಮಾಮಾ ನಾನು ಎರಡು ಜೊತೆ ಲೋಲಕ್ಕುಗಳನ್ನು ತಂದಿದ್ದೇನೆ."

"ಸರಿ, ಮಿನಾ."

"ಹೊತ್ತು ಮಾಡಬೇಡಿ."

"ಇಲ್ಲ, ಇಲ್ಲ."

"ಸರಿ, ಇಲ್ಲೇ ಇರುವೆ."

"ಬರುವೆ ಮಿನಾ."

"ಹ್ಞೂ......"

ರಿಸೀವರನ್ನು ಕೆಳಗಿಟ್ಟು ಪುನಃ ಪತ್ರಿಕೆಗೆ ಕೈ ಹಚ್ಚಿದಳು ಮಿನಾ.

ಎಲ್ಲೀ ಆಗಲಿ, ಕಾಯುವುದೆಂದರೆ ಬಲು ಬೇಸರ. ಅಲ್ಲ, ಏನೋ ಒಂದು ಬಗೆಯೆನ್ನಿಸುತ್ತನೆ. ಏನೆಂಬುದೇ ಅರ್ಥವಾಗುವುದಿಲ್ಲ. ಬಹುಶಃ ನಮ್ಮವರ ನೆನಪು...ಹೋಗಿಬರೋಣವೆಂದರೆ ಅದೂ ನನ್ನ ಹಣೆಯಲ್ಲಿ ಬರೆಯಲಿಲ್ಲ. ದೈನಿಕವನ್ನು ಬದಿಗಿಟ್ಟು ವಾಸಿಕವೊಂದನ್ನು ತೆಗೆದು ಕೊಂಡಳು. ಒಂದೆರಡು ಹಾಳೆಗಳನ್ನು ತಿರುವಿ ಹಾಕುವುದರೊಳಗಾಗಿ ತಲೆಬಾಗಿಲ ಕರೆಗುಂಟೆ ಕಿರ್ರನೆ ಸದ್ದುಮಾಡಿ ಕರೆ ನೀಡಿತು. ಮಾವಿಯೇ ಇರಬಹುದೆಂದೆನಿಸಿ ಮೈ ಪುಳಕಿತವಾಯಿತು. ಬೇಗನೆ ಕದ ತೆರೆದಳು ವಿನಾನ. ಮಾವಿಗೆ ಬದಲಾಗಿ ಮಾವ ನಿಂತಿದ್ದ.

"ಏನಮ್ಮಾ, ಯಾವಾಗ ಬಂದೆ ?" ಮಂದಹಾಸ ಬೀರಿದ ವಿರಾಜ್.

"ಆಗಲೇ ಬಂದೆ."

ಸುತ್ತುಮುತ್ತೂ ನೋಟ ಹರಿಸಿ "ವಿನೂ ಎಲ್ಲಿ ?

"ಪೇಟೆಗೆ ಹೋಗಿದ್ದಾರೆ."

"ನಿನ್ನನ್ನಿಲ್ಲಿ ಸೆರೆಹಾಕಿ ಹೋಗಿದ್ದಾಳೆಯೆ ? ನೀನೇಕೆ ಹೋಗಲಿಲ್ಲ ?"

"ನಾನು ಬರುವ ಮೊದಲೇ ಹೋಗಿದ್ದರು."

ಮುಂದಣ ಕದವನ್ನು ಮುಚ್ಚಿ ವಿರಾಜ್ ಕೋಟು ಕಳಚುತ್ತಾ ತುಂಟನಗೆ ಬೀರಿದ—"ಈಗ ಯಜಮಾನಿ ಇಲ್ಲ. ಯಜಮಾನಿಯ ಪಾತ್ರ ವನ್ನು ನೀನೇ ನಿರ್ವಹಿಸಬೇಕಾಗುತ್ತದೆ."

ವಿನಾನಾ ಮಾತಾಡದೆ ಮುಗುಳು ನಕ್ಕಳು.

ವಿರಾಜ್ ಒಂದು ಕ್ಷಣ ಯೋಚಿಸಿದ. ಮನಸ್ಸು ವಿವಶವಾಯಿತು. ಮೈಯ ಹಸಿವೆಯೆಲ್ಲ ಕಣ್ಣು ತುಟಿಗಳಲ್ಲಿ ಹೊರಹೊಮ್ಮಿತು. ಮುಖದ ಮೇಲೆ ತುಂತುರು ತುಂತುರಾಗಿ ಮೂಡಿದ ಬೆವರಿನ ಕಣಗಳನ್ನು ಕರವಸ್ತ್ರ ದಿಂದ ಒರಸಿಕೊಳ್ಳುತ್ತಾ "ಬೀರುವಿನೊಳಗೆ ನನ್ನ ಧೋತಿಯಿದೆ ತೆಗೆದು ಕೊಡು ವಿನಾನಾ" ಎಂದ.

ಅವನ ಮುಖದ ಮೇಲಿನ ಹಾವಭಾವಗಳನ್ನು ನೋಡುತ್ತಲೂ ತಾನು ಬಾಲ್ಕನಿಯಲ್ಲಿರುವುದು ಲೇಸು ಎನ್ನಿಸಿತು ವಿನಾನಳಿಗೆ. ಅವರು ಧೋತಿ ಕೇಳಿದುದಕ್ಕೆ ಕೊಟ್ಟು ಹೊರಹೋಗಿಬಿಡುವೆ ಎಂದುಕೊಳ್ಳು ತ್ತಲೇ ಬೀರುವಿಗೆ ಕೈ ಹಾಕಿದಳು. ಸಾಲಾಗಿ ಜೋಡಿಸಿದ ಬಟ್ಟೆಗಳಲ್ಲಿ

ಧೋತಿಯನ್ನು ಪತ್ತೆಹಚ್ಚಲು ಕೆಳಗಿನಿಂದ ಮೇಲಿನವರೆಗೂ ನೋಟ ಹರಿಸಿದಳು. ಹಿಂದಿನಿಂದ ಹೊಳೆಹೊಳೆಯುವ ಆಶಾಪೂರ್ಣಲೋಚನಗಳೆರಡೂ ಇತ್ತಲೇ ನಿಟ್ಟಿಸಿದವು. ಹೆಣ್ಣಿನ ಬೆನ್ನಹಿಂದಿನ ಮಾಟವಾದ ಮೈ ಹಸಿದ ಮೈಗೆ ಹಬ್ಬವಾಗಿ ತೋರಿತು.

"ಅಲ್ಲೇ ಕೆಳಗಡೆ ಇದೆ ಮೀನಾ."

ದನಿ ಕಿವಿಯನ್ನು ತಾಗುವುದರೊಳಗಾಗಿ ಧೋತಿ ಕಣ್ಣಿಗೆ ಬಿದ್ದಿತು. ಅದನ್ನು ತೆಗೆದುಕೊಡುತ್ತಲೂ "ಒಂದು ಲೋಟ ನೀರು ಮೀನಾ" ಎಂದ ವಿರಾಜ್. ಒಣಗಿದ ತುಟಿಯನ್ನು ನಾಲಿಗೆ ಸವರಿತು. ಉದ್ವೇಗದಿಂದ ದನಿ ಕಂಪಿಸಿತು.

ಮೀನಳಿಗೆ ಕೈಕಾಲು ಕಟ್ಟಿದಂತಾಯಿತು. ಒಳಹೋಗಿ ನಲ್ಲಿಯನ್ನು ತಿರುಗಿಸಿ ಲೋಟವನ್ನು ನೀರಿಗೊಡ್ಡಿದಳು. ಬಹುಶಃ ಕೈ ಅದುರಿತೋ ಏನೋ ನೀರು ಚೆಲ್ಲಿತು. ನೀರಿನೊಂದಿಗೆ ಹಿಂತಿರುಗುವುದರೊಳಗಾಗಿ ವಿರಾಜ್ ಧೋತಿಯನ್ನು ಸುತ್ತಿಕೊಂಡು ಒಳಬಂದಿದ್ದ. ಮುಖದಲ್ಲಿ ಭಾವೋದ್ರೇಕ ಸ್ಪಷ್ಟವಾಗಿ ಕಾಣಿಸುತ್ತಿತ್ತು. ನೀರನ್ನು ತೆಗೆದುಕೊಳ್ಳುವಾಗ ಲೋಟಿಯ ಸಹಿತ ಅವಳ ಹೂ ಬೆರಳುಗಳನ್ನು ಅದುಮಿ ಹಿಡಿದು ಮೋಹಕ ನಗೆಬೀರಿದ.

ಮೀನಾ ಸರಕ್ಕನೆ ಕೈಬೆರಳುಗಳನ್ನು ಹಿಂದಕ್ಕೆಳೆದುಕೊಂಡಳು. ಹುಬ್ಬುಗಳು ಗಂಟಾದುವು. ಮುಖ ಗಂಭೀರವಾದರೂ ನರನಾಡಿಗಳಲ್ಲಿ ಕೋಪ ಸಂತಾಪಗಳ ಝರಿ ಜರ್‍ರನೆ ಹರಿದಾಡಿತು.

"ಸಿಟ್ಟೇಕೆ ರಾಣಿ ?"

"ದಾರಿ ಬಿಡಿ. ನಾನು ಹೊರಹೋಗುವೆ."

"ನೀನು ಸಿಟ್ಟುಬಂದಾಗ ಬಲು ಸುಂದರಿಯಾಗಿ ತೋರುವೆ."

"............"

"ನಿಜವಾಗಿಯೂ ಮೀನಾ. ನಿನ್ನನ್ನು ನೋಡಿದರೆ ಮುದ್ದಿಸೋಣವೆನ್ನಿಸುತ್ತೆ."

ಹೊರಹೋಗೋಣನೆಂದರೆ ವಿರಾಜ್ ಬಾಗಿಲಲ್ಲಿ ನಿಂತು ನೀರು ಗುಟುಕಿಸುತ್ತಾ ಕಾದಿದ್ದ. ಹೇಗಾದರೂ ಇಲ್ಲಿಂದ ತಪ್ಪಿಸಿಕೊಂಡು

ಹೊರಹೋದರೆ ಸಾಕು. ಅಥವಾ ವಿನೂಮಾಮಿ ಬೇಗನೆ ಮನೆಗೆ ಮರಳಿದರೂ ಸಾಕು ಎಂದು ಮೊರೆ ಇಟ್ಟಿತು ಎದೆಯ ಹಕ್ಕಿ.

"ಕೋಪವೇಕೆ ಮಿನಾ? ಜೀವನದ ಸಾರವನ್ನು ಪೂರ್ಣ ಸವಿಯದ ಮೇಲೆ ಬಾಳಿದ್ದೂ ಪ್ರಯೋಜನವಿಲ್ಲ; ಯೋಚಿಸಿ ನೋಡು."

....ಶುದ್ಧ ಪಶು...

"ಮಿನಾ....ನಾವಿಬ್ಬರೂ ಬೇರೆಯಲ್ಲ. ನಮ್ಮ ನಮ್ಮ ಆತ್ಮಗಳು ಹೊಂದಿಕೊಳ್ಳುತ್ತವೆ. ನಮ್ಮ ನಮ್ಮ ನೆತ್ತರೂ ಹೊಂದಿಕೊಳ್ಳುತ್ತವೆ. ನೀನು ಭಯಪಡುವ ಕಾರಣವಿಲ್ಲ. ಬಾ ಅಲ್ಲೇಕೆ ನಿಂತೆ? ಈ ಲೋಟ ತೆಗೆದುಕೊ..."

ಒಡಲ ಹಸಿವೆಯಲ್ಲಾ ಭಾವೋದ್ವೇಗದಲ್ಲಿ ಪ್ರಕಟವಾಯಿತು. ಅವನ ರೀತಿಯನ್ನು ನೋಡುತ್ತಲೂ ತನ್ನ ಶಕ್ತಿಯೆಲ್ಲಾ ಉಡುಗಿಹೋದಂತೆ ಭಾಸವಾಗಿ ಆಪಾದಮಸ್ತಕವೂ ಕಂಪನದ ಅಲೆ ಹರಿದಾಡ ಹತ್ತಿತು. ಅವನು ಎಷ್ಟೇ ತಪ್ಪು ಮಾಡಿದರೂ ಹೀಗಾದಾನೆಂದು ಭಾವಿಸಿರದ ಅವಳ ಮೈ ನವಿರೆದ್ದಿತು.

"ನಿನ್ನನ್ನು ನನಗೇ ಕೊಡಬೇಕೆಂಬ ಇಚ್ಛೆ ನಿಮ್ಮಮ್ಮನಿಗಿತ್ತು. ಅದು ಈಗಲೂ ಮಾರಲಿಲ್ಲ ಮಿನಾ...!"

"....ಇಷ್ಟು ಮಂದಿಯನ್ನು ಹಾಳಮಾಡಿಯೂ ಸಾಲದಲ್ಲಾ ಛೀ!"

"ಇಷ್ಟು ಸಿಕ್ಕಿದರೆ ಸಾಕು ಎನ್ನುವ ಹುಡುಗಿಯರು ಎಷ್ಟು ಮಂದಿ ಬೇಕು? ನೀನೇನು ಹೀಗಿದ್ದಿ?"

"ಶ್......."

"ನೀನೇನು ಬೆಕ್ಕೆ? ಹಿಹ್ಹಿಹ್ಹೀ!"

ಸಾಗರಾನಿಲ ಭರ್ರನೆ ಒಳನುಗ್ಗಿ ಬಂದ. ಕಿಟಕಿಯ ಕದಗಳು ಜಿಣಿ ಜಿಣಿ ಸದ್ದುಗೈದುವು. ಹುಚ್ಚೆದ್ದು ಬೆವರಿದ ಮೈ ತಂಗಾಳಿಯ ತಂಪಿಗೆ ತುಸು ತಣ್ಣಗಾದರೂ ತನು ತಣಿಯಲಿಲ್ಲ. ಒಂದು ಕ್ಷಣ ಒಂದೇ ಒಂದು ಕ್ಷಣದೊಳಗಾಗಿ ಮೈಯಲ್ಲಿ ಮತ್ತೆ ಬಿಸಿ ಮೂಡಿತು.

೦ ೦ ೦ ೦

ಚೈತ್ರದ ಹೊಸ್ತಿಲನ್ನು ದಾಟಿ ವೈಶಾಖ ವೈಖರಿಯಲ್ಲಿ ಮೈಮರೆದಿದ್ದಾಳೆ—ವಸಂತಋತುಕನ್ಯೆ. ಸಾಗರಾನಿಲ ಅಲೆಯಲೆಯಾಗಿ ಸುಯ್ಯನೆ ಸುಯ್ಯುತ್ತ ಕಿಟಕಿಯಲ್ಲಿ ನುಗ್ಗಿ ಬಂದ. ತಂಗಾಳಿಯ ತಣ್ಪನ್ನು ಹೀರಿ ತನುಮನಗಳು ಒಂದು ಗಳಿಗೆ ಉಲ್ಲಾಸಗೊಂಡುವು.

ಕಳೆದ ಆರೇಳು ತಿಂಗಳಿಂದ ಏನೆಲ್ಲಾ ನಡೆದಿದೆಯೋ ದೇವರಿಗೇ ಗೊತ್ತು. ಏನೂ ತಿಳಿಯುವಂತಿಲ್ಲ. ತಿಳಿಯುವಂತಿದ್ದರೂ ತಿಳಿಯುವ ಮನಸ್ಸಿಲ್ಲ. ಅಂದಿನಿಂದಲೂ ತನ್ನವರು ಸರದಿಯ ಪ್ರಕಾರ ಬಂದು ಹೋಗಿದ್ದರು. ಎರಡು ತಿಂಗಳು ತಾಯಿಯ ಸರದಿಯಾದನಂತರ ಮೂವರು ಅಣ್ಣ ತಮ್ಮಂದಿರ ಸರದಿಯೂ ನಡೆಯಿತು. ಈ ಸಲ ತಂಗಿಯನ್ನು ಕರೆಸಿ ಕೊಳ್ಳುವ ಮನಸ್ಸು.

....ಅಯ್ಯೋ, ಏಕೆ ಹೀಗಾಯಿತು ? ಇದಕ್ಕೆ ಯಾರು ಹೊಣೆ ?

ಮನದಲ್ಲಿ ಮೂಡಿ ನಿಂತ ಪ್ರಶ್ನೆಗೆ ನಿಚ್ಚಳವಾದ ಉತ್ತರವನ್ನು ಹುಡುಕಲು ಬುದ್ಧಿ ಸರ್ವ ಸಹಸಾ ಹೆಣಗುತಿತ್ತು.

......ನಿಜವಾಗಿಯೂ ಯಾರು ಹೊಣೆ ? ನಾನೆ ? ವಿರಾಜರೇ ? ಶಂಕರನೇ ? ಸ್ವತಃ ಮೀನಳೇ ? ಅಥವಾ ಶೈಲಳೇ ?

ನಾನವಳನ್ನು ಮನೆಗೆ ಬರಲು ಹೇಳದಿದ್ದರೆ ಇದರ ಕತೆಯೇ ಬೇರೆ ಯಾಗುತಿತ್ತು. ಶಂಕರ ಅವಳನ್ನು ನನ್ನೊಂದಿಗೆ ಕಳುಹಿಸಲು ಒಪ್ಪಿದ್ದಿದ್ದರೆ ನಾನು ರೈಲು ನಿಲ್ದಾಣಕ್ಕೆ ಹೋಗುವಾಗ ಅವಳನ್ನು ಅವರ ಮನೆಯಿಂದಲೇ ಕರೆದೊಯ್ಯುತ್ತಿದ್ದೆ. ಆಗಲೂ ಅವಳು ಇಲ್ಲಿಗೆ ಆಗಮಿಸುತ್ತಿರಲಿಲ್ಲ. ವಿರಾಜ್ ಭೂಷಣವಾಗಿ ಆಫೀಸಿನಲ್ಲಿ ಉಳಿದಿದ್ದಿದ್ದರೆ ಈ ಪ್ರಶ್ನೆ ಉದ್ಭವಿಸುತ್ತಿರಲಿಲ್ಲ. ಮೀನಾ ರೊಚ್ಚಿಗೆದ್ದು ಅವರ ಮೇಲೆ ಸಾಗಿಹೋಗದಿದ್ದಿದ್ದರೂ ಈ ಪ್ರಕರಣ ನಡೆಯುತ್ತಿರಲಿಲ್ಲ. ಶೈಲಾ ರಾಣಾಪೇಟ್ ಕಡೆ ಹೋಗಲು ನನಗೆ ಪ್ರೋತ್ಸಾಹಿಸದಿದ್ದಿದ್ದರೆ ನಾನು ತಣ್ಣಗೆ ಹಾಯಾಗಿ ಮನೆಯಲ್ಲಿರುತ್ತಿದ್ದೆ. ಸುತ್ತುಮುತ್ತ ಎಲ್ಲರನ್ನೂ ಸೇರಿಸಿ ಬಲೆ ಹೆಣೆಯಿತು ದುರ್ವಿಧಿ.

ಚಿದಾಕಾಶದಲ್ಲಿ ಹಳೆಯ ನೆನಹುಗಳು ತೇಲಿ ನಲಿದುವು.

ಅಂದು ಪ್ರಾಸಂಗಿಕವಾಗಿ ಮಿಸಾ ನುಡಿದಿದ್ದಳು: "ವಿನೂ ಮಾಮಿ! ನಿಮ್ಮ ರೀತಿಯೇ ಬೇರೆ. ನನ್ನ ರೀತಿಯೇ ಬೇರೆ."

"ಏನು ಮಿಸಾ ?"

"ನೀವಂತೂ ಬಹಳ ಸುಲಭವಾಗಿ ನಂಬುತ್ತೀರಿ. ನನ್ನಿಂದ ಸಾಧ್ಯವೇ ಇಲ್ಲ. ಜಂತುಗಳನ್ನು ನಂಬಿದರೂ ನರ ಜಂತುಗಳನ್ನು ನಂಬುವುದು ಕಷ್ಟ."

"ಹಾಗೆಂದರೆ ಹೇಗೆ ಮಿಸಾ ?"

"ನನಗೇನೋ ಬಹಳ ಭಯ. ಏನೇ ಇರಲಿ, ಈ ಮುಂಬೈ ನರಜಂತು ಗಳನ್ನಂತೂ ನಂಬಲೇಬೇಡಿ; ವಿನೂ ಮಾಮಿ!"

ಪಾಪ—ಮಿಸಾ. ಅಪಾಯದ ಛಾಯೆ ಚಿತ್ತಭಿತ್ತಿಯಲ್ಲಿ ತೇಲಿ ನಲಿಯುತಿತ್ತೋ ಏನೋ. ಆದರೂ ವಿಧಿಯ ಲೀಲಾಜಾಲದಿಂದ ತಪ್ಪಿಸಿ ಕೊಳ್ಳಲಾಗಲಿಲ್ಲ. ದೈವ ಕೃಪೆ ಇದ್ದಿದ್ದರೆ ನಾನಾದರೂ ಮನೆಗೆ ಮುಂದಾಗಿ ಬರಬಹುದಾಗಿತ್ತು. ಅಥವಾ ಅವಳೇ ಇಲ್ಲಿಗೆ ಬರಬರಬಹುದಾಗಿತ್ತು. ಇದೆಲ್ಲಾ ದೈವ ಪ್ರೇರಣೆಯೇ ಹೊರತು ಬೇರೆಯಲ್ಲ. ಅನ್ಯಥಾ ನಮ್ಮನ್ನು—

ಮುಂಬಾಗಿಲ ಕರೆಗಂಟೆ ಸದ್ದುಗೈದು ಕರೆ ನೀಡಿತು.

ವಿನುಮಯಿ ಎದ್ದು ಹೋಗಿ ಕದ ತೆರೆದಳು. ಹೊಸ್ತಿಲ ಬಳಿ ಶೈಲಾ ನಿಂತಿದ್ದಾಳೆ. ಕೈಯಲ್ಲೊಂದು ಬುಟ್ಟಿ ಮತ್ತು ಪರ್ಸ್. ಬಾಲ್ಕನಿಯಲ್ಲಿ ನಿಂತಿದ್ದ ಕೆಂಪು ಪೇಟದವ ಎರಡನ್ನೂ ಪರಿಶೀಲಿಸಿ ಒಳಗಡೆ ಬಿಟ್ಟ. ಹಿಂದೆಯೇ ಕದ ಮುಚ್ಚಿಕೊಂಡಿತು. ಹಣ್ಣು ತರಕಾರಿ ಯನ್ನು ಮುಂದಿಡುತ್ತಾ ಅವಳೆಂದಳು. "ನಿನಗೇನು ಬೇಕಾಗಿತ್ತೆಂಬುದನ್ನು ಕೇಳಿಕೊಳ್ಳದೆ ತಪ್ಪು ಮಾಡಿದೆ. ಇದರಲ್ಲಿ ಯಾವುದಾದರೂ ಬೇಡವಾಗಿತ್ತೆ ?"

"ಅಯ್ಯೋ ಅಷ್ಟೊಂದು ಅಗ್ಗಳಿಕೆ ನನಗಿಲ್ಲ. ನೀನಿಷ್ಟು ತಂದು ಕೊಟ್ಟು ಉಪಕಾರ ಮಾಡಿದುದು ಸಾಲದೇ ಶೈಲಾ ?"

"ಆದರೂ ನಿನ್ನ ಅವಶ್ಯಕತೆಯನ್ನು ನೋಡಿಕೊಳ್ಳದಿದ್ದರೆ ಹೇಗೆ ?"

"ನೀನು ನನಗಾಗಿ ಬಹಳ ತೊಂದರೆ ತೆಗೆದುಕೊಳ್ಳುತ್ತಿ."

"ಆ ಮಾತು ಹೇಳಲೇಬೇಡ ವಿನುಮಾ."

"ನನಗೆ ಬದುಕೇ ಬೇಸರವಾಗಿದೆ——" ಎದೆಯ ಸುಯ್ಲೆಲ್ಲಾ ನಿಟ್ಟುಸಿರಾಗಿ ಹರಿದು ಬಂತು.

"ಹಾಗೆಂದವರುಂಟೇ ? ನಿನ್ನ ಕರ್ತವ್ಯವು ಬಹಳಷ್ಟು ಉಂಟು."

"ಆದರೂ ಈ ಬಗೆಯ ಜೀವನ—"

"ದೈವೇಚ್ಛೆ ವಿನುಮಾ !"

"——"

"ನನಗೆ ಸ್ವಾತಂತ್ರ್ಯವಿದ್ದಿದ್ದರೆ....?"

"ನನಗೆ ಗೊತ್ತು. ಸಮುದ್ರದಲ್ಲಿ ಲೀನಳಾಗುತ್ತಿದ್ದೆ. ಅಂತಲೇ ಭಗವಂತ ನಿನ್ನನ್ನು ಗೃಹ ಬಂಧನದಲ್ಲಿಟ್ಟಿದ್ದಾನೆ."

ವಿನುಮಯಿ ಮಾತಾಡಲಿಲ್ಲ. ಶೈಲಳನ್ನೆಳೆದುಕೊಂಡು ಬಳಿಯಲ್ಲಿ ಬಿಗಿದಪ್ಪಿ ಕುಳ್ಳಿರಿಸಿಕೊಂಡಳು. ಕಣ್ಣುಗಳಲ್ಲಿ ಬೆಳ್ಳಿಯ ಗೆರೆಯಂತೆ ಸಣ್ಣಗೆ ನೀರಾಡಿತು.

ದುರ್ವಿಧಿಯ ಕಣ್ಣಿಗೆ ಕಣ ಕಣವೂ ಕಾಣಿಸುತ್ತೆ. ನಾನೇಕೆ ಕಾಣಿಸಲಿಲ್ಲ ? ನನ್ನನ್ನೂ ಅವನು ಹೇಳದೆ ಕೇಳದೆ ಒಯ್ಯುವುದಾದಲ್ಲಿ ಈ ಬದುಕಿನ ಜಂಜಾಟ ಈ ಕ್ಷಣ ಮುಗಿದು ಹೋಗುತಿತ್ತು........

"ಕೆಲವು ದಿನ ಬೆಂಗಳೂರಿಗೆ ಹೋಗಿ ಬರುತ್ತೀಯೇನು ?"

"ಬೇಡವೇ ಬೇಡ ಶೈಲಾ. ನೀನು ಈ ಗೃಹ ಶ್ರೇಣಿಯಲ್ಲಿ ವಾಸಿಸುವಂತಿದ್ದರೆ ಬೆಂಗಳೂರಿನಿಂದ ಇಲ್ಲಿಗೆ ಯಾರೂ ಬರುವುದು ಬೇಡವಾಗಿತ್ತು. ಈಗ ವಿಧಿಯಿಲ್ಲದೆ ಸುಮ್ಮನಿರುವೆ ಏನು ಮಾಡಲಿ ಹೇಳು ? ಗತ್ಯಂತರವಿಲ್ಲ."

"ರಾತ್ರಿ ಸರಿಯಾಗಿ ನಿದ್ದೆ ಮಾಡಿದೆಯಾ ?"

"ಅರೆ ಬರೆ ನಿದ್ದೆ. ಕೆಟ್ಟ ಕನಸು. ಒಮ್ಮೊಮ್ಮೆ ಕಣ್ಮುಚ್ಚುವುದೂ ಬೇಡವಾಗುತ್ತೆ. ಕಣ್ಮುಚ್ಚಿದರೂ ಕೆಲವೊಮ್ಮೆ ಬಡಿದೆಬ್ಬಿಸಿದಂತಾಗುತ್ತೆ...." ಏನೋ ಹೇಳುವುದಿತ್ತು. ದನಿ ಗದ್ಗದವಾದುದರಿಂದ ಮುಂದೆ ಮಾತು ಹೊರಡಲಿಲ್ಲ.

"ಧೈರ್ಯ ತಂದುಕೋ ವಿನುಮಾ."

"ಸಂಕಟ ಒಂದೇ ಆಗಿದ್ದಿದ್ದರೆ ನನಗೆ ವ್ಯಥೆ ಇರಲಿಲ್ಲ. ನನ್ನ ಮುಂದಿರುವುದು ಧರ್ಮಸಂಕಟ ಏನು ಮಾಡಲಿ ?"

"ಧರ್ಮಾಧರ್ಮಗಳನ್ನು ಅಂತರಾತ್ಮನ ವಿಮರ್ಶೆಗೆ ಬಿಟ್ಟುಬಿಡು. ಸಣ್ಣ ಮನಸ್ಸಿನ ಆಳಾಗಲೇ ಬೇಡ."

"ನಿಜ, ಶೈಲಾ."

"ಹೇಗೂ ನೀನು ಆಗುಹೋಗುಗಳನ್ನು ತಪ್ಪಿಸಲಾರೆ. ಏನಾದರೂ ಬರಲಿ, ಏನಾದರೂ ಆಗಲಿ ಮನಸ್ಸನ್ನು ಕೆಡಿಸಿಕೊಳ್ಳದೆ ದೃಢವಾಗಿರು."

"ಒಮ್ಮೊಮ್ಮೆ ನನ್ನ ತಲೆ ಅಮಲೇರಿದವರಂತಾಗುತ್ತೆ. ಯೋಚನೆಗಳು ಓಡುವುದೇ ಇಲ್ಲ. ಯೋಚಿಸಿದರೂ ಅರ್ಥವಾಗುವುದಿಲ್ಲ. ಯೋಚಿಸಿ ಯೋಚಿಸಿ ತಲೆ ಬರಡಾಗಿದೆ."

"ಯೋಚಿಸಲೇ ಬೇಡ ವಿನುಮಾ."

"ಶೈಲಾ..."

ಮುಂದೆ ಮಾತು ಹೊರಡಲಿಲ್ಲ. ವಿನುಮಯಿ ಎದ್ದು ಒಲೆಯ ಮೇಲೆ ಚಹಕ್ಕೆ ನೀರಿಟ್ಟಳು. ಹೊತ್ತು ನಾಲ್ಕರ ಅಂಚನ್ನು ದಾಟಿಯಾಗಿತ್ತು; ಆದರೂ ಮೈ ಬೆವರುವಷ್ಟು ಬಿಸಿಲಿನ ಹಬೆಯಿದೆ. ಶೈಲಾ ನೀರು ಮನೆಗೆ ಹೋಗಿ ಮುಖ ಮಜ್ಜನ ಮಾಡಿಕೊಂಡು ಬಂದು ಕನ್ನಡಿಯ ಮುಂದೆ ನಿಂತು ತಿಲಕವಿಟ್ಟುಕೊಳ್ಳುವಷ್ಟರಲ್ಲಿ ಚಹ ಬಿಸ್ಕತ್ತು ಅಣಿಯಾಗಿತ್ತು. ಹೆಚ್ಚು ಮಾತುಕತೆ ಇಲ್ಲದೆ ಚಹಪಾನ ಮುಗಿಯಿತು.

ಶೈಲಾ ಪಾತ್ರೆಪಗಡಿಗಳನ್ನೆಲ್ಲ ಎತ್ತಿ ನೋಡಿದಳು. ಬೆಳಗ್ಗೆ ಅಡಿಗೆ ಮಾಡಿದ ಸೂಚನೆಯು ತೋರಲಿಲ್ಲ. ವಸ್ತುವಸ್ತುವೂ ಸ್ಥಳಪಲ್ಲಟವಾಗಿವೆ. ಯಾವುದರಲ್ಲೂ ವಿನುಮಾ ಆಸಕ್ತಿ ತಳೆದಂತಿಲ್ಲ. ಪಾಪ, ಹಿಂದೆ ಅವಳ ದಿನಚರಿ ಎಷ್ಟು ಚಟುವಟಿಕೆಯ ಬೀಡಾಗಿರುತ್ತಿತ್ತು....? ಮುಖ್ಯವಾಗಿ ಅವಳು ಮನಸ್ಸಿಗೆ ನೆಮ್ಮದಿಯನ್ನು ಪಡೆದುಕೊಂಡರೆ ಸಾಕು.

ಮನಸ್ಸು ಚಡಪಡಿಸಿತು, ಬುದ್ಧಿ ಮಿಡುಕಿತು.

"ವಿನುಮಾ, ರಾತ್ರಿಗೆ ನಿನ್ನ ಅಣ್ಣಂದಿರು ಬರುತ್ತಾರಲ್ಲವೇ ?"

"ಹೌದು."

"ಹಾಗಿದ್ದರೆ ನಾನೂ ಕೈ ಹಚ್ಚುವೆ. ಒಂದಿಷ್ಟು ಅಡಿಗೆ ಮಾಡಿ ಬಿಡೋಣ."

ಸರಿ, ಇಬ್ಬರೂ ಅಡಿಗೆಯ ಸಾಮುಗ್ರಿಗೆ ಕೈ ಹಾಕಿದರು. ಅಡಿಗೆ ತಯಾರಾಗುತ್ತಿದ್ದಂತೆ ಕಷ್ಟಸುಖಗಳು ಸಹ ಚರ್ವಿತಚರ್ವಣವಾದುವು.

ಭಾರವಾದ ದನಿಯಲ್ಲಿ ಕೊನೆಯ ಮಾತು ಹೊರತಂದಳು ವಿನುಮಾ. "ವಿರಾಜ್ ಎಷ್ಟೇ ದುರ್ಗುಣಗಳನ್ನು ಹೊಂದಿದ್ದರೂ ಸಹ ನನ್ನನ್ನು ಪ್ರಾಣಕ್ಕಿಂತಲೂ ಮಿಗಿಲಾಗಿ ಪ್ರೀತಿಸುತ್ತಾರೆ."

ಶೈಲಾ ಮಾತಾಡಲಿಲ್ಲ, ಐದಾರು ವರ್ಷಗಳ ಅವರ ದಾಂಪತ್ಯ ಜೀವನವನ್ನು ಅಳೆಯುತಿತ್ತು ಮನಸ್ಸು.

"ಹೊತ್ತು ಕಳೆಯುವುದೇ ಕಷ್ಟ ಶೈಲಾ."

"ಅಯ್ಯೋ" ಎಂದಿತು ಅಂತರಂಗ. ಶೈಲಾ ಕೆಲವು ಕ್ಷಣ ಕಣ್ಮುಚ್ಚಿ ನೋವನ್ನು ನುಂಗಿಕೊಂಡಳು.

ಅಡಿಗೆ ಮುಗಿಯಿತು. ಶೈಲಾ ಕೈ ತೊಳೆಯಲು ನೀರು ಮನೆಗೆ ಹೋದಳು. ಬೆಂಚಿನಮೇಲೆ ಕುಳಿತ ವಿನುಮಾಯ ಯೋಚನೆಯ ಸುಳಿಯಲ್ಲಿ ಸಿಕ್ಕಿ ಅಲುಗದೆ ಕುಳಿತಿದ್ದಾಳೆ. ಮುಖ ಪ್ರೇತಕಳೆ ತಳೆದಿತ್ತು. ಕಣ್ಣುಗಳು ಗುಳಿಬಿದ್ದಿವೆ. ಕುತ್ತಿಗೆಯ ಎಲುಬು, ನರನಾಡಿಗಳು ಎದ್ದು ನಿಂತು ತಮ್ಮಿರುವನ್ನು ಸಾರಿ ಹೇಳುತ್ತಿವೆ. ನೋಡುವವರ ಮನವನ್ನು ಕರಗಿಸುವಂತಿದೆ ದೀನ ಸ್ಥಿತಿ. ಕೈತೊಳೆದುಕೊಂಡು ಟವಲಿನಿಂದ ಒರಸಿಕೊಳ್ಳುತ್ತ ಹೊರಬಂದ ಶೈಲಾ ಕೇಳಿದಳು "ಚೆಸ್ ಆಡುತ್ತೀಯೇನು ?"

"ಅದೊಂದೇ ಮನಸ್ಸಿಗೆ ಹಿಡಿಯುವುದು. ಬೇರೆ ಯಾವುದೂ ಬೇಡವೆನ್ನಿಸುತ್ತೆ."

"ಸರಿ ಮತ್ತೆ."

ಶೈಲಾ ಚೆಸ್ ಕಾಯಿಗಳನ್ನು ಹೊಂದಿಸಿಟ್ಟಳು. ಇಬ್ಬರೂ ಕಾಯಿ ನಡೆಸಿದರು. ಆಟ ಸ್ವಲ್ಪಹೊತ್ತು ಸಾಗಿತು. ಎರಡೂ ಕಡೆ ಕೆಲವು ಪೇದೆಗಳು ಹೊರಬಿದ್ದುವು.

"ಇಂದು ನಿನ್ನ ತಂಗಿ ಬರುತ್ತಾಳಲ್ಲವೇ ?"

"ಹೌದು."

"ಅವಳು ಬಂದಲ್ಲಿ ನಿನಗೆ ಹೊತ್ತು ಕಳೆಯುವುದು ಕಷ್ಟವಾಗುವುದಿಲ್ಲ."

"ನಿಜ ಶೈಲಾ. ನನ್ನಿಂದಂತೂ ನೀನು ಬಹಳ ತೊಂದರೆಗೊಳಗಾಗಿದ್ದಿ. ಇದನ್ನೆಲ್ಲಾ ಹೇ...."

ಅವಳ ಬಾಯಿಯ ಮೇಲೆ ತಟ್ಟನೆ ಕೈಯಿಟ್ಟು "ಹಾ! ಆ ಮಾತು ಹೇಳಬೇಡ" ಎಂದಳು ಶೈಲಾ. ಅರಳು ಕಂಗಳು ಇನ್ನಷ್ಟು ಅರಳಿದುವು.

ತಲೆಬಾಗಿಲ ಕರೆಗಂಟೆ ಕಿರ್ರನೆ ಸದ್ದು ಮಾಡಿತು.

ಶೈಲಾ ಮೊದಲು ಕಿಟಕಿಯಲ್ಲಿ ಹಣಿಕಿ ನೋಡಿದಳು. ಕೆಂಪು ಮುಂಡಾಸದವ "ಯಜಮಾನರು ಬಂದಿದ್ದಾರೆ ಬಾಗಿಲು ತೆಗೆಯಿರಿ" ಎಂದ.

ಕದ ತೆರೆಯಿತು. ಚೆಸ್ ಕಾಯಿಗಳು ಬೀರುವನ್ನು ಸೇರಿದುವು. ವಿನುಮಯಿಯ ಹಿರಿಯಣ್ಣ ನವನೀತಚಂದ್ರ ಸೂಟ್‌ಕೇಸ್ ಸಹಿತ ಬಾಗಿಲಲ್ಲಿ ನಿಂತಿದ್ದ.

"ಹರಿಣಿ ಬರಲಿಲ್ಲವೇ ?" ಅಲ್ಲಿಂದಲೇ ಕೇಳಿದಳು ವಿನುಮಾ."

"ಕರೆತರಲಿಲ್ಲ."

ಸೂಟ್‌ಕೇಸನ್ನು ಎತ್ತಿ ಮಂಚದ ಕೆಳಗಿಟ್ಟಳು ವಿನುಮಯಿ. ನವನೀತಚಂದ್ರ ಶೈಲಳ ಮನೆಯವರ ಯೋಗಕ್ಷೇಮವನ್ನು ವಿಚಾರಿಸಿದ ನಂತರ "ನೀವು ವಿನುಮಯಿಗಾಗಿ ಬಹಳ ತೊಂದರೆ ತೆಗೆದುಕೊಂಡಿದ್ದೀರಿ. ನಿಮಗೆ ನಮ್ಮಿಂದ ತೊಂದರೆಯಾಗುತ್ತಿದೆ." ಎಂದ ಔಪಚಾರಿಕವಾಗಿ.

"ಪರವಾಯಿಲ್ಲ. " ಮುಗುಳು ನಗೆಯೊಡನೆ ಮೊಟಕು ಉತ್ತರ ನೀಡಿದಳು ಶೈಲ.

"ವಿನುಮಯಿಗಷ್ಟೇ ಅಲ್ಲ. ಸುತ್ತು ಮುತ್ತು ಎಲ್ಲರಿಗೂ ತೊಂದರೆ. ನಾನು ಅಲ್ಲಿಂದ ಇಲ್ಲಿಗೆ ಓಡಾಡುವುದೆಂದರೆ ಸಾಮಾನ್ಯವೇ ? ಕಲಿಯದವರು ತಪ್ಪು ಹೆಜ್ಜೆ ಇಡುವುದು ಸರ್ವೇ ಸಾಮಾನ್ಯ. ಆದರೆ ಇದು ಅತಿರೇಕ." ಎನ್ನುತ್ತಾ ಕುಳಿತುಕೊಂಡ.

ವಿನುಮಯಿ ಮಾತಾಡಲಿಲ್ಲ.

ಶೈಲಾ ಹೊರಟಳು.

ನವನೀತಚಂದ್ರ ಕೈಜೋಡಿಸಿ ಅಂದ "ನಿಮ್ಮ ಹೃದಯ ದೊಡ್ಡದು."

"ಓ .... ದೊಡ್ಡದಾಗಿದ್ದರೆ – Enlarge–ನನಗೆ ಸಾವು ಸನ್ನಿಹಿತ ವಾಗಿರುತಿತ್ತು !"

ಮೂವರ ಮುಖದಲ್ಲೂ ನಗುವಿನಲೆ ಚಿಮ್ಮಿ ಹರಿಯಿತು.

ಮೆಟ್ಟಿಲ ತುತ್ತತುದಿಯುವರೆಗೂ ವಿನುಮಾ ಬಂದು ಬೀಳ್ಕೊಟ್ಟ ಮೇಲೆ ಶೈಲಾ ನಗುಮುಖದಿಂದ ಸರಸರ ಮೆಟ್ಟಿಲಿಳಿದಳು. ಸಮುದ್ರದಂಚಿನ 'ಕೊಂಕಣ ದೇಶದ' ಗಾಳಿ ತೆಂಕಣ ದಿಕ್ಕಿನ ತಣ್ಪನ್ನು ತಂದು ತಣ್ಣೀರೆರೆಚು ವಂತೆ ಎರೆಚಿತು. ಒಮ್ಮೆಲೆ ತನುಮನಗಳು ತಂಪಾದುವು.

ಹಾ !

·ಆಹ್ಲಾದಮಯ ಹಾಕಾರ ತನಗರಿಯದಂತೆಯೇ ಹೊರಹೊಮ್ಮಿತು.

ನಕ್ಷತ್ರ ಲೋಕಕ್ಕೂ ಮಿಗಿಲಾಗಿ ಮಿನುಗುವ ಬೃಹತ್ ಮುಂಬೈ ಯನ್ನು ನೆಟ್ಟ ನೋಟದಿಂದ ನಿಟ್ಟಿಸುತ್ತಾ ಅಲ್ಲೇ ಶತಪಥ ಸುತ್ತಿದ ನವನೀತಚಂದ್ರ. ನೋಟದ ನೇರಕ್ಕೆ ವೋಲ್ಟಾಸ್ ಕಂಪನಿ. ಬೆಂಗಾಲ್ ಬಲ್ಬುಗಳಿಂದ ಅಲಂಕೃತವಾದ ಹಿರಿಯ ನಾಮಫಲಕವನ್ನು ಹೊತ್ತಿದೆ. ಬೇಡ ಬೇಡವೆಂದರೂ ನೋಟ ಅತ್ತತ್ತಲೇ ನಿಟ್ಟಿಸಿತು....ವೋಲ್ಟಾಸ್ ಕಂಪನಿಯ ಸನ್ಮಾನ್ಯ ಡೈರೆಕ್ಟರ್ ವಿರಾಜ್. ಉದ್ದಿಮೆ ಕ್ಷೇತ್ರದಲ್ಲಿ ಹೆಸರಾಂತ ವ್ಯಕ್ತಿ ವಿರಾಜ್. ಧನ ಮಾನ ಗೌರವಾದಿಗಳನ್ನು ಗಳಿಸಿದ ವ್ಯಕ್ತಿ ವಿರಾಜ್.

ಆದರೆ ಆದ ಬಗೆ ?

ವಿಧಿ....... !

ನಾವೇ ಬುದ್ಧಿಗೆಟ್ಟು ವಿಧಿಯನ್ನು ಅನ್ನುವುದರಿಂದೇನು ಫಲ ? ಕೊಬ್ಬು ಮದ ದುರಹಂಕಾರ ! ಅವನಿಗೆ ಎಷ್ಟು ಬಾರಿ ಬುದ್ಧಿ ಹೇಳಲಿಲ್ಲ ? ಹೇಳಿ–ಕೇಳುವಂತಹ ಕೂಸೆ ಅವನು ? ಎಂತಹ ಕರ್ಮವೋ ಅಂತಹ ಫಲ ! ಆರೇಳು ತಿಂಗಳಿಂದ ಮನೆ ಮಠ ಕೆಲಸ ಕಾರ್ಯಗಳನ್ನು ಬಿಟ್ಟು ಅಲೆಯುವು ದೆಂದರೆ ಎಂತಹ ಕಷ್ಟ ? ಈತನಿಂದ ಎಷ್ಟು ಮಂದಿಗೆ ತಲೆ ನೋವು ? ಎಷ್ಟು ಬದುಕು ಹಾಳು ಮಾಡಿದ ? ಮಾನಗೇಡು !

ನವನೀತಚಂದ್ರ ಟವಲ್ಲು ತೆಗೆದುಕೊಂಡು ಸ್ನಾನಕ್ಕೆ ಅಣಿಯಾಗುತ್ತಾ "ಮೂರು ದಿನಗಳ ಪಯಣದಿಂದ ಮೈ ನೆಜ್ಜುಗುಜ್ಜಾಗಿದೆ. ಯಾರ ಕರ್ಮಕ್ಕೆ ಯಾರು ತಲೆಯೊಡ್ಡಬೇಕು ಹೇಳು ?" ಎಂದ. ದನಿಯಲ್ಲಿ ದುಗುಡದ ಝರಿ ಜಪ್ಪನೆ ಹರಿದು ಬಂತು. ಆ ಕೊನೆಯ ನುಡಿಯನ್ನು ಹೇಳಬಯಸದಿದ್ದರೂ ದುಗುಡದ ಒತ್ತಡದಿಂದ ತನಗರಿಯದಂತೆಯೇ ತುಟಿ ಮೀರಿತು–ನುಡಿ.

ವಿನುಮಯಿ ಬಾಗಿದ ತಲೆಯೆತ್ತಲಿಲ್ಲ. ದೈನ್ಯನೋಟ ಅವನನ್ನು ಹಿಂಬಾಲಿಸಿತು. ಬೇಸರ ಕಳೆಯಲು ಪುಸ್ತಕವೊಂದನ್ನು ತೆಗೆದುಕೊಂಡಳು. ಯಾಂತ್ರಿಕವಾಗಿ ಹಾಳೆಗಳನ್ನು ತಿರುವಿಹಾಕಿತು ಕೈ. ಅಳಿದ ಕಾಲದಲ್ಲಿ ಆಳಾಗಿ ಅಂಡಲೆಯಿತು ಮನಸ್ಸು. ಕೊನೆಯ ನುಡಿ ದುಂಬಿಯಂತೆ ಕಿವಿಯಲ್ಲಿ ಝೇಂಕರಿಸಿತು—ಯಾರ ಕರ್ಮಕ್ಕೆ ಯಾರು ತಲೆಯೊಡ್ಡಬೇಕು ಹೇಳು.

ಒಮ್ಮೆ ಮೀನಾ—"ನಿಮ್ಮದೇ ತಪ್ಪು ಮಾವಾ ! ಕಂಡರೂ ಕಾಣದಂತೆ ನೀವು ಸುಮ್ಮನಿರುವುದರಿಂದಲೇ ಹೀಗೆ — ನೀವು ಬಿಗಿಯಾಗಿದ್ದಿದ್ದರೆ ನಾವು ಏಕೆ ಹೀಗಾಗುತ್ತಿದ್ದರು ?"

"ನಾನೇನು ಮಾಡಬಲ್ಲೆ ಮೀನಾ ?"

"ನಾನು ಮನೆ ಬಿಟ್ಟು ಹೋಗುವೆ ಎನ್ನಬಾರದೇಕೆ ? ಬನ್ನಿ, ನಮ್ಮ ಮನೆಯಲ್ಲಿ ಒಂದು ತಿಂಗಳು ಇದ್ದುಬಿಡಿ ! ನಾಯಿಮರಿ ಆಗುತ್ತಾರೆ ಮಾವ !"

"ಹೋದರೆ ಹೋಗು ! ಇನ್ನೊಬ್ಬಳು ಬರುತ್ತಾಳೆ ಎಂದಾರು !"

"ಹಾಗೆನ್ನಬಹುದು—ಆದರೆ ಕಾರ್ಯತಃ ಏನೂ ಮಾಡಲಾರರು !"

ಮೌನವೇ ಉತ್ತರವಾಯಿತು.

"ಮನುಷ್ಯನಿಗೆ ಸೋಲೆಂಬುದು ಬರಬಾರದು. ಒಂದಲ್ಲ, ಹತ್ತು ಬಾರಿ ನೂರು ಬಾರಿ ಪ್ರಯತ್ನಪಡಿ. ಇಂದು ಸೋತರೂ ನಾಳೆ ಗೆಲ್ಲಬಹುದು."

"——"

"ನೆಚ್ಚಿರಬೇಕು—ಕೆಚ್ಚಿರಬೇಕು !"

ಅಂಥ ಹುಡುಗಿಯಾದುದರಿಂದಲೇ ಎದುರಿಸಿ ಕೆನ್ನೆಯ ಮೇಲೆ .... ಛೀ ! ಎಂಥ ಹುಡುಗಿ ವಿನಾ ? ಸ್ನೇಹ ಸೌಹಾರ್ದ ಒಲವುಗಳ ಬೀಡು...

ನೀರು ಮನೆಯಲ್ಲಿ ಜಳಜಳ ಸದ್ದು ನಿಂತಿತು. ಸ್ನಾನ ಮುಗಿದು ನವನೀತಚಂದ್ರ ತಲೆಯನ್ನು ಒರಸಿಕೊಳ್ಳುತ್ತಾ ಹೊರಬಂದ.

"ಸ್ನಾನ ಮಾಡಿದ ನಂತರ ಮೈ ಹಗುರವಾವಾಯಿತು. ಮೂರು ದಿನಗಳ ನಿದ್ದೆಯನ್ನೆಲ್ಲಾ ಇಂದು ಮಾಡಿಬಿಡುವೆ. ಬೇಗ ಊಟ ಹಾಕಿ ಬಿಡು."

....ಜಗತ್ತು....!

ನವನೀತನಿಗೆ ಕಳೆದ ಮೂರು ದಿನಗಳ ನಿದ್ದೆಯನ್ನು ಈ ಒಂದು ದಿನ ದಲ್ಲಿ ಮಾಡುವ ತರಾತುರಿ. ಏಳೆಂಟು ತಿಂಗಳಿಂದ ನಾನು ನಿದ್ದೆ ಮಾಡಿಲ್ಲ ವಲ್ಲಾ........ಹೃದಯ ಹೆಗ್ಗಲ್ಲು ಹೊತ್ತಂತೆ ಭಾರವಾಯಿತು. ವಿನುಮಯಿ ಊಟಕ್ಕೆ ತಟ್ಟೆಯಿಟ್ಟಳು. ಮಧ್ಯೆ ಪಾತ್ರೆ ಪಗಡಿಗಳಲ್ಲಿ ಅನ್ನ ಕೂಟು ಮಜ್ಜಿಗೆಗಳಿದ್ದುವು. ಇಬ್ಬರೂ ಊಟಕ್ಕೆ ಕುಳಿತರು. ನಾಲ್ಕು ತುತ್ತು ನುಂಗಿರಲಿಕ್ಕಿಲ್ಲ ಪಕ್ಕದ ಕೋಣೆಯಲ್ಲಿ ರಮಾಬಾಯಿಯ ಗಂಡ ಮಾಡು ಮೊಳಗುವಂತೆ ಕೂಗಾಡಹತ್ತಿದ. ರಮಾಬಾಯಿಯ ಕೀಚಲು ದನಿ ಹೊರ ಬಿತ್ತೋ ಇಲ್ಲವೋ ಒಂದೇ ಸಮನೆ ಆತ ಗುದ್ದ ಹತ್ತಿದ. ದಿಡ್. ದಿಡ್. ದಿಡ್.

ಚೀರಾಟ ಬೊಬ್ಬೆಗಳು ಕಿವಿಯನ್ನು ಕೊರೈಸುವಂತೆ ಕರ್ಕಶವಾಗಿ ಮೊಳಗಿದುವು. ವಿನುಮಯಿಗೆ ತುತ್ತು ಗಂಟಲ ಗಾಣವಾಯಿತು. ಹಾಗೇ ಕುಳಿತಳು.

" ಇಲ್ಲಿ ಒಂದಲ್ಲ ಒಂದು ವಿಧವಾದ ಗಲಾಟೆ ಇದ್ದೇ ಇರುತ್ತದೆ. ಕೇಳುವುದೆಂದರೆ ಬಹಳ ಬೇಸರ." ಖಿನ್ನವದನಳಾಗಿ ನುಡಿದಳು ವಿನುಮಾ.

"ಜಗತ್ತೇ ಹಾಗೆ. ನಗುವವರು ನಗುತ್ತಾರೆ. ಅಳುವವರು ಅಳು ತ್ತಾರೆ. ನಡೆಯುವಷ್ಟು ದಿನ ನಡೆಯಲಿ ಎಂದುಕೊಂಡು ನಿಶ್ಚಿಂತೆಯಿಂದ ಇರುವುದು ಪರಮ ಸುಖ."

"ಹೊರಗಿನ ಕೋಪ ತಾಪತ್ರಯವನ್ನು ತಂದು ಹೆಂಗಳೆಯರ ಮೇಲೆ ತೀರಿಸುವ ದೌರ್ಜನ್ಯಕ್ಕೇನೂ ಕೊರತೆಯಿಲ್ಲ. ಒಮ್ಮೊಮ್ಮೆ ಬಹಳ ವ್ಯಸನ ವಾಗುತ್ತೆ."

"ಛೀ ! ಛೀ ! ಅದನ್ನೆಲ್ಲಾ ಹಚ್ಚಿಕೊಂಡರಾಗುತ್ತದೆಯೇ ?"

ನೀರನ್ನು ಗಟಗಟ ಕುಡಿದು ಎದ್ದ ತಂಗಿಯನ್ನು ನೋಡಿ ನವನೀತ ಚಂದ್ರನಿಗೆ ನಗುವುಕ್ಕಿ ಬಂತು.

"ಏಳು ವರ್ಷಗಳಿಂದ ಇಲ್ಲಿ ನಡೆದ ವ್ಯವಹಾರವನ್ನು ಸ್ವತಃ ಕಣ್ಣಿಂದ ನೋಡಿದ್ದಿ. ಭಾಗಶಃ ಅರವಿಂದ್ ಗೃಹಶ್ರೇಣಿಯ ಗೃಹಸ್ಥರ ಪರಿಚಯವಿದೆ. ಮತ್ತೇಕೆ ಚಿಂತೆ ?"

ನೆರೆಮನೆಯಲ್ಲಿ ಚೀರಾಟ ಒರಲಾಟಗಳು ನಡೆಯುತ್ತಲೇ ಇವೆ. ಮಕ್ಕಳೂ ತಾಯಿಯೊಂದಿಗೆ ಗೋಳಿಡುತ್ತಿದ್ದಾರೆ. ಕೇಳಲಾರೆನ್ನೋ ಎನ್ನುತ್ತಿವೆ ಕಿವಿಗಳು. ತಾಳಲಾರೆನೋ ಎನ್ನುತ್ತಿದೆ ಮನಸ್ಸು. ಅಂತಃ ಕರಣ ಮಂಜಿನಂತೆ ಕರಗಿತು. ಕೈಬಾಯ್ ತೊಳೆದುಕೊಂಡು ಬಸಿ ಬಟ್ಟಲುಗಳನ್ನು ಎತ್ತಿಟ್ಟಳು ವಿನುಮಯಿ. ನವನೀತಚಂದ್ರ ಬಾಳೆ ಹಣ್ಣನ್ನು ಮೆಲ್ಲುತ್ತಾ ಅಂದ "ನೀನು ಊಟ ಮಾಡಲಿಲ್ಲ. ಹಣ್ಣಾದರೂ ತೆಗೆದುಕೊ."

ಸ್ವತಃ ಅವನೇ ತಂದು ಮುಂದೆ ಹಿಡಿದಾಗ ಬೇಡವೆನ್ನಲಾಗಲಿಲ್ಲ.

"ಧರ್ಮ ಕರ್ಮಗಳ ಸಂಯೋಜನೆಯೇ ಬಾಳು-ಬದುಕು. ಯಾರ ಜೀವನ ಸುಖವಾಗಿರುತ್ತೆ ಹೇಳು ...?

"... ........"

"ಸುಖ ತಾನಾಗಿ ಬರುವುದಿಲ್ಲ. ಜಾಣ್ಮೆಯಿಂದಲ್ಲದೆ ರೋಷದಿಂದ ಯಾರೂ ನೆಮ್ಮದಿಯನ್ನು ಪಡೆದುಕೊಳ್ಳಲಾರರು. ಇವೆಲ್ಲಾ ದುರ್ವಿಧಿಯ ಮೇಲೆ ದೂರು ಹಾಕಿ ಮಾಡಿದ ಅಥವಾ ಮಾಡುವ ಸ್ವಯಂಕೃತಾಪರಾಧ ಗಳು. ಯಾವುದನ್ನೇ ಆಗಲಿ ಮಾಡಿದ ಮೇಲೆ ಉಣ್ಣಬೇಕಲ್ಲ ಎಂಬ ವಿವೇಚನೆ ಇದ್ದಲ್ಲಿ ಇಂದು ಈ ಕೋರ್ಟು ಕಚೇರಿಗಳು ಇರುತ್ತಿರಲಿಲ್ಲ ವಿನುಮಾ."

ನುಡಿ ಎದೆಯಾಳಕ್ಕೆ ಜರ್‍ರನೆ ಇಳಿಯಿತು.

"ಹೋಗಲಿ ಬಿಡು.... ಜಗತ್ತೇ ಹಾಗೆ."

ಹೃದಯಾಳದಲ್ಲಿ ಕಸಿವಿಸಿ ಮೊಳೆಯಿತು.

ಂ ಂ ಂ ಂ

... ಹೊರಗಡೆ ಎಣೆಯಿಲ್ಲದ ಮಳೆಗಾಳಿ.

...ಒಳಗಡೆ ಎಣೆಯಿಲ್ಲದ ಕಸಿವಿಸಿ.

....ಮುಂದೇನು ? ಸ್ವಹಿತ ಸಾಧನೆಯೆ ? ಧರ್ಮಹಿತ ರಕ್ಷಣೆಯೆ ?

ಹಾ !

"ನೀನೇ ನೀನಾಗಿ ಯೋಚಿಸಿನೋಡು ವಿನುಮಾ. ಆಗಿದ್ದಂತೂ ಆಗಿಹೋಗಿದೆ. ಎಷ್ಟೇ ಪ್ರಯತ್ನ ಪಟ್ಟರೂ ನೀನು ಅದನ್ನೆಂದೂ ಬದಲಿಸು ವಂತಿಲ್ಲ. ಮುಖ್ಯವಾಗಿ ನಿನ್ನ ಬಾಳನ್ನು ಬೆಳಗಿಸಿಕೊ. ಕಲಿತ ನಿನಗೆ ಯಾರೂ ಹೇಳಬೇಕಾಗಿಲ್ಲ. ಧರ್ಮದ ಹೆಸರಿನಲ್ಲಿ ನ್ಯಾಯದ ಹೆಸರಿನಲ್ಲಿ ನಿನ್ನ ಹಾದಿಗೆ ನೀನೇ ಮುಳ್ಳಾಗಬೇಡ."

ನವನೀತಚಂದ್ರ ದೀರ್ಘ ತರ್ಕದ ನಂತರ ಕೊಟ್ಟ ಸಲಹೆ.

ಆದರೆ ಶೈಲಾ ಅಂದ ರೀತಿಯೇ ಬೇರೆ—"ಏನೇ ಬರಲಿ, ವಿನುಮಾ, ಸತ್ಯಕ್ಕೆ ಮಸಿ ಬಳಿಯಬೇಡ. ಅದರಿಂದ ನಿನಗೆ ಕೆಲವು ವರ್ಷಗಳು ತೊಂದರೆಯಾಗಬಹುದು. ಅದೇನು ದೊಡ್ಡದಲ್ಲ, ಮೂಸೆಯಲ್ಲಿ ಕರಗಿಸಿದ ಮೇಲೆ ಚಿನ್ನ ಅಪರಂಜಿಯಾಗುತ್ತದೆ. ಅದರಿಂದ ಶಾಂತಿಯುಂಟು–ಆತ್ಮ ಸಂತೋಷವುಂಟು."

ಸರಕಾರ ತಮ್ಮಿಬ್ಬರನ್ನೂ ಪ್ರತ್ಯೇಕವಾಗಿ ಗೃಹಬಂಧನದಲ್ಲಿಟ್ಟಾಗ ವಿರಾಜ್ ನುಡಿದ ಕೊನೆಯ ಮಾತು "ಇಷ್ಟಕ್ಕೆಲ್ಲಾ ತಲೆ ಕೆಡಿಸಿಕೊಳ್ಳ ಬೇಡ ವಿನುಮಾ. ಈ ಕಾಲದಲ್ಲಿ ಇದು ಸರ್ವೇ ಸಾಮಾನ್ಯ. ಏನೇ ಬರಲಿ, ಗುಟ್ಟು ಮಾತ್ರ ಬಿಡಬೇಡ. ಗೆಲುವು ಕೈಯಲ್ಲುಂಟು .. ಶುದ್ಧ ಚಂಡಾಲಿ. ನನ್ನ ಮೇಲೆ ವಿನಾಕಾರಣ ತಪ್ಪು ಹೊರಿಸಿ ಇಷ್ಟಕ್ಕೆ ಬಾರಿ ಮಾಡಿದಳು ..."

ವಿರಾಜ್ ಬಹಳ ಹಠಮಾರಿ. ತನ್ನ ತಪ್ಪಿಗೆ ಸರಿಯಾದ ಶಿಕ್ಷೆಯಾಗಿದೆ ಎಂಬುದನ್ನು ಅರಿತಾದರೂ ಸುಮ್ಮನಿರಬಹುದಾಗಿತ್ತು. ಅಥವಾ ತನ್ನ ಬಾಧ್ಯದವಳು ಎಂದೇ ಆಗಲಿ, ಅಥವಾ ಹೆಣ್ಣು ಎಂದೇ ಆಗಲಿ ಕರುಣೆ

ತೋರಬಹುದಾಗಿತ್ತು. ಕಾರ್ಯಾಕಾರ್ಯಗಳ ವಿವೇಚನೆಯಿದ್ದೂ ಅಮಾನುಷ ವಾಗಿ ವರ್ತಿಸಿದರೇಕೆ ?

ಹಾ ! ನಿಜವಾಗಿಯೂ ಖಂಡಿತವಾಗಿಯೂ ಅಕ್ಷಮ್ಯ ಅಪರಾಧ.

ಭಗವಂತ ನಿಷ್ಕರುಣಿ. ಈ ಧರ್ಮಸಂಕಟದಲ್ಲಿ ನನ್ನನ್ನೇಕೆ ತೊಡ ಗಿಸಿದ.

ವಿರಾಜ್ ವಿಜಯಿಯಾದರೆ ನನ್ನ ಬಾಳಿಗೆ ಬೆಳಕು. ಇಲ್ಲದಿದ್ದರೆ....?

ಈಗಾಗಲೇ ಮನೆಮನೆಯಲ್ಲೂ ದಿನಚರಿ ಆರಂಭವಾಗಿದೆ. ಇಡೀ ಬೃಹತ್ ಮುಂಬೈ ಬೆಳಗಿನ ಝಾವನೇ ಎಚ್ಚರಗೊಳ್ಳುತ್ತೆ. ಗಲಾಟೆ ಗಜಿ ಬಿಜಿಗಳು ಅಷ್ಟು ಹೊತ್ತಿಗೇನೇ ಶುರುವಾಗುತ್ತವೆ. ಕಷ್ಟ ಸುಖಗಳನ್ನು ಲೆಕ್ಕಿಸದೆ ದಿನಗಳು ಓಡುತ್ತವೆ. ಛೀ ! ಏಕೆ ಇಷ್ಟು ವೇಗವಾಗಿ ಓಡು ತ್ತವೆ.......ಇವು ಓಡಿದಷ್ಟೂ ಕೋರ್ಟಿನ ಕಟಕಟೆ ಹತ್ತುವ ದಿನ ಓಡೋಡಿ ಬರುತ್ತೆ. ದೇವರೇ ! ಆ ದುರ್ದಿನ ಎಂದಿಗೂ ಬಾರದಿರಲಿ.

ನೀರು ಮನೆಯಲ್ಲಿ ಜಳಕದ ಸದ್ದು ಕೇಳಿಬರುತಿತ್ತು. ನಿನ್ನೆ ಬಂದ ಮಾ ರಾತ್ರಿ ಸರಿಯಾಗಿ ನಿದ್ದೆ ಮಾಡಿರಲಿಲ್ಲ. ಮನಸ್ಸಿಗೆ ಅವರು ತುಂಬ ಹಚ್ಚಿಕೊಂಡಿದ್ದಾರೆ. ನಮ್ಮಿಂದಾಗಿ ಎಷ್ಟುಮಂದಿ ಕೊರಗುವಂತಾಯಿತು... ಮನಸ್ಸು ಯೋಚನೆಯ ಕರಾವಳಿಯಲ್ಲಿ ಸಾಗುತ್ತಿದ್ದಂತೆ ಕೈಗಳು ಕರ್ತವ್ಯಕ್ಕೆ ಶರಣಾಗಿದ್ದುವು. ಉಪ್ಪಿಟ್ಟು ಕಾಫಿ ತಯಾರಿಸುವಷ್ಟರಲ್ಲಿ ಮಾ ಜಳಕ ಮುಗಿಸಿ ಹೊರಬಂದಳು.

"ನೀನೇಕೆ ಶ್ರಮ ತೆಗೆದುಕೊಂಡೆ ವಿನುಮಾ ?"

"ಇದು ಶ್ರಮವೇ ?" ಮುಗುಳುನಗೆ ಬೀರಿದಳು ವಿನುಮಾ.

"ಕೈಗೆ ಕೆಲಸವಿಲ್ಲದಿದ್ದರೆ ಹೊತ್ತು ಕಳೆಯುವುದು ಬಹಳ ಕಷ್ಟ. ನನಗಂತೂ ಇಲ್ಲಿ ಕೆಲಸವಿಲ್ಲದಿದ್ದರೆ ಇರುವುದು ಸಾಧ್ಯವೇ ಇಲ್ಲ."

ಹಣೆಗೆ ತಿಲಕವಿಡುತ್ತಲೇ ನುಡಿದಳು ಮಾ. ತಲೆ ಬಾಚಿ ಮುಡಿ ಕಟ್ಟಿ ಕೈತೊಳೆದು ಬರುವಷ್ಟರಲ್ಲಿ ತಟ್ಟೆಯಲ್ಲಿ ಉಪ್ಪಿಟ್ಟು ಅಣಿಯಾಗಿತ್ತು. ಇಬ್ಬರೂ ಕುಳಿತು ಉಪ್ಪಿಟ್ಟಿಗೆ ಕೈಹಚ್ಚಿದರು.

"ನವನೀತಚಂದ್ರನಿಗೆ ಈಚೆಗೆ ಆರೋಗ್ಯವೇ ಚೆನ್ನಾಗಿರಲಿಲ್ಲ. ಪ್ರಯಾಣ ದಲ್ಲಿ ತೊಂದರೆಯಾಗದಿದ್ದರೆ ಸಾಕು."

"ನಿಜ ಎರಡು ದಿನ ಇದ್ದು ಸುಧಾರಿಸಿಕೊಂಡು ಹೋಗಬಹುದಾಗಿತ್ತು. ಅದಕ್ಕೂ ಒಪ್ಪಲಿಲ್ಲ" ಎಂದಳು ವಿನುಮಯಿ. ಮಗನ ಚಿಂತೆಯಲ್ಲಿದ್ದ ತಾಯಿ ಮಾತಾಡಲಿಲ್ಲ.

"ವಿರಾಜರನ್ನು ನೋಡಲು ಹೋದವರೊಂದಿಗೆ ಒಮ್ಮೆ ನವನೀತನೂ ಹೋಗಿ ಬಂದ."

"ಏನಂದರಂತೆ ವಿರಾಜ್ ?"

"ಅವರ ಪರವಾಗಿ ಸಾಕ್ಷಿ ಹೇಳಬೇಕೆಂದು ಹೇಳಿ ಕಳುಹಿಸಿದ್ದಾರೆ. ಅವರಲ್ಲಿಗೆ ಹೋದವರೆಲ್ಲ ತರುವ ನಿರೂಪನೇ ಅದು."

"ನೀನು ಯಾರ ಮಾತನ್ನೂ ಮನಸ್ಸಿನ ಮೇಲೆ ಹಾಕಿಕೊಳ್ಳಬೇಡ. ಹತ್ತು ಮಂದಿಯ ಹತ್ತು ಬಗೆಯ ಮಾತುಗಳನ್ನು ಕೇಳಿದರೆ ಮನಸ್ಸು ಕೆಡುತ್ತದೆ. ವಿಷಯ ನಿಚ್ಚಳವಾಗಿ ಹೊಳೆಯುವುದಿಲ್ಲ. ಎಲ್ಲವನ್ನೂ ದೇವರ ಮೇಲೆ ಭಾರ ಹಾಕಿ ನಿಶ್ಚಿಂತೆಯಿಂದಿದ್ದು ಬಿಡು. ಅವನು ತಿಳಿವಳಿಕೆ ಕೊಟ್ಟ ರೀತಿಯಲ್ಲಿ ನಡೆದುಕೊ."

ವಿನುಮಾ ಮಾತಾಡಲಿಲ್ಲ. ಮುಖದ ಮೇಲೆ ಅಂತರಂಗದ ನೋವು ಮುದ್ರೆಯೊತ್ತಿತು. ಮನದಲೆಯಲ್ಲಿ ವಿರಾಜ್ ಮೂಡಿ ನಿಂತ.

"ವಿರಾಜ್, ಈ ದುಷ್ಟ ವ್ಯಾಪಾರಗಳು ಒಂದಲ್ಲ ಒಂದು ದಿನ ನಮ್ಮ ಕತ್ತಿಗೆ ಉರುಳಾಗಲಿವೆ ಎಂದರೆ ತಪ್ಪಲ್ಲ. ನಾನೆಷ್ಟು ಹೇಳಿಕೊಂಡರೂ ನೀವು ಮನಸ್ಸಿಗೆ ತೆಗೆದುಕೊಳ್ಳುವುದಿಲ್ಲ ನನಗದೇ ವ್ಯಸನ."

"ದುಷ್ಟ ಶಿಷ್ಟಗಳೆಲ್ಲಾ ನಮ್ಮ ನಮ್ಮ ದೃಷ್ಟಿಭೇದವೇ ಹೊರತು ಇನ್ನೇನಿಲ್ಲ ವಿನುಮಾ;"

"ಛೀ ! ಎಳ್ಳಷ್ಟು ವಿಾರಿದರೂ ಅದು ದುಷ್ಟತನವಾದೀತು."

"ನೀನೊಂದು ಮಂಕು !"

"ನಾನಿನ್ನು ಹೇಳಲಾರೆ."

"ಹಿಹ್ಹಿಹ್ಹೀ !"

ವಿರಾಜನೊಡನೆ ಎಷ್ಟು ಬಾರಿ ಸರಸವಳಿದು ವಿರಸ ಮೂಡಲಿಲ್ಲ ? ಕನಿಷ್ಟಪಕ್ಷ ಒಮ್ಮೆಯಾದರೂ ಅವರು ನನ್ನ ಮಾತಿಗೆ ಬೆಲೆ ಕೊಟ್ಟಿದ್ದಿದ್ದರೆ...?

"ವಿನುವಾ......."

"..........."

"ವಿನುವಾ......"

"ಎಲ್ಲೋ ನೋಡುತ್ತ ಸುಮ್ಮನೆ ಕುಳಿತೆಯಲ್ಲಾ. ನಿನ್ನ ಕಾಫಿ ತಣ್ಣಗಾಯ್ತು. ಅದನ್ನಿಷ್ಟು ಬಿಸಿ ಮಾಡಿಕೊಡಲೇ !" ತೊಳೆದ ಕೈಯನ್ನು ಟವಲ್ಲಿನಿಂದ ತೀಡಿಕೊಳ್ಳುತ್ತಾ ಕೇಳಿದಳು-ಮಾ.

ಕಾಫಿಯ ಬಸಿಯನ್ನು ಮುಟ್ಟಿ ನೋಡಿ "ತಣ್ಣಗಾಗಲಿಲ್ಲ" ಎಂದಷ್ಟು ನುಡಿದು ಉಪ್ಪಿಟ್ಟಿನ ಕೊನೆಯ ತುತ್ತನ್ನು ನುಂಗಿ ಕಾಫಿಯನ್ನು ಹೀರಿ ಎದ್ದಳು – ವಿನುವಾ. ಮಾ ಆಗಲೇ ಅಡುಗೆಗೆ ಕೈ ಹಚ್ಚಿಯಾಗಿತ್ತು. ಬೇಡವೆಂದರೂ ಕೇಳಲಿಲ್ಲ. ಹುಳಿ ಪಲ್ಲೆ ಪಳಿದ್ಯ ಗಳನ್ನು ಮಾಡಿಟ್ಟು ಮನೆಯ ಶುಚಿಗೂ ಕೈ ಹಚ್ಚಿದಳು. ಈಚಿಗೆ ಮನೆಯ ಅಚ್ಚುಕಟ್ಟು ಕೈ ತಪ್ಪಿತ್ತು. ದೃಷ್ಟಿ ಗೋಚರವಾದರೂ ಮಾಡಲು ಮನಸ್ಸಿರಲಿಲ್ಲ. ಅಂತಲೇ ಸ್ಥಳಪಲ್ಲಟವಾದ ವಸ್ತು ವಸ್ತುಗಳಿಗೂ ಕೈ ಹಚ್ಚಿದಳು ಮಾ. ಒಂದೆರಡು ಗಂಟೆಯೊಳಗಾಗಿ ಮನೆ ಮೈಕೊಡವಿ ಮಡಿಯುಟ್ಟಿತು.

ಅಡುಗೆಯ ಸಾಮಗ್ರಿ ಹಣ್ಣು ಹಂಪಲು ಮುಗಿದಿತ್ತು. ತರುವು ದಾಗಿ ಮಾ ಹೊರಟಳು. ಅವಳನ್ನು ಕಳುಹಿಸಲೆಂದು ಮೆಟ್ಟಿಲವರೆವಿಗೂ ಬಂದಾಗ ರಸ್ತೆಯ ಕಡೆ ನೋಟವನ್ನಟ್ಟಿ ನಿಂತ ಸ್ತ್ರೀ ಪುರುಷರ ನೋಟ ತಟ್ಟನೆ ಇತ್ತ ಹರಿಯಿತು. ಬಹಳ ದಿನಗಳಿಂದಲೂ ಕಣ್ಣಿಗೆ ಬೀಳದಿದ್ದ ವಿನುವಯಿ ಎಲ್ಲರ ನೋಟಕ್ಕೂ ವಿಚಿತ್ರ ವಸ್ತುವಾಗಿ ತೋರಿದಳೇನೋ. ಜನಗತಿಯನ್ನುಗಮನಿಸುತ್ತಲೂ ಅಲ್ಲಿ ನಿಲ್ಲಲಾರದೆ ಒಳಗಡೆ ಸೇರಿ ಕದ ಮುಚ್ಚಿಕೊಂಡಳು. ಕೆಂಪು ಮುಂಡಾಸಿನ ಪೋಲೀಸಿನವ ಬಾಗಿಲಿಗೆ ಕೀಲಿ ಹಾಕಿದ. ಒಳ ಬಂದು ಕುಳಿತುಕೊಳ್ಳುತ್ತಲೂ ಬಗೆ ಇನ್ನಷ್ಟು ಕದಡಿತು. ಹಾಗೇ ಪಲ್ಲಂಕದ ಮೇಲೆ ಅಡ್ಡಾದಳು. ಕಣ್ಣುಗಳಲ್ಲಿ ರಂಗು ಮೂಡಿ ಹನಿ ಹನಿಯಾಗಿ ಕಂಬನಿಗಳು ಮೂಡಿದುವು.

"ಮಾವಿಾ !"

"..............."

"ವಿನೂ ಮಾವಿ!"

"ಹಾ ! ಎಲ್ಲಿದ್ದಿ ವಿಾನಾ ?"

"ಇಲ್ಲೇ..."

"ಎಲ್ಲಿ ?"

"ನಿನ್ನ ಬಳಿಯಲ್ಲಿ ! ನಿನಗೆ ಒತ್ತಾಸೆ ನೀಡುವ ಸಲುವಾಗಿ ನಾನಿಲ್ಲಿರುವೆ. ಯೋಚಿಸಬೇಡ ಮಾವಿಾ ? ಸತ್ಯಕ್ಕೆ ಎಂದೂ ಚ್ಯುತಿಯಿಲ್ಲ."

"ಸತ್ಯವನ್ನೆತ್ತಿ ಹಿಡಿಯಬೇಕಾದರೂ ಕೆಚ್ಚು ಬೇಕು ; ನೆಚ್ಚು ಬೇಕು ಸ್ಫೂರ್ತಿ ಬೇಕು."

"ಅಕ್ಷರಶಃ ಸತ್ಯ."

"........."

"ನನ್ನಲ್ಲಿ ಯಾವುದೂ ಇಲ್ಲ ವಿಾನಾ."

"ಉಂಟು. ಮುಖ್ಯವಾಗಿ ನಿನ್ನನ್ನು ನೀನು ಕಂಡುಕೋ."

"ನನ್ನಿಂದ ಸಾಧ್ಯವೇ ವಿಾನಾ ?"

"ನಡೆಸುವವ ಬೇರೆ ಇದ್ದಾನೆ ; ಯೋಚಿಸಬೇಡ."

ವಿಾನಳ ಎಳೆ ನಗುವಿನ ತಿಳಿಸದ್ದು ಎಲ್ಲೋ ದೂರದಲ್ಲಿ-ಬಹು–ದೂರದಲ್ಲಿ ಮರ್ಮರಿಸಿತು.

....ಹಾ !

...ಹೊರಗಡೆ ತುಂತುರು ಮಳೆ ; ಚಳಿಗಾಳಿ.

....ಆಕಾಶದಲ್ಲಿ ಊಹೆಗೂ ನಿಲುಕದ ಕುಳಿರ್ಗಾಳಿ.

ಛೀಃ !...ಅರಳು ಮೊಗ್ಗೆಯಂತಹ ಹುಡುಗಿ ವಿಾನ. ಅವಳು ಎಷ್ಟೇ ಗೊಂದಲವೆಬ್ಬಿಸಿದರೂ ಇಂದಿನಂತಹ ಉತ್ಕಟ ಪರಿಸ್ಥಿತಿ ಬರುತ್ತಿರಲಿಲ್ಲವೆಂಬುದನ್ನು ವಿರಾಜ್ ಕಂಡುಕೊಳ್ಳಲಿಲ್ಲ. ಬಹಳ ಅವಸರಪಟ್ಟರು. ವಿಾನಾ ರೂಪತಃ ಮನಮೋಹಿನಿಯಷ್ಟೇ ಅಲ್ಲ. ಸ್ವರೂಪತಃ ಮನಮೋಹಿನಿಯೂ ಹೌದು. ಆದರೂ ವಿರಾಜ್ ಕರುಣೆ ತಳೆಯಲಿಲ್ಲ.

...ಹಾಗೆಂದರೂ...

ಬುದ್ಧಿ ಸ್ವಾರ್ಥಗಳೆರಡೂ ಆಖಾಡಕ್ಕಿಳಿದಿವೆ ಯಾರಿಗೆ ಗೆಲುವೋ.

ವಿಚಾರಗತ್ತರಿಯಲ್ಲಿ ಸಿಲುಕಿ ತನುಮನಗಳು ದಣಿದುವು. ಕಂಬನಿಯ ಕೋಡಿ ಉಕ್ಕಿ ಹರಿಯಿತು. ಎಷ್ಟೇ ಪ್ರಯತ್ನ ಪಟ್ಟರೂ ತನ್ನನ್ನು ತಾನು ಹತೋಟಿಯಲ್ಲಿಟ್ಟುಕೊಳ್ಳಲಾಗದೆ ಕಣ್ಣುಗಳನ್ನು ಮಾಡಿನ ನೇರಕ್ಕೆ ಹರಿಸಿದಳು. ತಂಗಾಳಿಯ ರಭಸಕ್ಕೆ ಕಿಟಕಿಯ ಪರದೆ ಬಸಬಸ ಸದ್ದುಗೈಯುತ್ತಿತ್ತು. ಗೋಡೆಯ ಮೇಲಿನ ಗಡಿಯಾರ ಟಿಕ್‌ಟಾಕ್ ನಿನಾದದೊಡನೆ ಮುಂದುವರಿಯುತ್ತಿದೆ. ಟಿಕ್‌ಟಾಕ್ ಸದ್ದಿಗನುಗುಣವಾಗಿ ಹೃದಯ ವೀಣೆಯೂ ಟಿಕ್‌ಟಾಕ್ ಸದ್ದುಗೈಯ್ಯಿತು. ಮುಳ್ಳು ಹನ್ನೊಂದರ ಸಂಖ್ಯೆಯನ್ನು ದಿಟ್ಟಗತಿಯಲ್ಲಿ ಮುಟ್ಟುತ್ತಲೂ ರಾಜಾಭಾಯಿ ಟವರ್ ಗಡಿಯಾರ ಗಂಟೆ ಬಾರಿಸಿತು. ಮರುಕ್ಷಣದಲ್ಲಿ ನೋಟ ಗೋಡೆಯ ಮೇಲಿನ ಗಡಿಯಾರದ ಕಡೆ ಹರಿಯಿತು.

ವಿಶ್ವವಿದ್ಯಾಲಯದ ಹಿಂಬದಿಯಲ್ಲಿ ರೈಲು ಸಿಳ್ಳೆ ಹಾಕಿತು. ಕ್ಕೂಊಊ ! ಕ್ಕೂಊಊಊ !

ಕಣ್ಣುಗಳನ್ನು ಹಾಗೇ ಮುಚ್ಚಿಕೊಂಡಳು. ಕ್ಷಣಕ್ಷಣಗಳು ನಿರಾತಂಕವಾಗಿ ಉರುಳಿದುವು. ಅಂತಃಚಕ್ಷುವಿನ ನೇರಕ್ಕೆ ಹೊಳೆ ಹೊಳೆಯುವ ಕಣ್ಣುಗಳೆರಡು ಭಾವಪೂರ್ಣವಾಗಿ ಎವೆಯಿಕ್ಕದೆ ಇನಿತೂ ಚಲಿಸದೆ ಇತ್ತಲೇ ನಿಟ್ಟಿಸುತ್ತ್ವನೆ. ಅದೇಕೆ ? ಯಾರ ಕಣ್ಣುಗಳು ಅವು ?

ನೀಲಿಗಣ್ಣುಗಳಲ್ಲ, ಕಪ್ಪುಗಣ್ಣುಗಳೂ ಅಲ್ಲ. ನಸುಬೆಳ್ಳಗಿನ ಬೂದಿಗಣ್ಣುಗಳು ಅವು. ಮಿನಳ ಕಣ್ಣುಗಳೇ ? ಅಲ್ಲ. ಸ್ವಭಾವತಃ ಸ್ವರೂಪತಃ ಅವು ಮಿನಾ ಕಣ್ಣುಗಳಲ್ಲವೇ ಅಲ್ಲ. ಹಾಗಾದರೆ....? ಜಗತ್ತಿನ ಕಣ್ಣುಗಳೇ ? ಅವೇಕೆ ಹಾಗೆ ನಿಟ್ಟಿಸುತ್ತಿವೆ ? ನನ್ನಿಂದ ಏನನ್ನು ನಿರೀಕ್ಷಿಸುತ್ತಿವೆ-ಅವು ?

ಯೋಚಿಸಿದಷ್ಟೂ ಬುದ್ಧಿ ಮಂದವಾದಂತೆನಿಸಿತು. ಮುಚ್ಚಿದ ಕಣ್ಣು ತೆರೆಯದೆ ವಿಚಾರ ವೇದಿಕೆಯಲ್ಲಿ ಹುಚ್ಚಾಗಿ ಕೆಚ್ಚಾಗಿ ದೀನೆಯಾಗಿ ಏಕಾಕಿಯಾಗಿ ಅಂಡಲೆದಳು-ವಿನುಮಾ. ತುಂತುರು ಮಳೆಯಿಂದ ಹವೆ ತಂಪಾಗಿದ್ದರೂ ಮೈಯಲ್ಲಿ ಬೆವರಿನ ತುಂತುರುಗಳು ಮೂಡಿದುವು.

ತಲೆಬಾಗಿಲ ಕರೆಗಂಟೆ ಕಿರ್ರನೆ ಸದ್ದು ಮಾಡಿ ಕರೆ ನೀಡಿತು. ಮುಚ್ಚಿದ ಕಣ್ಣುಗಳು ತಟ್ಟನೆ ತೆರೆದುವು. ನೋಟ ಬಾಗಿಲಕಡೆ ಹರಿಯಿತು. ಏಳಲು

ವೈಯ್ಯಲ್ಲಿ ಉತ್ಸಾಹವೇ ಇಲ್ಲ. ಕಿಟಕಿಯ ಪರದೆಯ ಸಂದಿಯಿಂದ ಕೆಂಪು ಮುಂಡಾಸದವನು ಕೂಗಿ ಹೇಳಿದ. "ಅಮ್ಮಾವರು ಬಂದಿದ್ದಾರೆ; ಕದ ತೆಗೆಯಿರಿ."

ವಿನುಮಾ ಎದ್ದು ಕದ ತೆರೆದೊಡನೆ ಮೊದಲು ತಂಡಿಗಾಳಿ ಭರ್‍ರನೆ ನುಗ್ಗಿ ಬಂತು. ಹಿಂದೆಯೇ ಮಾ ಒಳಬಂದಳು. ಹಣ್ಣು ತರಕಾರಿಯ ಬುಟ್ಟಿಯನ್ನು ಬದಿಗಿಟ್ಟು "ನಿನ್ನ ಮುಖ ತುಂಬ ಬಾಡಿದೆ, ವಿನುಮಾ. ನೀನು ಹೀಗೆ ಒಂದೇ ಸಮನೆ ಕೊರಗಿದರೆ ನಿನ್ನ ಗತಿ ಏನಾಗಬೇಡ ?"

ವಿನುಮಾ ನೀರಸ ನಗೆ ಬೀರಿದಳು, ತುಟಿ ಬಿರಿಯಲಿಲ್ಲ.

ಮಾ ಕೈ ಕಾಲು ತೊಳೆಯಲು ನೀರು ಮನೆಗೆ ಹೋದಳು. ಬಂಧು ಬಳಗದವರ ಅಭಿಪ್ರಾಯಗಳೆಲ್ಲವೂ ತಲೆಯಲ್ಲಿ ಹುಚ್ಚೆದ್ದು ನರ್ತಿಸಿದುವು. ಮಾ ಮತ್ತು ಶೈಲಳನ್ನು ಬಿಟ್ಟರೆ ಉಳಿದೆಲ್ಲ ಮಂದಿಯ ಅಭಿಪ್ರಾಯವೂ ಹೆಚ್ಚು ಕಡಿಮೆ ಒಂದೇ ದಾರಿಯಲ್ಲಿ ಓಡುವ ಕುದುರೆಗಳು. ಏನು ಮಾಡಲಿ ? ಮುಂದೇನು ?

ಟ್ರಣ್, ಟ್ರಣ್, ಟ್ರಣ್, ಟ್ರಣ್.

ಮೇಜಿನ ಮೇಲಿನ ಟೆಲಿಫೋನು ಟಂಟಣಿ ಸದ್ದುಗೈದು ಕರೆ ನೀಡಿತು.

ವಿನುಮಾ ರಿಸೀವರನ್ನು ಕೈಗೆತ್ತಿಕೊಂಡಳು. ಆ ಕಡೆಯಿಂದ ಶೈಲಳ ದನಿ ಮೊಳಗಿತು.

"ವಿನುಮಾ."

"ಓ.....ಶೈಲಾ !"

"ಹೇಗಿದ್ದೀ ವಿನುಮಾ ?"

"ಯಥಾ ರೀತಿ..."

"ಈಗ ನಿನ್ನೊಂದಿಗೆ ಮಾ ಇರುವುದರಿಂದ ಹೊತ್ತು ಕಳೆಯಲು ಹೆಚ್ಚು ತೊಂದರೆ ಇಲ್ಲ ಅಲ್ಲವೇ ? ಇನ್ನಾದರೂ ಸ್ವಲ್ಪ ಸಮಾಧಾನದಿಂದ ಇರು."

ನೀನೂ ಬಾ....ನೀನೂ ಇದ್ದರೆ ಇನ್ನೂ ಕ್ಷೇಮ. ಮನೆ ಕೆಲಸ ಮಾಡಿಟ್ಟು ಮಕ್ಕಳನ್ನು ಕರೆದುಕೊಂಡು ಬಾ."

"ಇನ್ನು ನಿನ್ನ ಮನೆಯ ಪಕ್ಕಕ್ಕೆ ಬರುವೆ, ಮತ್ತೇಕೆ ಈಗ ಪುನಃ ಮಕ್ಕಳನ್ನು ಕರೆತರುವ ತೊಂದರೆ ?"

"ಇರಲಿ, ಆಗ ಬಂದರೆ ಈಗ ಬರಬಾರದೇ ?"

"ಮಕ್ಕಳನ್ನು ಕರೆದುಕೊಂಡು ಬರುವುದು ತುಂಬ ಕಷ್ಟ. ನಾನೇ ಬರುವೆ. ರಮಾಬಾಯಿ ಮನೆ ಬಿಡುವುದೆಂದೆಂಬುದು ತಿಳಿದುಬಂತೇ ?"

"ಯಜಮಾನ ಪುಣೆಗೆ ಹೋಗಿಯಾಗಿದೆ. ಇವರು ಮಕ್ಕಳಿಗೆ ರಜೆ ಬರುವವರೆಗೆ ಇಲ್ಲೇ ಇರುವಂತೆ ತೋರುತ್ತೆ. ಇನ್ನೂ ಅವರು ಯಾವ ನಿರ್ಧಾರವನ್ನೂ ಕೈಕೊಂಡಿಲ್ಲ. ಅವರು ಈಗಲೇ ಬಿಟ್ಟಿದ್ದರೆ ಎನಿಸುತ್ತೆ ನನಗೆ."

"ಅದು ಸಹಜ."

"ಮಕ್ಕಳು ಮರಿ ಇರುವವರು. ಪಾಪ, ಅವರಿಗೂ ತೊಂದರೆ ಇದೆ."

"ಇರಲಿ, ಮಧ್ಯಾಹ್ನ ಬರುವೆ ವಿನುಮಾ."

"ಸಾಯಂಕಾಲದವರೆಗೂ ಇರುವಂತೆ ಬಿಡುವು ಮಾಡಿಕೊಂಡು ಬಾ."

"ಆಗಲಿ ವಿನುಮಾ."

"ತುಂಬ ಥ್ಯಾಂಕ್ಸ್ ಶೈಲಾ."

"ಚೀರಿಯೋ !"

"ಚೀರಿಯೋ !"

೦ ೦ ೦ ೦ ೦

ಮಿನಳ ದಿವ್ಯ ಚೇತನಕ್ಕೆ ಶಾಂತಿಯ ಸೇಚನೆಯಾಗಬೇಕಾದರೆ ಇದ್ದ ವಿಷಯ ಹೊರಬೀಳಿಸುವುದು....ವಿನುಮಯಿಯ ಕಲ್ಯಾಣವಾಗಬೇಕಾದರೆ ಸತ್ಯದ ಮುಖಕ್ಕೆ ಮಸಿ ಬಳಿದು ಅಸುರೀ ಶಕ್ತಿಯನ್ನು ಪ್ರೋಜ್ವಲಗೊಳಿಸುವುದು....

ಯಾವುದು ಸರಿ ? ಯಾವುದು ಹಿತ ??

ಏನು ಮಾಡಲಿ ?

ಹೊತ್ತು ಉರುಳಿತು. ತಂಗಾಳಿ ತಣ್ಣಗೆ ತೀಡಿತು.

ರಾಜಾಭಾಯಿ ಟವರ್ ಗಡಿಯಾರ ಗಂಟೆ ಬಾರಿಸಿತು. ಒಂದು ಎರಡು ಮೂರು ನಾಲ್ಕು ಐದು ಆರು ಏಳು ಎಂಟು ಒಂಬತ್ತು ಹತ್ತು

ಹನ್ನೊಂದು ಹನ್ನೆರಡು. ನಿಶಾಚರರು ಸಂಚರಿಸುವ ಹೊತ್ತು. ಶಯ್ಯಾ ಪ್ರಾಂತದಲ್ಲಿ ಮಾ ನಿದ್ದೆಗೈದಿದ್ದಾಳೆ. ಸ್ವಲ್ಪ ವಿುಸುಕಾಡಿದರೂ ಅವಳಿಗೆ ಎಚ್ಚರವಾಗುತ್ತೆ. ನಿದ್ದೆ ಬಾರದುದರಿಂದ ಅತ್ತಿತ್ತ ಹೊರಳಿ ಮಲಗುವ ಮನಸ್ಸು. ಆದರೂ ಹೊರಳುವಂತಿಲ್ಲ. ಒಂದಲ್ಲ ಹತ್ತಲ್ಲ ನೂರಲ್ಲ ಸಾವಿರಾರು ಬಾರಿ ಮೊರೆ ಇಟ್ಟುಕೊಂಡಾಗಿತ್ತು. ಹಲವಾರು ಬಾರಿ ಗೀತಾ ಪಠಣ ಮಾಡಿಯಾಗಿತ್ತು. ಧರ್ಮ ಗ್ರಂಥಗಳನ್ನು ತಿರುವಿ ಹಾಕಿಯಾಗಿತ್ತು. ಸಂತ ಮಹಾಶಯರ ವಿಭೂತಿ ಪುರುಷರ ಜೀವನಧಾರೆಯನ್ನು ಹೀರಿ ಜೀರ್ಣಿಸಿಕೊಂಡಾಗಿತ್ತು. ಆದರೂ ಮಾನವೀಯತೆಯನ್ನು ಉಳಿಸಿಕೊಳ್ಳುವುದು ಸಾಮಾನ್ಯವಲ್ಲ. ಅಸುರೀ ಶಕ್ತಿಯು ಬಲವೇ ಬಲ.

ತಲೆದಿಶೆಯಲ್ಲಿನ ಚಿಕ್ಕ ಬೆಂಚಿನ ಮೇಲೆ ನವನೀತಚಂದ್ರ ಅಡ್ಡಾಗಿದ್ದ. ಅವನಿಗೆ ಆಗಿನಿಂದಲೂ ಹಿಂದೆ ಮುಂದೆ ತಿರುಗಿ ತನ್ನ ಹಣ ಖರ್ಚಾಯಿತೆಂದು ಬಹಳ ಅಸಮಾಧಾನ. ಆದರೂ ಎಂತಹ ಸುಖ ನಿದ್ರೆ ?

...ಬಿತ್ತರದಂಬರದಲ್ಲಿ ಘನನೆತ್ತ ಮೋಡಗಳನ್ನು ಭೇದಿಸಿಕೊಂಡು ವಿಮಾನವೊಂದು ಹಾರುತ್ತಿದೆ...ಅದು ಚಿದಾಗಸವನ್ನು ಹೊಕ್ಕಿತೋ ಏನೋ. ಮನದಲ್ಲೂ ಅಷ್ಟೇ ಗದ್ದಲ–ಗೊಂದಲ.

"ಮಾವಿಾ ...!"

...ಹಾ ! ಆ ದನಿ ಎತ್ತಣದು ? ಗಾಳಿಯೊಡನೆ ತೇಲಿ ಬಂತೇ ಅಥವಾ ವಿಮಾನದೊಡನೆ....?

"ಮಾವಿಾ..."

"ಹರೇ ರಾಂ !"

"ವಿನೂ ಮಾವಿಾ."

"ಕ್ಷಮಿಸು ಮಿಾನಾ."

"ಅಂಥಾದ್ದೇನಿದೆ ?"

"ನಿನಗೆ ಬಹಳೇ ಸುಲಭ...ನನಗೆ ಧರ್ಮಸಂಕಟ."

"ಧರ್ಮ ಪಥವನ್ನು ತುಳಿದರೆ ಧರ್ಮಸಂಕಟವೇನಿದೆ ?"

"... ..."

"ನಾನು ಮೃತ್ಯು ಮುಖದಲ್ಲಿದ್ದರೂ ಧರ್ಮಕ್ಕೆ ಭಂಗ ತರಲಿಲ್ಲ."

"ಒಪ್ಪಿಕೊಳ್ಳುವೆ ವಿಾನಾ...."

"ಧರ್ಮಂ ಶರಣಂ ಗಚ್ಛಾಮಿ"

ಹಾಡುತ್ತಾ ನಲಿಯುತ್ತಾ ತೇಲಿಹೋದಳು ವಿಾನ.

ಬೆಳಗಾದರೆ ನ್ಯಾಯಾಲಯದ ಕಟಕಟೆಯಲ್ಲಿ ಸಾಕ್ಷಿದಾರಳಾಗಿ ನಿಲ್ಲ ಬೇಕು. "ದೇವರೇ! ಬೆಳಗಾಗದಿರಲಿ" ಎಂದು ಮೊರೆ ಇಟ್ಟಿತು ಎದೆಯ ಹಕ್ಕಿ. ಹೊತ್ತು ದೀರ್ಘವಾಗಿ ಉರುಳಿ ಬೆಳಗಿನ ಮುಂಬೆಳಕು ಮೂಡಿತು. ಎಳೆ ಬೆಳಕು ತೆರೆ ತೆರೆಯಾಗಿ ಒಳಗೆ ನುಸುಳಿ ಬಂತು. ಎಂದಿನಂತೆ ಇಂದೂ ದಿನಚರಿ ಆರಂಭವಾಯಿತು. ನವನೀತಚಂದ್ರ ಹೊತ್ತಿಗೆ ಮುಂಚೆಯೇ ಎದ್ದು ಹಾಸಿಗೆ ಮಡಿಸಿದ. ಮಾ ಪಲ್ಲಂಕದ ಮೇಲೆ ದುಪ್ಪಟಿಯನ್ನು ಮುಚ್ಚಿದಳು. ಮುಖ ಮಜ್ಜನ ಮಾಡಿ ಕಾಫಿ ತಿಂಡಿಗಳಿಗೆ ಒಲೆ ಹಚ್ಚಿಯೂ ಆಯಿತು. ಹೊತ್ತು ಓಡುತ್ತಿದ್ದಂತೆ ಹೃದಯ ವ್ಯಾಪ್ತಿಗೆ ವಿಾರಿ ಮಿಡಿಯ ಹತ್ತಿತು.

"ನಿನ್ನ ಭಾಗ್ಯ ನಿನ್ನ ಕೈಯಲ್ಲುಂಟು ವಿನುಮಾ" ಎಂಬುದು ಬಹು ಮತಾಭಿಪ್ರಾಯ.

"ಸತ್ಯಕ್ಕೆ ಚ್ಯುತಿ ತರಬೇಡ" ಎಂಬುದು ಕೇವಲ ಕೆಲವೇ ಕೆಲವು ಮಂದಿಯ ಸಲಹೆ.

"ನೀನೇ ನೀನಾಗಿ ಯೋಚಿಸಿ ನೋಡು ವಿನುಮಾ. ಆಗಿದ್ದಂತೂ ಆಗಿ ಹೋಗಿದೆ. ಮುಖ್ಯವಾಗಿ ನಿನ್ನ ಬಾಳನ್ನು ಬೆಳಗಿಸಿಕೊ. ಧರ್ಮದ ಹೆಸರಿನಲ್ಲಿ ನ್ಯಾಯದ ಹೆಸರಿನಲ್ಲಿ ನಿನ್ನ ಹಾದಿಗೆ ನೀನೇ ಮುಳ್ಳಾಗಬೇಡ."

ನವನೀತಚಂದ್ರನ ನುಡಿ ಕಿವಿಯಲ್ಲಿ ಮೆಲ್ಲನೆ ಮಾರ್ನುಡಿಯಿತು.

ವಿರಾಜ್ ಕೇಳಿಕೊಂಡಿದ್ದೂ ಅದನ್ನೆ. ದೀನನಾಗಿ ಮಗುವಿನಂತೆ ಕೇಳಿಕೊಂಡ ರೀತಿ ಮನದಲ್ಲಿ ತೇಲಿ ನಲಿಯಿತು. ಒಡನೆ ಕಣ್ಣುಗಳು ತುಂಬಿ ಬಂದುವು. ನೀರು ಮನೆಗೆ ಹೋಗಿ ತಣ್ಣೀರಿನಲ್ಲಿ ಮುಖ ಮಜ್ಜನ ಮಾಡಿದಳು. ತಣ್ಣೀರಿನೊಂದಿಗೆ ಕಣ್ಣೀರೂ ಬೆರೆತುವು. ತನ್ನ ದುರ್ಬಲತೆಯನ್ನು ತೋರಗೊಡದಿರಲು ಟವಲ್ಲಿನಿಂದ ತೀಡಿಕೊಂಡು ಹೊರಬಂದಳು. ಆಪಾದಮಸ್ತಕವೂ ಮೆಲ್ಲನೆ–ಬಹು–ಮೆಲ್ಲನೆ ಕಂಪಿಸತೊಡಗಿತು, ಕಲ್ಲು ಹೊತ್ತಂತೆ ಹೃದಯ ಭಾರವಾಯಿತು. ಮೈ ಹೊರೆಯನ್ನು ಹೊರಲಾರದೆ

ಹೊತ್ತ ಕಾಲುಗಳು ಬಳುಕಿದುವು. ಬಯಸದಿದ್ದರೂ ಬೇಡವೆಂದರೂ ಬಿಡದೆ ಚಿತ್ರಭಿತ್ತಿಯಲ್ಲಿ ವಿನಾನಳ ಅಕಳಂಕ ಮೂರ್ತಿ ಮೂಡಿ ನಿಂತಿತು. ಕಣ್ಣುಗಳನ್ನು ತೀಡಿಕೊಂಡಳು.

ಇಂದು ಕೆಂಪು ಮುಂಡಾಸದವನ ಪಹರೆಯಲ್ಲಿ ವಿನುಮಾ ಸಾಕ್ಷಿ ಹೇಳಲು ಕೋರ್ಟಿಗೆ ಹೋಗುತ್ತಾಳೆ ಎಂಬುದು ನೆರೆಹೊರೆಯವರಿಗೆ ತಿಳಿದ ವಿಷಯ. ಗಳಿಗೆಗೊಂದು ಬಾರಿ ಎಲ್ಲರೂ ಇತ್ತ ಹಣುಕುವವರೇ. ನೂರಾರು ಕಣ್ಣುಗಳ ತವಕವನ್ನು ಗಮನಿಸುವಾಗ ಮೈಯಲ್ಲಿ ಮುಳ್ಳು ಮುರಿದಂತಾಯಿತು. ಅಂತಃಚಕ್ಷುವಿಗೆ ತೋರಿದ ಕಣ್ಣುಗಳ ಹೊಳಪು ಎಲ್ಲರ ಕಣ್ಣುಗಳಲ್ಲೂ ಮಿನುಗುತ್ತಿದೆ !

....ಅಯ್ಯೋ, ದೇವರೇ !

ಹೊತ್ತು ಬಳಿ ಸಾರಿ ಬಂತು. ಬಾಗಿಲಿಗೆ ಕೀಲಿಯಿಕ್ಕಿ, ತಲೆಯ ಮೇಲೆ ಸೀರೆಯ ಸೆರಗು ಹೊದ್ದು, ಬಾಗಿದ ತಲೆಯನ್ನು ಎತ್ತದೆ ಶೈಲ ನವನೀತಚಂದ್ರ ಮತ್ತು ಮಾ–ರವರೊಡನೆ ಹೆಜ್ಜೆ ಹಾಕಿ, ಸುತ್ತ ಮುತ್ತಿನ ತವಕ ತುಂಬಿದ ಕಣ್ಣುಗಳ ಮುಂದೆ ಮಿಂಚಿ ಮಾಯವಾದಳು–ವಿನುಮಾ. ಕೈಕಾಲುಗಳ ಶಕ್ತಿ ಉಡುಗಿದಂತಾಗಿತ್ತು. ಆದರೂ ಯಾರ ಕೈಯಾಶ್ರಯವೂ ಇಲ್ಲದೆ ಸಾಲು ಮೆಟ್ಟಿಲುಗಳನ್ನು ಇಳಿದಳು ವಿನುಮಾ. ಜನಭರಿತ ಹಾದಿಯನ್ನು ಕಳೆದು ಕೋರ್ಟಿನ ಮೆಟ್ಟಿಲನ್ನು ಹತ್ತುವಾಗ ಎದೆಯ ಮೇಲೆ ರೈಲು ಹರಿದಂತಾಯಿತು.

ಸಹಸ್ರ ಸಹಸ್ರ ಮಂದಿ ನೆರೆದಿದ್ದರೂ ನೀರವ. ನಿಶ್ಶಬ್ದ. ನೀರವದ ಮಧ್ಯೆ ಕೋರ್ಟು ಪ್ರಮಾಣ ವಚನ ಕೈಕೊಳ್ಳಲು ಹೇಳಿತು.

ಕ್ಷೀಣಿತ ದನಿ ಹೊರಬಿತ್ತು ; "ದೇವರ ಆಣೆ ಮಾಡಿ ಸತ್ಯವನ್ನು ಹೇಳುವೆ."

ಬೆಂದೆದೆಗಳ ಬಿಸುಸುಯ್ಲು ಬೀಸು ಗಾಳಿಯೊಂದಿಗೆ ಸ್ವಚ್ಛಂದವಾಗಿ ಬೆರೆಯಿತು.

ಸಾಕ್ಷಿ ಪ್ರಮಾಣ ವಚನ ಕೈಕೊಂಡ ರೀತಿಯನ್ನು ಸಹಸ್ರ ಸಹಸ್ರ ಕಣ್ಣುಗಳು ನಿರಿನಿರಿ ನಿಟ್ಟಿಸಿದುವು. ಆರೇಳು ತಿಂಗಳ ನಂತರ ವಿರಾಜ್

ಪ್ರತ್ಯಕ್ಷನಾಗಿದ್ದ. ದೈನ್ಯ ನೋಟ ಅತ್ತ ಹೊರಳಿತು. ಅವನೂ ಇತ್ತಲೇ ದೀನಾದೀನನಾಗಿ ನಿಟ್ಟಿಸುತ್ತಿದ್ದ – ನೋಡಿದ ಮೊದಲ ನೋಟಕ್ಕೆ ಸಣ್ಣಗೆ ಬೆಳ್ಳಿಯ ಗೆರೆಯಂತೆ ನೀರಾಡಿತು. ಒಡನೆ ನೋಟವನ್ನು ತಗ್ಗಿಸಿದಳು ವಿನುಮಾ. ಮತ್ತೆ ನೋಟ ಅತ್ತ ಹೊರಳಲಿಲ್ಲ.

ಬಹಳ ಪ್ರಮಾಣದಲ್ಲಿ ಹೆಂಗಳೆಯರೂ ನೆರೆಹೊರೆಯವರೂ ನೆರೆದಿದ್ದಾರೆ.

ವಿರಾಜನ ಪರವಾಗಿ ಹಾಜರಿದ್ದ ಬ್ಯಾರಿಸ್ಟರು ಚಾಣಾಕ್ಷತೆ ಬುದ್ಧಿವಂತಿಕೆ ಧೈರ್ಯ ಪಾಂಡಿತ್ಯಗಳಲ್ಲಿ ಹೆಸರಾಂತ ವ್ಯಕ್ತಿ. ಒಂದೇ ಗಳಿಗೆಯಲ್ಲಿ ಎದುರಾಳಿಯನ್ನು ಪುಟ ಹಾರಿಸುವಂತಹ ಮಾತಿನ ಚಕಮಕಿ. ವಕೀಲಿ ವ್ಯವಸಾಯದಲ್ಲಿ ನುರಿತ ಕೈ. ಅವರು ಕೈಕೊಂಡ ಖಟ್ಲೆಗಳಲ್ಲಿ ಸೋಲೆಂಬುದು ಇಲ್ಲ. ಎರಡು ಬಾರಿ ನ್ಯಾಯಾಧೀಶನ ಗದ್ದುಗೆಗೆ ಕೈಬೀಸಿ ಕರೆದಿದ್ದರೂ ಅದನ್ನು ತಿರಸ್ಕಾರದಿಂದ ಕಂಡ ವ್ಯಕ್ತಿ. ಅವರ ದಿಟ್ಟ ಮನೋಭಾವವನ್ನು ನ್ಯಾಯಾಲಯಕ್ಕೆ ನ್ಯಾಯಾಲಯವೇ ಮೆಚ್ಚಿಕೊಂಡಿತ್ತು.

ಸರಕಾರಿ ವಕೀಲರು ಪ್ರಶ್ನೆಯನ್ನು ಮುಂದಿಟ್ಟರು "ಪ್ರತ್ಯಕ್ಷದರ್ಶಿಯಾದ ನೀವು ಅಂದಿನ ಘಟನೆಯನ್ನು ಸ್ವಲ್ಪವೂ ಮರೆ ಮಾಚದೆ ಹೇಳಿರಿ."

"ಅಂದು, ನಾನು ರಾತ್ರಿಯ ರೈಲಿಗೆ ಬೆಂಗಳೂರಿಗೆ ಹೊರಡುವವಳಿದ್ದೆ. ಮೃತ ಮೀನಳ ತಂದೆ ತಾಯಿಯರು ಬೆಂಗಳೂರಿನಲ್ಲಿದ್ದಾರೆ. ಮೀನಾ ತನ್ನ ತಂಗಿಯರಿಗೆ ಕೆಲವು ಫ್ಯಾನ್ಸಿ ಸಾಮಾನುಗಳನ್ನು ನನ್ನೊಂದಿಗೆ ಕಳುಹಿಸುವ ಸಲುವಾಗಿ ನನಗೆ ರಿಂಗ್ ಮಾಡಿದಳು. ನಾನವಳಿಗೆ ಸಾಯಂಕಾಲ ಮನೆಗೆ ಬಾ ಎಂದೆ. ಅದಾದ ಸ್ವಲ್ಪ ಹೊತ್ತಿನಲ್ಲಿ ನನ್ನ ಗೆಳತಿ ಶೈಲಾ ರಿಂಗ್ ಮಾಡಿ ರಾಣಾಪೇಟ್‌ನಲ್ಲಿ ಒಳ್ಳೆಯ ಫ್ಯಾನ್ಸಿ ಸಾಮಾನುಗಳಿವೆ. ಹೋಗೋಣ ಎಂದಳು. ಆದರೆ ಅದರ ಮೊದಲೇ ಮೀನಳಿಗೆ ನಾನು ಎಲ್ಲಿಯೂ ಹೋಗುವುದಿಲ್ಲವೆಂದು ಹೇಳಿಯಾಗಿತ್ತು. ಏನು ಮಾಡುವುದೆಂದು ನಾನು ಸ್ವಲ್ಪ ಯೋಚನೆಗೊಳಗಾದೆ. ಮೀನಾ ಬರುವವರೆಗೂ ಕಾದಿದ್ದು ಅವಳನ್ನೂ ಕರೆದುಕೊಂಡೇ ಹೊರಡುವು

ದೆಂದು ಯೋಚನೆ ಬಂತು. ಶೈಲಾ ಒಪ್ಪಿದಳು. ಸಾಮಾನ್ಯವಾಗಿ ವಿಾನಾ ಒಬ್ಬಳೇ ಬರುವುದಾದಲ್ಲಿ ಮಧ್ಯಾಹ್ನ ಚಹಕ್ಕೆ ಮೊದಲೇ ನಮ್ಮಲ್ಲಿಗೆ ಬರುತ್ತಿದ್ದಳು. ಶಂಕರ್ ಜೊತೆಗೆ ಬಂದರೆ ಸಾಯಂಕಾಲ ಐದೂವರೆಯ ನಂತರ ಬರುತ್ತಿದ್ದಳು. ನಾಲ್ಕೂವರೆ ಗಂಟೆಯವರೆಗೆ ಕಾದಿದ್ದು ಹೋದರೆ ಐದೂವರೆಯೊಳಗೆ ಹಿಂದಿರುಗಬಹುದು ಎಂದೆನಿಸಿ ಶೈಲಳಿಗೆ ಬರಲು ಹೇಳಿದೆ. ಅದರಂತೆಯೇ ಶೈಲಾ ಮಧ್ಯಾಹ್ನ ನಾಲ್ಕು ಗಂಟೆಗೆ ಕರೆದೊಯ್ಯಲು ಬಂದರೂ ವಿಾನಾ ಬರಲಿಲ್ಲ. ಅವಳಿಗಾಗಿ ನಾವು ಕಾದು ನೋಡಿದೆವು. ಅವಳಾಗಲೀ ಅವಳಿಂದ ಟೆಲಿಫೋನಾಗಲೀ ಬರಲಿಲ್ಲ. ಅನುದಿನವೂ ಆಫೀಸಿನಿಂದ ಅವಳ ಪತಿ ಶಂಕರ್ ಐದು ಗಂಟೆಗೆ ಮನೆಗೆ ಬರುತ್ತಾರಾದ್ದರಿಂದ ಅವಳು ಇನ್ನು ಬರಲಾರಳೆಂಬ ಭಾವನೆ ಮೂಡಿತು. ನಾವಿಬ್ಬರೂ ಹೊರಟೆವು. ಮನೆಗೆ ಬೀಗ ಹಾಕಿ ಬೀಗದ ಕೈಯನ್ನು ನೆರೆಮನೆಯಲ್ಲಿ ಕೊಟ್ಟು ವಿಾನಾ ಬಂದಲ್ಲಿ ಕೊಡಿ ಎಂದು ಹೇಳಿದೆ. ವಿಾನಾಳ ಮನೆಯಲ್ಲಿ ಟೆಲಿಫೋನ್ ಇರಲಿಲ್ಲವಾದುದರಿಂದ ಅವಳಿಗೆ ತಿಳಿಸಲಾಗಲಿಲ್ಲ.

"ಐದುವರೆಯ ನಂತರ ನಾನು ಶೈಲಳೊಂದಿಗೆ ರಾಣಾಪೇಟ್ ಕಡೆ ಹೊರಟೆ. ನಾನು ರಾಣಾಪೇಟ್ ತಲುಪಿದ ನಂತರ ಮನೆಗೆ ರಿಂಗ್ ಮಾಡಿದೆ. ವಿಾನಾ ಬಂದಿದ್ದಾಳೋ ಇಲ್ಲವೋ ಎಂಬುದನ್ನು ತಿಳಿದು ಕೊಳ್ಳಲು ತವಕ ಉಂಟಾಗಿತ್ತು. ವಿಾನಾ ನಮ್ಮ ಮನೆಯಿಂದ ಮಾತಾಡಿ ದಳು. ಅವಳು ಬಂದು ಆಗಲೇ ಹತ್ತು ನಿಮಿಷಗಳಾಗಿತ್ತು. ಸ್ವಲ್ಪ ಹೊತ್ತು ಅವಳೊಂದಿಗೆ ಮಾತಾಡಿದೆ. ನಾನು ಹೊರಟುಬಂದ ಕಾರಣ ವನ್ನೂ ತಿಳಿಸಿದೆ. ಅವಳು ಹೆಚ್ಚು ಆಕ್ಷೇಪಿಸದೆ ತಾನು ಅಲ್ಲೇ ಕಾದಿರುವು ದಾಗಿ ಹೇಳಿದಳು. ನನ್ನ ಕೊಳ್ಳುವಿಕೆಯೂ ಮುಗಿದಿತ್ತಾದ ಕಾರಣ ನಾನು ಬೇಗನೆ ಮನೆಗೆ ಹಿಂದಿರುಗುವುದಾಗಿ ಹೇಳಿದೆ. ನಾನು ಶೈಲಳನ್ನು ಅವಳ ಮನೆಗೆ ಬಿಟ್ಟು ನಮ್ಮ ಮನೆಗೆ ಮರುಳುವಾಗ ಸುಮಾರು ಅರ್ಧ ತಾಸು ಕಳೆದಿತ್ತು.

ಒಣಗಿದ ತುಟಿಯನ್ನು ನಾಲಿಗೆಯಿಂದ ಸವರಿಕೊಂಡು ಒಂದುಗಳಿಗೆ ತಡೆದು ಮುಂದುವರಿದಳು. "ನಾನು ಮನೆಗೆ ಬಂದೆ. ನಮ್ಮ ಕೊಠಡಿ

ಆರನೆಯ ಮಹಡಿಯಲ್ಲಿದೆ. ಸುಮಾರು ಎಂಬತ್ತು ಮೆಟ್ಟಿಲುಗಳನ್ನು ಹತ್ತ ಬೇಕು. ಹತ್ತಿ ಮನೆಯ ಬಾಗಿಲಿಗೆ ಬರುವುದಕ್ಕೂ ಬಾಗಿಲನ್ನು ಧಡಾರನೆ ತೆಗೆದು ಮೀನಾ ರೋಷದಿಂದ ಹೊರಬೀಳುವುದಕ್ಕೂ ಸರಿ ಹೋಯಿತು. ಸಿಟ್ಟಿನಿಂದ ಅವಳ ಮೈ ತರತರ ನಡುಗುತ್ತಿತ್ತು. ನನ್ನನ್ನು ನೋಡಿ ದೊಡನೆಯೇ ಕೈಹಿಡಿದು ಎಳೆದುಕೊಂಡೇ ಒಳಹೋದಳು. ನನಗೆ ಏನೆಂಬುದು ಅರ್ಥವಾಗಲಿಲ್ಲ. ನಾನು ಆಶ್ಚರ್ಯಭರಿತಳಾದೆ. ಒಳಗಡೆ ವಿರಾಜ್ ಇದ್ದರು. ಅವರು ತಬ್ಬಿಬ್ಬಾದುದು ನಿಜ. ಆದರೂ ಸಾವರಿಸಿ ಕೊಂಡು–'ನಾನೇನೋ ತಮಾಷೆಗೆ ಅವಳಿಗೆ ಕೀಟಲೆ ಮಾಡಿದ್ದುಂಟು. ಆದರೆ ಅದನ್ನು ಅವಳು ಬಹಳ ಸೀರಿಯಸ್ಸಾಗಿ ತೆಗೆದುಕೊಂಡಿದ್ದಾಳೆ ಹುಚ್ಚು ಹುಡುಗಿ' ಅಂದರು.

"ಅವಳ ಸಿಟ್ಟು ನೆತ್ತಿಗೇರಿತು."

ಮೀನಳನ್ನು ನಾನು ಬಹಳ ವರ್ಷಗಳಿಂದ ಬಲ್ಲೆ. ಅವಳು ಒಳ್ಳೆಯ ಸ್ವಭಾವದ ಹುಡುಗಿ. ಅವಳು ಅಷ್ಟು ಉಗ್ರಳಾದುದನ್ನು ನಾನೆಂದೂ ಕಂಡಿರಲಿಲ್ಲ. ಅವಳ ಸ್ಥಿತಿಯನ್ನು ನೋಡುತ್ತಲೂ ನಡೆಯಬಾರದುದು ನಡೆದಿದೆ ಎಂಬುದನ್ನು ನಾನು ಗ್ರಹಿಸಿದೆ. ಅವಳು ಕೋಪದಿಂದ ತುಟಿ ಕಚ್ಚಿ ನುಡಿದಳು. "ಮಾನ ಮರ್ಯಾದೆಯಿಲ್ಲದೆ ನನ್ನ ಮೈಮೇಲೆರಗಿ ದ್ದಾನೆ ! ಅತ್ಯಾಚಾರ ಮಾಡುವ ಉದ್ದೇಶದಿಂದಲೇ ಮಾಡಿದ್ದು ! ಹೆಣಗಿ ಕೈಕಚ್ಚಿ ಬಿಡಿಸಿಕೊಂಡು ಬಂದಿದ್ದೇನೆ. ಅವನ ಕೈ ನೋಡು !" ಎಂದಳು. ಅವರ ಕೈಯಲ್ಲಿ ಹಲ್ಲು ನಾಟಿದ ಗುರುತುಗಳಿದ್ದುದು ನಿಜವಾಗಿತ್ತು.

"ಇಷ್ಟಕ್ಕೆ ಈ ಪ್ರಕರಣ ಮುಗಿಯಲಿಲ್ಲ. ಮೀನಾ ಬಹಳ ಸಿಟ್ಟಿಗೆದ್ದುದ ರಿಂದ ಪರಿಸ್ಥಿತಿ ವಿಕೋಪಕ್ಕೆ ಹೋಯಿತು. ಅವಳು ಅನೇಕ ಅವಾಚ್ಯ ಶಬ್ದ ಗಳನ್ನಾಡಿದಳು. ವಿರಾಜ್ ಸಹ ಮೀರಿ ನಾಲಿಗೆಯನ್ನು ಹರಿಯಬಿಟ್ಟರು. ನೆರೆಮನೆಯವರಿಗೆ ಸದ್ದುಗದ್ದಲ ಕೇಳಿಸುವುದೆಂದು ನಾನು ಕಿಟಕಿ ಮತ್ತು ಬಾಗಿಲುಗಳನ್ನು ಮುಚ್ಚಿಕೊಂಡೆ. ಅವಳು ಅವರ ಮೇಲೆ ಏರಿ ಹೋಗಿ ಕೆನ್ನೆಯ ಮೇಲೆ ಬಾರಿಸಿದಳು. ನಾನು ಮಧ್ಯೆ ಪ್ರವೇಶಿಸಿದರೂ

ವಿರಾಜ್ ಸುಮ್ಮನಾಗಲಿಲ್ಲ, ತಮ್ಮ ಬಾಧ್ಯದವಳು ಎಂಬ ಸಲುಗೆ ಯಿಂದಲೋ ಏನೋ ಅವರೂ ಎರಡು ಬಾರಿಸಿದರು.

"ಪರಿಸ್ಥಿತಿ ಇನ್ನಷ್ಟು ಹದಗೆಟ್ಟಿತು."

"ಅವಳ ಕೆನ್ನೆಗೆ ಬಿದ್ದ ಏಟು ಬಲವಾಗಿದ್ದುದರಿಂದ ಹಲ್ಲುಗಳು ಅಲುಗಿ ಬಾಯಿಯಲ್ಲಿ ನೆತ್ತರು ಹರಿಯಿತು. ಹಿಂದಣ ಬಾಲ್ಕನಿಯ ಗೋಡೆ ಹೆಚ್ಚು ಎತ್ತರವಿಲ್ಲ. ಅವಳು ಅಲ್ಲಿಗೆ ಉಗಿಯಲು ಹೋದಳೆಂದು ತೋರುತ್ತೆ. ಅವಳು ಅಲ್ಲಿಗೆ ಹೋದುದೇ ತಡ ಹಿಂದುಗಡೆಯಿಂದ ವಿರಾಜ್ ಅವಳನ್ನು ತಳ್ಳಿದ್ದು ದಿಟ. ಆರನೆಯ ಮಹಡಿಯಿಂದ ಅವಳನ್ನು ತಳ್ಳಿದುದನ್ನು ಬರಿಯ ಕೋಪ ಮತ್ತು ಸನ್ನಿವೇಶಗಳ ಒತ್ತಡದಿಂದ ಎಂದು ಹೇಳಲಾರೆ. ಬಹಳ ಮಟ್ಟಿಗೆ ವಿರಾಜ್ ಕುಡಿಯುತ್ತಾರೆ. ಅಂದು ಅವರು ಹೆಚ್ಚಾಗಿ ಕುಡಿದಿದ್ದಿರಲಿಕ್ಕೂ ಸಾಕು. ಇದೊಂದು ಆಗಬಾರದ ಅವಘಡ ಒಟ್ಟಿನಲ್ಲಿ ನನ್ನ ಗ್ರಹಚಾರ."

ಕಟಕಟೆಯಲ್ಲಿ ಬಿಕ್ಕಿಬಿಕ್ಕಿ ಅತ್ತಳು ವಿನುಮಯಿ. ಮೈ ಬಸ ವಳಿದು ಬಂದಂತಾಯಿತು. ಯಾರೋ ಬಂದು ಅವಳನ್ನು ಅಲ್ಲಿಂದ ಹೊರಬರಲು ಸಹಾಯ ಮಾಡಿದರು.

ಮರುದಿನ ಮೊಕದ್ದಮೆ ಮುಂದುವರಿಯಿತು.

ವಿರಾಜ್‌ನ ಬ್ಯಾರಿಸ್ಟರು ತಮ್ಮ ಕಕ್ಷಿಯೊಡನೆ ಮಾತುಕತೆ ನಡೆಸಿ ತಮ್ಮ ಹೊಸ ಹಂಚಿಕೆ ಹೂಡಿದರು. ವಿನುಮಯಿ ಸತ್ಯಾಂಶವನ್ನು ಹೊರಗೆಡಹಿಯಾಳೆಂದು ವಿರಾಜ್‌ನಾಗಲೀ ಬ್ಯಾರಿಸ್ಟರಾಗಲೀ ಬಗೆದಿರಲಿಲ್ಲ. ವಾತಾವರಣ ಬಿಗಡಾಯಿಸಿತು. ಕುತೂಹಲದಿಂದ ಎಲ್ಲರ ಕಣ್ಣುಗಳೂ ಅರಳಿದುವು. ನ್ಯಾಯಾಧೀಶರೂ ತಲೆದೂಗಿದರು. ಆದರೂ ಬ್ಯಾರಿಸ್ಟರೂ ತಮ್ಮ ಸೋಲನ್ನು ಅಷ್ಟು ಸುಲಭವಾಗಿ ಒಪ್ಪಿಕೊಳ್ಳಲು ತಯಾರಿರಲಿಲ್ಲ. ಸುಸಮಯಕ್ಕಾಗಿ ಕಾದಿದ್ದರು. ವಿರಾಜ್ ದಂಪತಿಗಳಲ್ಲಿ ಸಾಮರಸ್ಯ ವಿರಲಿಲ್ಲವೆಂದೂ ಈ ಒಂದು ಕಾರಣವನ್ನು ಮುಂದಿಟ್ಟುಕೊಂಡು ಅವನನ್ನು ತೊಲಗಿಸುವ ಉದ್ದಿಶ್ಯದಿಂದ ಪತಿಗೆ ವಿರುದ್ಧವಾಗಿ ಸಾಕ್ಷಿ ಹೇಳಿದ್ದಾಳೆಂದೂ ಸಾಧಿಸಲು ಯತ್ನಿಸಿದರು.

ಹಿಂದಿನ ದಿನ ದೈನ್ಯವೇ ಮೂರ್ತಿವೆತ್ತು ಬಂದಂತೆ ಸಾಕ್ಷಿ ಹೇಳಿದ್ದ ವಿನುಮಯಿಯ ಶಕ್ತಿ ಇಂದು ಗರಿಗೂಡಿಕೊಂಡಿತ್ತು. ಕಟಕಟೆಯ ಮಧ್ಯೆ ತಲೆ ಬಾಗಿ ನಿಂತು ತನ್ನ ಸಾಕ್ಷ್ಯವನ್ನು ಮುಂದುವರಿಸಿದಳು.

"ವಿರಾಜ್‌ರನ್ನು ಸಮಾಧಾನಗೊಳಿಸಬೇಕೆಂದು ನಾನು ಬಹಳ ಪ್ರಯತ್ನ ಪಟ್ಟೆ. ವಿನಾಸಾ ಎಷ್ಟೆಂದರೂ ಚಿಕ್ಕವಳು. ಅವಳು ಕೈಮಾಡಿದ ಳೆಂದು ನೀವೂ ಮಾಡಬಾರದು ಎಂದು ಕೇಳಿಕೊಂಡರೂ ಬಿಡದೆ ಅವಳ ಕೆನ್ನೆಯ ಮೇಲೆ ಬಿಗಿದು ನಿರ್ದಯದಿಂದ ಕೆಳಕ್ಕೆ ತಳ್ಳಿದ ವಿರಾಜ್ ನನ್ನ ಬಳಿಗೆ ಧಾವಿಸಿ 'ಆಕಸ್ಮಿಕವಾಗಿ ಬಿದ್ದಳೆಂದು ಹೇಳಿಬಿಡು. ಯಾರಿಗೂ ತಿಳಿಯದಿರಲಿ' ಎಂದರು. ಆದರೆ ನಾನು ಯಾರ ಮಾತನ್ನೂ ಕೇಳುವ ಸ್ಥಿತಿ ಯಲ್ಲಿರಲಿಲ್ಲ. ನನ್ನ ಸ್ಥಿತಿಯನ್ನು ನೋಡಿ ನಾನೂ ಬಿದ್ದು ಅನಾಹುತ ಮಾಡಿಕೊಳ್ಳಬಹುದೆಂದು ವಿರಾಜ್ ಬಗೆದರೋ ಏನೋ ನನ್ನನ್ನು ಅಡಿಗೆಯ ಮನೆಗೆ ದಬ್ಬಿ ಕದ ಮುಚ್ಚಿ ಕೀಲಿ ಹಾಕಿ ಮಹಡಿಯಿಂದ ದಡದಡನೆ ಇಳಿದು ಹೋದರು. ಬಹುಶಃ ಪೋಲೀಸ್ ಸ್ಟೇಷನ್ನಿಗೆ ಇರಬಹುದು"

ಬ್ಯಾರಿಸ್ಟರು ಮುಖದ ಮೇಲಿನ ಬೆವರಿನ ಕಣಗಳನ್ನು ಒರಸಿಕೊಂಡು ತಮ್ಮ ಚಾಕಚಕ್ಯತೆಯ ಬಾಣವನ್ನು ಬತ್ತಳಿಕೆಯಿಂದ ಹೊರತೆಗೆದರು.

"ನೀವೆಂದಾದರೂ ನಿಮ್ಮ ಪತಿಯೊಂದಿಗೆ ವಿರಸಭಾವ ಹೊಂದಿ ದ್ದುಂಟೇ ?"

"ಇಲ್ಲ."

"ಎಂದಾದರೂ ನೀವು ಜಗಳವಾಡಿದ್ದೀರಾ ?"

"ಅಂತಾದ್ದೇನಿಲ್ಲ."

"ನಿಮಗೆ ವಿರಾಜರಲ್ಲಿ ಗೌರವ ಭಾವನೆ ಇದೆಯೇ ?"

"ಇದೆ ಮಹಾಶಯ !"

ಬ್ಯಾರಿಸ್ಟರು ಬಹಳ ಉತ್ಸುಕತೆಯಿಂದ ಪ್ರಶ್ನೆ ಹಾಕಿದರು.

"ಹಾಗಿದ್ದರೆ ನೀವು ಪತಿಯ ವಿರುದ್ಧ ಸಾಕ್ಷಿ ಹೇಳಿದುದರ ಅರ್ಥವೇನು ಎಂಬುದನ್ನು ತಿಳಿಸಬಲ್ಲಿರಾ ?"

"ಧರ್ಮ......!"

ಬ್ಯಾರಿಸ್ಟರ ಮೈಯಲ್ಲಿ ಉತ್ಸಾಹದ ಹೊನಲು ಹರಿದಾಡಿತು. ಈ ಒಂದು ಕೊಕ್ಕೆಯಿಂದಲೇ ಅವಳನ್ನು ಎಳೆದು ಮುಗಿಸಿಬಿಡಬಹುದೆಂಬ ಭಾವನೆಯಿಂದ ಮುಖ ಅರಳಿ ಹೂವಾಯಿತು.

"ಪತಿಯೊಂದಿಗೆ ಸಾಮರಸ್ಯವುಳ್ಳ ನೀವು, ಗೌರವ ಭಾವನೆಯುಳ್ಳ ನೀವು ಆತನ ವಿರುದ್ಧ ಸಾಕ್ಷಿ ಹೇಳಿದುದು ಹೇಗೆ? ಆಪತ್ತಿನಲ್ಲಿ ಆಕಸ್ಮಿಕವಾಗಿ ಸಿಕ್ಕಿಕೊಂಡ ಪತಿಯನ್ನುಳಿಸಿಕೊಳ್ಳಬೇಕಾದುದು ಸತಿಯ ಧರ್ಮವಲ್ಲವೇ?"

"ನಿನಾನಾ ನನ್ನಂತೆಯೇ ಅಬಲೆ, ಯಾರೇ ಇರಲಿ. ಅಬಲೆಯರಿಗೆ ರಕ್ಷಣೆ ನೀಡಬೇಕಾದುದು ಧರ್ಮ. ಅಷ್ಟಲ್ಲದೇ ನನ್ನ ಕಣ್ಣೆದುರು ಮಾನ ಹರಣ ಪ್ರಾಣ ಹರಣಗೈದುದನ್ನು ಹೇಗೆ ಮುಚ್ಚಿಡಲಿ? ಇದನ್ನು ಸುಳ್ಳು ಮಾಡುವುದೆಂದರೆ ಹೇಗೆ? ಜಗತ್ತಿನಲ್ಲಿ ಮಾನಕ್ಕಿಂತ ಮಿಗಿಲಾದ ವಸ್ತುವಿಲ್ಲ. ಸತ್ಯ ಧರ್ಮಗಳಿಗಿಂತ ಹಿರಿದಾದ ಧರ್ಮವಿಲ್ಲ. ಅಂದಮೇಲೆ ಸತ್ಯ ಧರ್ಮಗಳ ನಂತರ ಸತಿ....ಪತಿ."

ಬ್ಯಾರಿಸ್ಟರ ಮುಖದ ಮೇಲೆ ಬೆವರಿನ ಹನಿಗಳು ತುಂತುರು ತುಂತುರಾಗಿ ಮೂಡಿದುವು. ಇಷ್ಟಕ್ಕೂ ಅವರು ಸೋಲೊಪ್ಪಿಕೊಳ್ಳಲು ತಯಾರಿರಲಿಲ್ಲವೇನೋ. ತಮ್ಮ ಕೊನೆಯ ಸವಾಲು ಹಾಕಿದರು. ಕೆನ್ನೆ ಕಿವಿ ಕಣ್ಣುಗಳಲ್ಲಿ ರಂಗು ಮೂಡಿತ್ತು. ತನು ಮನಗಳು ಗಂಭೀರವಾದುವು.

"ಸತ್ಯ ಧರ್ಮಗಳಿಗೆ ಅಗ್ರಸ್ಥಾನ ನೀಡಿದ ನೀವು ಸತೀಧರ್ಮದ ವಿರುದ್ಧವಾಗಿ ಸಾಕ್ಷ್ಯ ಹೇಳಿ ಧರ್ಮದ ಕತ್ತನ್ನು ಹಿಸುಕಿದಿರೇಕೆ?" ಕಣ್ಣುಗಳಲ್ಲಿ ಮಿಂಚು ಮಿಂಚಿತು. ಅಕ್ಷರ ಅಕ್ಷರವೂ ಸವಾಲಿನಂತೆ ಹೊರಬಿತ್ತು.

"ಧರ್ಮಾಧರ್ಮಗಳ ಪರಿಚಯ ನನಗೆ ಸಾಕಷ್ಟಿದೆ. ಅನ್ಯಥಾ ನಿಮ್ಮ ವಕೀಲಿ ಬುದ್ಧಿಯನ್ನಷ್ಟು ಖರ್ಚು ಮಾಡಬೇಡಿರಿ."

"ಬ್ಯಾರಿಸ್ಟರ್ ಮಹಾಶಯರೇ, ನಿಮ್ಮ ವ್ಯರ್ಥ ಸಾಹಸವನ್ನು ಇನ್ನಾದರೂ ಕೊನೆಗಾಣಿಸಿರಿ." ನ್ಯಾಯಾಧೀಶರು ನಕ್ಕು ನುಡಿದರು.

ಸುತ್ತಮುತ್ತಲೂ ಎಳೆ ನಗುವಿನ ತಿಳಿ ಸದ್ದು ಮರ್ಮರಿಸಿತು.

ಈಗ ವಿನುವುಯಿಯ ಕಣ್ಣುಗಳಲ್ಲಿ ಕಿಚ್ಚಿರದಿದ್ದರೂ ಮೈಯಲ್ಲಿ ಕಂಪನವಿತ್ತು. ನರನಾಡಿಗಳಲ್ಲಿ ಸಂತಾಪದ ಝರಿ ಹರಿದಾಡಿತು. ಹೃದಯ ವ್ಯಾಪ್ತಿಗೆ ಮೀರಿ ಮಿಡಿದು ದೈಹಿಕ ಶಕ್ತಿಯನ್ನು ಹಿಂಡಿ ಹೀರ ತೊಡಗಿತು. ತಲೆಯ ಮೇಲಿನ ಸೆರಗನ್ನು ಜಾರದಂತೆ ಹಿಡಿದುಕೊಂಡು ನುಡಿದಳು. ಅವಳು "ಭಗವಂತನಾಣೆ ಇಟ್ಟು ಸತ್ಯವನ್ನು ನುಡಿದಿದ್ದೇನೆ. ಇದರ ಪರಿಣಾಮ ಏನೇ ಇರಲಿ, ಅದನ್ನೂ ಭಗವಂತನ ಪದತಲದಲ್ಲಿ ಅರ್ಪಿಸಿಬಿಡುವೆ."

ಬ್ಯಾರಿಸ್ಟರು ಕುರ್ಚಿಯ ಮೇಲೆ ಕುಸಿದು ಕುಳಿತರು. ಮುಖದ ಮೇಲಿನ ತುಂತುರುಗಳನ್ನು ಕರವಸ್ತ್ರದಿಂದ ತೀಡಿಕೊಂಡರು. ಮಾತು ಹೊರಡಲಿಲ್ಲ. ಬಳಿಯಲ್ಲಿನ ತರುಣ ವಕೀಲರ ಗುಂಪಾಗಲೀ ಹಿರಿಯ ವಕೀಲರ ಗುಂಪಾಗಲೀ ಯಾವ ಪ್ರತಿಕ್ರಿಯೆಯನ್ನೂ ವ್ಯಕ್ತಪಡಿಸಲಿಲ್ಲ. ಕೆಲವರು ಪರಸ್ಪರ ಮುಖ ನೋಡಿಕೊಂಡರು. ಭಾವೋದ್ವೇಗದಿಂದ ಯಾರ ತುಟಿಯೂ ಬಿರಿಯಲಿಲ್ಲ. ಬ್ಯಾರಿಸ್ಟರು ಸೋಲನ್ನೊಪ್ಪಿಕೊಂಡರೂ ಮುಖದ ಮೇಲೆ ಅಪೂರ್ವ ಪ್ರತಿಭೆ ತಾಂಡವವಾಡಿತು.

ನ್ಯಾಯಾಧೀಶರ ಪ್ರಶ್ನೆ ನೀರವವನ್ನು ಭೇದಿಸಿಕೊಂಡು ಹೊರಬಿತ್ತು.

"ಸರಕಾರಿ ವಕೀಲರೇ, ನೀವೇನಾದರೂ ಕೇಳುವುದಿದೆಯೆ ?"

"ಇಲ್ಲ, ಮಹಾ ಸ್ವಾಮಿ !"

ನ್ಯಾಯಾಧೀಶರ ದನಿ ಪುನಃ ಮೊಳಗಿತು.

ಬ್ಯಾರಿಸ್ಟರೇ, ನೀವೇನಾದರೂ ಕೇಳುವುದಿದೆಯೇ ?

"ಇಲ್ಲ, ಮಹಾಸ್ವಾಮಿ !"

ನುಡಿಯಲಾರದೆ ನುಡಿಯಿತು ನಾಲಿಗೆ.

ರಾಜಾಭಾಯಿ ಟವರ್ ಗಡಿಯಾರ ಗಂಟೆ ಭಾರಿಸಿತು. ಢನ್. ಢನ್. ಢನ್. ಢನ್. ಢನ್. !

ನ್ಯಾಯಾಧೀಶರು ಸಭೆಯನ್ನು ಬರಖಾಸ್ತು ಮಾಡಿದರು.

# ತಾರಾ ಭಗವತಿ

ವೈಶಾಖ ಶುದ್ಧ ಪೂರ್ಣಿಮಾ.

ತಣ್ಣನೆಯ ಹಿಮಗಾಳಿ ಜೋರಾಗಿ ನುಗ್ಗುತ್ತಲೂ ಹೊದ್ದ ಕಂಬಳಿಯನ್ನು ಇನ್ನಷ್ಟು ಮೇಲೆಳೆದುಕೊಂಡಳು ತಾರಾಭಗವತಿ.

ಹೊತ್ತು ಬಲಿಯಿತು. ಬಾಲರವಿ ಕಾವೇರತೊಡಗಿದ. ಇನ್ನೂ ಮಲಗಿರುವುದೇನು ಚೆನ್ನ? ಆದರೆ ಎದ್ದು ಮಾಡುವುದೇನು? ಯಾರಿಗಾಗಿ ಮಾಡಲಿ? ಎನಿಸಿದರೂ ಮಲಗಿ ಮಲಗಿ ಮಗ್ಗುಲು ನೋಯ ಹತ್ತಿತು. ಏಳಲಾರದೆ ಎದ್ದು ಹಾಸಿಗೆಯನ್ನು ಸುತ್ತಿಟ್ಟು ಮುಖ ಮಜ್ಜನ ಮಾಡಿ ಯಾಂತ್ರಿಕವಾಗಿ ನಿತ್ಯಕರ್ಮಗಳನ್ನು ಮಾಡಲು ಉದ್ಯುಕ್ತಳಾದಳು. ನಲವತ್ತರ ಹರಯದಲ್ಲೂ ಮೈ ಚಟುವಟಿಕೆಯ ಬೀಡಾಗಿತ್ತು. ಏಕಾಕಿ ಜೀವನ ಮನಸ್ಸಿಗೆ ಕಿನಿಸಿಗೆ ಊಡಿಸಿದ್ದರೂ ನಿತ್ಯ ಕರ್ಮಗಳನ್ನು ಬಿಡಲು ಮನಸ್ಸಾಗಲಿಲ್ಲ. ಕಸಬರಿಗೆಗೆ ಕೈ ಹಚ್ಚಿದಳು—ತಾರಾಭಗವತಿ.

ನಾಡು ಹೆಂಚಿನ ಮಾಡು ಬಣ ಬಣ ಎನ್ನುವಷ್ಟು ನಿಶ್ಯಬ್ದ.

ಹಳೆಯದಾದರೂ ಶುದ್ಧವಾದ ಕುಟೀರ.

ಒಳಗಡೆ ಕಸ ಉಡುಗಿದ ಮೇಲೆ ಅಂಗಳಕ್ಕಿಳಿದಳು. ಅಂಗಳದಂಚಿನಲ್ಲಿ ಪರೇಶ ಕಕ್ಕ ಗೋಧಿಯ ಹೊಲದಕಡೆ ಹಾದು ಹೋಗುತ್ತ ಅಂದ "ಭಗವತೀ ಮಾಯಿ! ಇಂದೇನು? ಇಷ್ಟೊತ್ತಿನ ತನಕ ಮಲಗಿದ್ದು? ಮೈಗೆ ಸ್ವಸ್ಥವಿಲ್ಲವೇ ಹೇಗೆ?"

"ಮೈಗೆ ಸ್ವಸ್ಥವಿಲ್ಲದೇ ಏನು? ಮನಸ್ಸಿಗೆ ಸ್ವಸ್ಥವಿಲ್ಲ"

"ಮನಸ್ಸಿಗೆ ಹಚ್ಚಿಕೊಂಡರೇನು ಫಲ ಮಾಯಿ? ಈ ಸಲ ನಾಗು ಮನೆಗೆ ಮರಳಿದರೆ ಫೂಲ್‌ಪುರಕ್ಕೆ ಕಳುಹಿಸಿ ಗುರುಕುಲಕ್ಕೆ ಸೇರಿಸಿಬಿಡೋಣ. ರಾಕು ಅವನನ್ನು ಅಲ್ಲೇ ಸರಿಮಾಡಿ ಬಿಡುತ್ತಾನೆ. ಆಮೇಲಾದರೂ ಹುಡುಗ ಹಾದಿಗೆ ಬಂದಾನು."

"ಅಷ್ಟಾದರೆ ಸಾಕಲ್ಲ." ಉಗುಳು ನುಂಗಿ ಒಣಗಿದ ತುಟಿಯನ್ನು ನಾಲಿಗೆಯಿಂದ ಸವರಿಕೊಂಡು–"ಜಗ್ಗೂ ತಾಯಿ ಮನೆಯಲ್ಲಿದ್ದಾಳೆಯೆ ಪರೇಶ ಕಕ್ಕ ?"

"ಹ್ಞಾ... ಜಳಕಕ್ಕೆ ನೀರು ಕಾಯಿಸುತಿದ್ದಾಳೆ."

"ಸರಿ, ಬಿಡಿ"

"ಇಂದು ವ್ಯಾಸ ಪೂರ್ಣಿಮಾ ಹಾಗೂ ಬುದ್ಧ ಪೂರ್ಣಿಮಾ ; ನಿನಗೆ ಜ್ಞಾಪಕ ಇದೆಯೋ ಇಲ್ಲವೋ ಮಾಯಿ ?"

"ಓ... ಮರತೇ ಹೋಗಿತ್ತು ಕಕ್ಕ."

ಪರೇಶ ಕಕ್ಕ ಕಿರಿ ಸೀಕಲಾದ ಮುಖದಮೇಲೆ ಎಳೆನಗುವನ್ನು ತೇಲಿಸುತ್ತಾ ಹೊರಟ. ದುಃಖ ದುಗುಡಗಳಿಂದ ಜಡವಾಗಿದ್ದ ತಾರಾ ಭಗವತಿಯ ಮೈ ಪುಳಕಿತವಾಯಿತು. ಮನೆಯಂಗಳವನ್ನು ಚೊಕ್ಕ ವಾಗಿ ಗುಡಿಸಿ ತಣ್ಣೀರು ತಳೆದು ಸಾಲು ರಂಗೋಲಿಯನ್ನು ಬಿಟ್ಟು ಒಳ ಬಂದಳು. ಬಿಸಿಲಟ್ಟಿದ ಕಣ್ಣುಗಳಿಗೆ ಒಳಗಡೆ ಮಂಜು ಕವಿಯಿತು. ಒಂದು ಗಳಿಗೆ ನಿಂತು ಮಂಜು ಹರಿದ ನಂತರ ತೊಟ್ಟಿಯ ಸುತ್ತಮುತ್ತ ರಂಗೋಲಿಯ ಅಲಂಕಾರ ಮಾಡತೊಡಗಿದಳು. ಮನಸ್ಸೆಲ್ಲವೂ ಮಗನ ಮೇಲಿತ್ತು. ನಾಗಚಂದ್ರ ಆಗಲೇ ಮನೆಬಿಟ್ಟು ಹೋಗಿ ತಿಂಗಳಾಗಿತ್ತು. ಅದಕ್ಕೂ ಮೊದಲು ಅವನು ಒಮ್ಮೊಮ್ಮೆ ಒಂದೆರಡು ದಿನಗಳು ಹೋಗಿ ಬರುತ್ತಿದ್ದ. ಅನಂತರ ನಾಲ್ಕಾರು ದಿನಗಳಿಗೇರಿತು. ತದನಂತರ ವಾರ ಗಳ ಮಟ್ಟವನ್ನೂ ದಾಟಿತು. ಈ ಸಲ ತಿಂಗಳಾಗಿದೆ. ಮುಂದೇನು ಗತಿಯೋ. ಹೊರಗಡೆ ಉಳಿದಾಗ ಮನೆ–ಮಠಗಳನ್ನು ಮರೆತರೂ ಮನೆಗೆ ಮರಳಿದ ನಂತರ ಭೂಮಿ ಕಾಣಿಗಳ ಕಾರ್ಯ-ಕಲಾಪಗಳೆಲ್ಲಾ ಅವನವೇ. ಅಚ್ಚುಕಟ್ಟಾಗಿ ಕೆಲಸ ಮುಗಿಸಿ ಸಂಜೆಯ ಸುಮಾರಿಗೆ ಸಾನು ಪ್ರದೇಶಗಳಲ್ಲಿ ಕಳೆದು ಬೈಗುಗಪ್ಪು ಹರಡಿದ ಮೇಲೆ ಮನೆಗೆ ಮರಳುತ್ತಿದ್ದ. 'ಅಮ್ಮಾ' ಎಂದು ಬಾಯಿ ತುಂಬ ಕರೆದು ಒಂದೆರಡು ಮಾತುಗಳನ್ನು ಹಿತಮಿತವಾಗಿ ಆಡಿ ಗ್ರಂಥ ಪಠಣ ಕೈಕೊಳ್ಳುತಿದ್ದ. ಅವನಿಗೆ ಯಾವ ಕೆಟ್ಟ ಹವ್ಯಾಸವೂ ಇರಲಿಲ್ಲ. ಅಂದಮೇಲೆ ಯಾವ ಕಾರಣದಿಂದ ಮನೆ ಬಿಟ್ಟು ಹೋಗುತ್ತಾನೆಂಬುದು ತಿಳಿಯದೆ ತಾರಾಭಗವತಿಗೆ ಚಿಂತೆ

ಮೂಡಿತ್ತು. ಕೇಳಿದರೂ ಕಾಡಿದರೂ ನಾಗಚಂದ್ರ 'ಕೆಲಸವಿತ್ತು' ಎಂಬುದಾಗಿ ಮೊಟಕು ಉತ್ತರ ನೀಡುತ್ತಿದ್ದ. ಅಂದಿಗೂ ಇಂದಿಗೂ ಅವನಿಂದ ಬರುವಂತಹುದ್ದು ಅದೇ ಉತ್ತರ.

ತಾರಾಭಗವತಿಯ ಸೋದರಳಿಯ ರಾಕಾಚಂದ್ರ ಒಮ್ಮೆ ಹೇಳಿದ್ದ "ಭಗವತೀ ಮಾಯಿ ! ನಾಗಚಂದ್ರ ಕಾಡು ಮೇಡು ಬೆಟ್ಟಗುಡ್ಡಗಳಲ್ಲಿ ಅಲೆಯುತ್ತಿರುತ್ತಾನೆ. ಅವನಿಗೆ ಯಾವುದಾದರೂ ಯಕ್ಷ ಕಿನ್ನರರ ಗಾಳಿ ಸೋಂಕಿದೆಯೋ ಏನೋ. ನಿಮ್ಮಿಂದ ಸಾಧ್ಯವಾದಷ್ಟು ಅವನನ್ನು ಮನೆಯಲ್ಲೇ ಉಳಿಸಿಕೊಳ್ಳಿ. ಈ ಭೂತ ಪಿಶಾಚಿಗಳ ವ್ಯಾಪಾರ ಹೀಗೆ ಅಂತ ಹೇಳುವಂತಿಲ್ಲ. ಅಲ್ಲೇ ಕತ್ತು ಹಿಸುಕಿಬಿಟ್ಟರೆ ಮುಗಿಯಿತು."

ಒಮ್ಮೆಲೇ ಮೈಗೆ ಬಿಸಿ ನೀರು ಚೆಲ್ಲಿದಂತಾಯಿತು–ತಾಯಿಗೆ.

"ಅಂದಿನಿಂದ ಅವನಿಗೆ ಹೇಳಿ ಹೇಳಿ ಸಾಕಾಗಿದೆ. ಎಷ್ಟು ಹೇಳಿದರೂ ನಿಧಾನವಾಗಿ 'ಅಂಥಾದ್ದೇನಿಲ್ಲ ಮಾಯಿ !' ಎಂದು ಬಿಟ್ಟರೆ ಮುಗಿಯಿತು. ನನಗಂತೂ ವ್ಯಥೆ ಹಿಡಿದಿದೆ."

"ಈ ಸಲ ಹಿಂತಿರುಗಿ ಬಂದ ನಂತರ ಹೇಳಿ ನೋಡೋಣ."

"ನಾನು ಇದುವರೆವಿಗೆ ಎಷ್ಟು ಬಾರಿ ಹೇಳಲಿಲ್ಲ ? ಹೇಳಿದ್ದಕ್ಕೆಲ್ಲಾ 'ಹೂ' ಎನ್ನುವ. ಅನಂತರ ಅವನ ಗಮನ ಇನ್ನೆಲ್ಲೋ. ಇಷ್ಟು ದಿನ ಮಕ್ಕಳನ್ನು ಬೆಳೆಸುವ ಗೋಳು....ಇನ್ನು ಈ ಚಿಂತೆ. ದೇವರೇ ಗತಿ !"

"ಭಗವತಿ ಮಾಯಿ ! ಎಂದೂ ಸೋಲಬಾರದು. ನಿಮ್ಮ ಪ್ರಯತ್ನ ನೀವು ಮಾಡಿರಿ."

"ಈಗೀಗ ಏನು ಹೇಳಲಿಕ್ಕೂ ತೋಚುವುದಿಲ್ಲ. ಮಾತಿಗೆ ಮೊದಲೇ ದುಃಖ ಮೂಡುತ್ತದೆ."

"ಕೈಯಲ್ಲೊಂದು ತಾಳೆಗರಿ ಇದ್ದರೆ ಒಂದು ರೀತಿ. ಏನೋ ಒಂದು ಬಗೆಯಲ್ಲಿ ಮಂಕು ಹಿಡಿದವರಂತೆ ಮರದಡಿಯಲ್ಲಿ ಕೂತಿರುತ್ತಾನೆ. ಯಾವುದಾದರೂ ಮೋಹಿನಿ ಹಿಡಿದಿದೆಯೋ ಏನೋ. ಬೆಳೆದ ಹುಡುಗ ಮದುವೆ ಮಾಡುವುದೊಳ್ಳೆಯದು."

"ನೀನು ಹಾಗೆಂದರೆ ಸಾಲದು ರಾಕೂ. ಅವನನ್ನೊಪ್ಪಿಸಿ ಮದುವೆ ಮಾಡುವ ಭಾರವೂ ನಿನ್ನದೆ."

"ಇರಲಿ. ಮಾಯಿ." ಮುಗುಳುನಕ್ಕ ರಾಕಾಚಂದ್ರ.

"ಎಲ್ಲಾ ನಿನ್ನ ಮೇಲೆ ಬಿಟ್ಟುಬಿಡುವೆ. ಏನಾದರೂ ಮಾಡು ರಾಕು."

"ಇವನೊಪ್ಪಿದರೆ ಈಗ ಮಾಡಬಹುದು. ಇಲ್ಲದಿದ್ದಲ್ಲಿ ಮುಂದಿನ ಸಾಲಿಗೆ ವಿಪುಲ ಹಿಂದಿರುಗುತ್ತಾನೆ. ಆಗ ಇಬ್ಬರಿಗೂ ಮಾಡೋಣ ಮಾಯಿ."

ಅವನು ಹಾಗೆಂದರೂ ಇವನು ಮನೆಗೆ ಮರಳಬೇಕಲ್ಲ? ಅವನ ಮಾತಿಗೆ ಬೆಲೆ ಕೊಡಬೇಕಲ್ಲ? ಚಿಕ್ಕವನಾಗಿದ್ದರೆ ಗದರಿಸಿ ಹೇಳಬಹುದಾಗಿತ್ತು. ಆದರೆ ಆಳೆತ್ತರಕ್ಕೆ ಬೆಳೆದ ಮಗ. ವಿದ್ಯೆ ಬುದ್ಧಿ ಕಲಿತು ಸಭ್ಯನೆನಿಸಿದ ಮಗ. ನಾಲ್ಕಾರು ಮಂದಿಯಲ್ಲಿ ಗಣ್ಯನೆನಿಸಿದ ಮಗ. ಇನ್ನೇನು ಹೇಳುವುದು? ನನಗೆ ಇವನ ರೀತಿಯೇ ಅರ್ಥವಾಗದಲ್ಲ? ದೇವರು ಒಳ್ಳೆಯ ಮಕ್ಕಳನ್ನೂ ಕೊಟ್ಟ. ಅಷ್ಟೇ ಗೋಳನ್ನೂ ಕೊಟ್ಟ. ಬೆಳೆದ ಮಕ್ಕಳಿಗೆ ತಾಯಿಯ ಯೋಚನೆ ಸ್ವಲ್ಪವಾದರೂ ಬೇಡವೇ?....ಒಡನೆ ಕಂಬನಿಗಳು ಧಾರಾಕಾರವಾಗಿ ಹರಿದುವು.

ಮನೆಯನ್ನು ಬಳಿದು ಮಿಂದು ಮಡಿಯುಟ್ಟು ಕಾಲಿಮಾ ಪೀಠದ ಮುಂದೆ ದೀಪ ಹಚ್ಚುವಷ್ಟರಲ್ಲಿ ಹೊತ್ತು ನೆತ್ತಿಗೆ ಏರಿಯಾಗಿತ್ತು. ಇನ್ನು ಅಡಿಗೆ ಮಾಡುವುದೆಷ್ಟೊತ್ತಿಗೆ? ಯಾರಿಗಾಗಿ ಮಾಡಲಿ? ಹೊಟ್ಟೆಯ ತುಂಬ ಸಂಕಟ ತುಂಬಿರುವಾಗ ಹಸಿವಾಗುವುದುಂಟೇ? ನಾಗಚಂದ್ರನೂ ಬರಲಿಲ್ಲ. ವಿಪುಲಚಂದ್ರನೂ ಬರಲಿಲ್ಲ. ಯಾರಾದರೂ ಬಂದಿದ್ದರೆ...!

ಕಾಲಿಮಾ ನೈವೇದ್ಯಕ್ಕೆ ಹೆಸರು ಪಾಯಸ ಮಾಡುವುದಿದೆ. ಈಗ ಅದೇ ಸಾಕು. ಒಲೆಯನ್ನು ಹಚ್ಚಿ ಹೆಸರುಬೇಳೆಯನ್ನಿಟ್ಟು ಪುನಃ ಪೂಜೆಗೆ ಕುಳಿತಳು. ಪೀಠದ ಮೇಲೆ ಕಗ್ಗಲ್ಲಿನ ಕಾಲಿಮಾ ವಿಗ್ರಹ ಪ್ರತಿಷ್ಠಾಪನೆಗೊಂಡಿತ್ತು. ವಂಶಪಾರಂಪರ್ಯವಾಗಿ ಬಂದ ಕಾಲಿಮಾ ಮನೆತನದ ಆದ್ಯ ದೇವತೆ. ದಿವಂಗತ ಹೇಮಚಂದ್ರ ಕಾಳಿಯ ಪರಮ ಭಕ್ತ. ಅವನ ಮರಣಾನಂತರವೂ ಹಿಂದಿನಂತೆಯೇ ಪೂಜೆ ಪುನಸ್ಕಾರಗಳನ್ನು ನಡೆಸಿಕೊಂಡು ಬಂದಿದ್ದಳು ತಾರಾಭಗವತಿ. ಪಲ್ಲವಿತ ಸುಮ ಸಮುಚ್ಚಯದಲ್ಲಿ ಕಗ್ಗಲ್ಲಿನ ಕಾಲಿಮಾ ಸೆರೆಯಾದಳು.

ಮನಸ್ಸು ಕದಡಿ ಬಗ್ಗಡವಾಗಿದ್ದರೂ ಪೂಜೆ, ಅರ್ಚನೆ, ಧ್ಯಾನ ಯಥಾ ರೀತಿ ನಡೆಯಿತು. ಮಧ್ಯೆಮಧ್ಯೆ ಕಂಬನಿಯ ಸೇಚನೆಯೂ ನಡೆಯುತಿತ್ತು. ತನಗರಿಯದಂತೆಯೇ ಬಿಸುಸುಯ್ಲು ಹೊರಹೊಮ್ಮಿ ಎದೆಯ ಹಂಬಲವನ್ನು ನಿವೇದಿಸಿಕೊಳ್ಳುತಿತ್ತು. ಪ್ರಾರ್ಥನೆಯಲ್ಲಿ ಹೊತ್ತು ಮೆಲ್ಲನೆ ಉರುಳಿತು. ಹೆಸರುಬೇಳೆಗೆ ಬೆಲ್ಲ ಸೇರಿಸಿ ಏಲಕ್ಕಿಯ ಕಂಪನ್ನು ಕೊಟ್ಟು ನೈವೇದ್ಯಕ್ಕಿಟ್ಟು ಪೂಜೆ ಮುಗಿಸಿ ಹೊರ ಬಂದಳು. ಎದೆಯ ಸಂಕಟವೆಲ್ಲ ಮುಖಮುದ್ರೆಯಲ್ಲಿ ಅಚ್ಚೊತ್ತಿತ್ತು. ಕಣ್ಣುಗಳಂಚಿನಲ್ಲಿ ಬೆಳ್ಳಿಯ ಗೆರೆಯಂತೆ ಸಣ್ಣಗೆ ನೀರಾಡಿತು.

ಬಿಸಿಲ ಝಳ ಮೈಗೆ ಕಿಚ್ಚನ್ನೂಡಿಸುವಂತೆ ದಣದಣ ಉರಿಯುತಿತ್ತು.

ಇಂದಾದರೂ ನಾಗಚಂದ್ರ ಬಂದಾನೇ?

ಅವನು ಏಕೆ ಹೀಗೆ ಮಾಡುವ? ಅವನಿಗೆ ಏನಾಗಿದೆ? ಬುದ್ಧಿ ಇಲ್ಲವೆ? ಬೆಳೆದ ಮಗನಿಗೆ ಇದೆಲ್ಲಾ ಅರ್ಥವಾಗದೆ? ತಬ್ಬಲಿ ಮಕ್ಕಳನ್ನು ಆಳೆತ್ತರಕ್ಕೆ ಬೆಳೆಸಲು ಈ ಮಾಯಿ ಎಷ್ಟು ನೋವುಂಡಿದ್ದಾಳೆ! ಅವನ ತಂದೆ ಬದುಕಿದ್ದು ಮಗನಿಗೆ ತಿಳಿವಳಿಕೆ ಕೊಡುವಂತಿದ್ದರೆ ಅವನು ನೆಟ್ಟಗಿರುತಿದ್ದನೇನೋ. ಬುದ್ಧಿ ಕಲಿಯುತ್ತಿದನೇನೋ. ದುರಾದೃಷ್ಟಕ್ಕೆ ತಬ್ಬಲಿಯಾಗಿ ಬೆಳೆಯಿತು ಮಗು. ಎಷ್ಟು ಹೇಳಿದರೂ ತಾಯಿ ಮಾತಿಗೆ ಗಂಡು ಮಕ್ಕಳು ಬೆಲೆ ಕೊಟ್ಟಾರೆ?........ಹೃದಯ ಬನದ ಕೋಗಿಲೆ ಹಂಬಲಿಸುತಿತ್ತು! ಚಿಂತಾನದಿಯುಕ್ಕುತಿತ್ತು.

ತಾರಾಭಗವತಿ ನಾಗಚಂದ್ರನ ಕೊಠಡಿಗೆ ಹೋದಳು. ಕಿಟಕಿಯ ಸಣ್ಣ ಕಿಂಡಿಯಿಂದ ಬೆಳಕು ಒಳಗೆ ಚಿಮ್ಮಿದೆ. ಸುತ್ತಿಟ್ಟ ಹಾಸಿ ಹಾಗೇ ಇದೆ. ಒಗೆದಿಟ್ಟ ಮಡಿ ಬಟ್ಟೆಗಳೂ ಅಲ್ಲೇ ಇವೆ. ಮಣೆಯ ಮೇಲೆ ಓಲೆಗರಿಯ ಕಟ್ಟುಗಳು ಹೇಗಿದ್ದುವೋ ಹಾಗೆಯೇ ಇವೆ. ಎಲ್ಲವನ್ನೂ ನೋಡುನೋಡುತಿದ್ದಂತೆ ಎದೆಯಾಳದಿಂದ ನಿಟ್ಟುಸಿರೊಂದು ಮೆಲ್ಲನೆ ತಪ್ಪಿಸಿಕೊಂಡಿತು.

ವಿಪುಲ ಚಂದ್ರನಾದರೂ ಬಂದಿದ್ದರೆ....?

ನಾಗಚಂದ್ರನನ್ನು ನಂಬಿ ವಿಪುಲಚಂದ್ರನಿಗೆ ಅಪ್ಪಣೆಕೊಟ್ಟು ಕೆಟ್ಟೆ. ವಿಪುಲ ಇವನಂತಲ್ಲ. ಬಾಯಿ ತುಂಬ ಬಳಬಳ ಮಾತಾಡುವವ. ಮನೆ ತುಂಬ ಓಡಾಡಿ ಗದ್ದಲವೂಡಿ ಹಿತಮಿತವಾಗಿ ಬಾಳಬಲ್ಲವ.......

ಅವನಿಗೆ ಯುದ್ಧ ಭೂಮಿಯಿಂದ ಬಿಡುಗಡೆ ಯಾವಾಗಲೋ, ಎಷ್ಟು ಕಷ್ಟ ಪಟ್ಟಿದಾನೋ ಅಲ್ಲಿ. ಇನ್ನೆಷ್ಟು ಭಯ–ಭೀತಿಯೋ. ತೊಂದರೆಯೋ. ದೇವರೇ ಬಲ್ಲ. ಹೇಗಿದಾನೋ. ಪೆಟ್ಟು ಬಿದ್ದಾಗ ನೋವುಂಡಾಗ ಹುಡುಗ ಎಷ್ಟು 'ಅಮ್ಮಾ' ಎಂದಿರಲಿಕ್ಕಿಲ್ಲ ?

ಕಣ್ಣುಗಳಂಚಿನಲ್ಲಿ ತುಳುಕಾಡುತ್ತಿದ್ದ ಕಂಬನಿ ಧಾರಾಕಾರವಾಗಿ ಕೆನ್ನೆಯ ಮೇಲಿಳಿಯಿತು. ಕಂಬನಿಯನ್ನು ಒರೆಸಿಕೊಂಡು ವಿಪುಲಚಂದ್ರನ ಕೊಠಡಿಗೆ ಹೋದಳು ತಾರಾಭಗವತಿ. ನಾಗಚಂದ್ರನ ಕೊಠಡಿಯ ಪಕ್ಕದ ಕೊಠಡಿ ವಿಪುಲಚಂದ್ರನದು. ಪುರಾತನ ಸಂಸ್ಕೃತಿಯ ಬೀಡಾದ ಆ ಮನೆಯನ್ನು ಕಟ್ಟಿ ಎಷ್ಟು ಕಾಲವೋ ? ಬೆಳಕಿಗಾಗಿ ಒಂದು ಸಣ್ಣ ಕಿಂಡಿ. ಅಂದರಹಿತ ಗೋಡೆ. ಕುಳ್ಳು ಮಾಡು. ಗಿಡ್ಡ ಬಾಗಿಲು. ಬಡತನದ ಕೇಂದ್ರದಲ್ಲಿ ಗುಬ್ಬಿಗಳ ಸಾಮ್ರಾಜ್ಯವೂ ನಡೆದಿತ್ತು. ಸುತ್ತಿಟ್ಟ ಹಾಸಿಗೆ ಹಾಗೇ ಇದೆ. ಕೂರುವ ಮಣೆ ಸ್ವಚ್ಛವಾಗಿದೆ. ನೆಲ ಶುದ್ಧವಾಗಿದೆ. ಆದರೆ ವಿಪುಲನಿಲ್ಲ.

ಏನಿದ್ದರೇನು ? ಎಷ್ಟು ಮಾಡಿದರೇನು ? ಯಾರಿಗಾಗಿ ಈ ಬದುಕು ?

ವಿಪುಲಚಂದ್ರ ಯುದ್ಧಭೂಮಿಗೆ ಹೇಳಿ ಕೇಳಿ ಕಾಲಿಟ್ಟಿದ್ದ. ಇದ್ದ ಒಂದು ಬಿಗ ಜಮೀನಿನಲ್ಲಿ ಸಂಸಾರ ಸಾಗುವುದು ಕಷ್ಟವೆಂಬುದನ್ನರಿತಿದ್ದ ತಾರಾಭಗವತಿ ಒಪ್ಪಿಗೆ ಕೊಟ್ಟಿದ್ದಳು. ಆಗ ದೇಶದಲ್ಲಿ ಯುದ್ಧ ಭಯವೂ ಇರಲಿಲ್ಲ. ನಾಲ್ಕೈದು ವರ್ಷ ಕೆಲಸ ಮಾಡಿ ಸೈನ್ಯ ಜಮಾವಣೆ ಸಾಕಷ್ಟು ನಡೆದ ಮೇಲೆ ಹಿಂದಿರುಗುವುದಾಗಿ ಆಶ್ವಾಸನೆ ನೀಡಿದ್ದ. ಅವನು ಮಾತಿಗೆ ತಪ್ಪುವವನಲ್ಲ. ಆದರೂ ಅವನು ಸದ್ಯಕ್ಕಂತೂ ಗೃಹಸ್ಥ ನಾಗುವುದು ಸಾಧ್ಯವಿಲ್ಲವೆಂಬುದು ಒಡಲ ಸಂಕಟ. ಮನೆಯಲ್ಲಿ ಸದಾ ಒಬ್ಬಳೇ ಇರುವುದೆಂದರೆ ಹೇಗೆ ? ವಿಪುಲನನ್ನು ಕಾಯುವುದಕ್ಕಿಂತ ನಾಗ ಚಂದ್ರನಿಗೊಂದು ಹೆಣ್ಣು ತರುವುದು ಲೇಸಲ್ಲವೇ ? ನಾಗಚಂದ್ರನೂ ನೆಲಗಾಣದೆ ಹೋದರೆ ತನ್ನ ಶ್ರಮವೆಲ್ಲವೂ ನಿರರ್ಥಕ ಎಂಬುದು ಎದೆಯ ಹಂಬಲ. ಅದನ್ನೊಮ್ಮೆ ಅವನ ಮುಂದೆಯೇ ತೋಡಿಕೊಂಡಿದ್ದಳು ತಾರಾಭಗವತಿ.

"ನಾಗೂ, ನೀನು ಮದುವೆ ಮಾಡಿಕೊಂಡು ಸಂಸಾರ ಹೂಡಿದರೆ ನನ್ನ ಶ್ರಮವೆಲ್ಲ ಸಾರ್ಥಕ. ಅಷ್ಟಾದರೆ ನನಗೆ ಸಾವಿನಲ್ಲೂ ಸುಖವುಂಟು,"

ಅವನು ಅತ್ಯಂತ ನಿರಾಶಾದಾಯಕ ಉತ್ತರ ನೀಡಿದ್ದ, "ಕಾಲ ಈಗಲೇ ಮುಗಿಯುವುದಿಲ್ಲ ಮಾಯಿ."

ನಾಗಚಂದ್ರ ಏಕೆ ಹೀಗಾದ ?

ಚಿಕ್ಕಂದಿನಲ್ಲಿ ಅವನ ಚಟುವಟಿಕೆ ತುಂಟತನಗಳನ್ನು ತಡೆಯು ವಂತಿರಲಿಲ್ಲ. ಓಹ್ ! ಬೆಳೆದಂತೆಲ್ಲ ಸಪ್ಪೆಯಾದನಲ್ಲ ಅದೇಕೆ ? ಯಾವ ಕಾರಣದಿಂದ ಹೀಗಾದ ? ಅವನಿಗೆ ಬುದ್ಧಿ ಹೇಳಿ ಹಾದಿಗೆ ಹಚ್ಚುವಂತ ಮಹನೀಯರು ಯಾರಾದರೂ ಇದ್ದಾರೆಯೇ ? ಓ, ಅಂದೇ ರಾಕಾಚಂದ್ರ ಹೇಳಿದ್ದ. 'ಈ ಪ್ರಾಂತಕ್ಕೆ ಬುದ್ಧದೇವ ಬರಲಿದ್ದಾರೆ. ಅವರು ಊರೂರು ಸುತ್ತಿ ಮನೆ ಮನೆಗೂ ಭೇಟಿ ಈಯುವುದುಂಟು' ಅಂತ. ಹಾಗೊಂದು ವೇಳೆ ಅವರು ಬಂದರೆ ನಾಗಚಂದ್ರನಿಗೆ ಎರಡು ಮಾತು ಹೇಳಿ ಯಾರೇನೋ... ಮನದಲ್ಲಿ ಆಶಾಕಿರಣ ಮೂಡಿತು. ತಾರಾಭಗವತಿ ಕೊಠಡಿಯಿಂದ ಹೊರಬಂದು ತೊಟ್ಟಿಯಲ್ಲಿ ನಿಂತು ಸುತ್ತಲೂ ನೋಟ ವನ್ನು ಚೆಲ್ಲಿಕೊಟ್ಟಳು. ಆಗ ತಾನೇ ಬಿಟ್ಟ ರಂಗೋಲಿ. ಮನೆಯ ಬಣ ಬಣವನ್ನಿರಿಯುತ್ತಿದೆ. ಮಾಂದಳಿರ ತೋರಣ ನಳನಳಿಸುತ್ತಿದೆ, ಕಾಲಿಮಾ ಮುಡಿಯಲ್ಲಿ ಸುರ ಹೊನ್ನೆ ಹೂವು ಕಂಪನ್ನು ಬೀರುತ್ತಿದೆ, ಪರಮಾನ್ನದ ಸವಿ ಬಾಯಿಯಲ್ಲಿ ನೀರೂಡಿಸುತ್ತಿದೆ. ಆದರೇನು ? ನಾಗಚಂದ್ರನೂ ಇಲ್ಲ. ವಿಪುಲಚಂದ್ರನೂ ಇಲ್ಲ. ಯಾರಿಗಾಗಿ ಈ ಬದುಕು ? ನಗೆಮೊಗದ ಹೆಣ್ಣಿಲ್ಲ. ಜಿಣಿಜಿಣಿಗೆಜ್ಜೆಯ ಮಗುವಿಲ್ಲ. ವಂಶೋದ್ಧಾರಕ ಮಗನಿಲ್ಲ. ಭಾಗ್ಯವಂತ ನಾದ ಪತಿಯಿಲ್ಲ. ಮತ್ತೆ ಯಾರಿಗಾಗಿ ಈ ಬದುಕು ?

ಏನು ಮಾಡಲಿ ? ಹೇಗೆ ತಾಳಲಿ ?

ಬುದ್ಧದೇವ ಮನೆ ಮನೆಗೂ ಹೋಗಿ ಬುದ್ಧಿ ಹೇಳುತ್ತಾರಂತೆ. ಅಡ್ಡಹಾದಿ ಹಿಡಿದ ಮಂದಿಗೆ ಉಪದೇಶ ನೀಡುತ್ತಾರಂತೆ. ಅವರ ನೆಲೆ ಯಲ್ಲಿ ಅನಾಚಾರಗಳಿಗೆ ಎಡೆಯೇ ಇಲ್ಲವಂತೆ. ಅವರು ಒಂದು ವೇಳೆ ಈ ಪ್ರಾಂತಕ್ಕೂ ಬಂದರೆ ನನ್ನ ಮಕ್ಕಳಿಗೂ ಎರಡು ಮಾತು ಹೇಳಿಯಾರೇನೋ. ಈ ವಂಶದ ದೀವಿಗೆಯನ್ನು ಉರಿಸಿಯಾರೇನೋ...

ತಾರಾಭಗವತಿ ನಿಮೀಲಿತ ನೇತ್ರಳಾಗಿ ಎರಡೂ ಕೈಗಳನ್ನು ಜೋಡಿಸಿ ಕಾಲಿಮಾಗೆ ಪ್ರಾರ್ಥನೆ ಸಲ್ಲಿಸಿದಳು. ಹಜಿಂಹಾಡುವ ಮಲ ರೊಂದಿಗೆ ಎದೆಯು ಬಿಸುಸುಯ್ಲು ಬೀರುತ್ತು. ಕಂಬನಿಗಳನ್ನು ಸೀರೆಯು ಸೆರಗು ಹೀರಿತು.

ತಲೆ ಬಾಗಿಲನ್ನು ದಾಟಿ ಒಳ ಬಂದ ಜಗ್ಗೂತಾಯಿ – "ಮಾಯೀ ಅಡಿಗೆ ಮಾಡಿದಿರೋ ಇಲ್ಲವೋ ?"

"ಹೆಸರು ಬೇಳೆ ಪರಮಾನ್ನ ಇದೆ ಸಾಕು."

"ಇನ್ನೇನೂ ಮಾಡಲಿಲ್ಲವೇ ?"

"ಏನೂ ಬೇಕಾಗಲಿಲ್ಲ."

"ನಾನು ಕಿಚಡಿ ಮಾಡಿದ್ದೇನೆ, ತರುವೆ."

"ಬೇಡ ಕಕ್ಕಿ."

ನುಡಿ ಹೊರಬೀಳುವುದರೊಳಗಾಗಿ ಜಗ್ಗೂತಾಯಿ ಹೋಗಿ ಯಾಗಿತ್ತು. ಮರುಗಳಿಗೆಯಲ್ಲಿ ಒಂದು ಪಾತ್ರೆಯ ತುಂಬ ಕಿಚಡಿ ಯನ್ನು ತಂದಿಟ್ಟು "ಹೊಲಕ್ಕೆ ಊಟ ಒಯ್ಯುವುದಿದೆ. ನೀವು ಊಟ ಮಾಡಿ ಮಾಯಿ" ಎಂದವಳೇ ಚಿಗುರೆಯಂತೆ ಚಿಮ್ಮಿ ಮಾಯವಾದಳು ಮಾತಾಮಯಿ ಕಕ್ಕಿ. ಹಿಂದಿನಿಂದ ಸಜಲ ನೇತ್ರಗಳು ಅವಳನ್ನು ಕಣ್ಮರೆ ಯಾಗುವವರೆಗೂ ನಿಟ್ಟಿಸಿದುವು.

ಎರಡು ಬಿಂದಿಗೆ ಶುದ್ಧೋದಕವನ್ನು ತಂದು ಒಳಗಡೆ ಇಡುವಷ್ಟರಲ್ಲಿ ತಲೆಬಾಗಿಲ ಬಳಿ ಯಾರೋ ಮಾತನಾಡಿದ ಸದ್ದು ಕಿವಿಯ ಮೇಲೆ ಬಿತ್ತು. ಹಸಿದಹೊಟ್ಟೆ ಘೀಳಿಡುತ್ತಿದ್ದುದರಿಂದ ನೈವೇದ್ಯವನ್ನು ಸೇವಿಸಿಯೇ ಹೋಗೋಣವೆಂದು ಮನಸ್ಸು. ಆದರೂ ಯಾರಾದರೂ ಅತಿಥಿ ಅಭ್ಯಾ ಗತರು ಬಂದಿರಬಹುದೆಂದು ಯೋಚನೆ ಮಾಡಿ ಹೊರಗಡೆ. ಬಂದಳು. ನೋಡಿ ಸೌಮ್ಯವೇ ಮೈವೆತ್ತು ಬಂದಂತೆ ಹಾಲ್ಗಡಲೇ ಮೂರ್ತಿಭವಿಸಿ ನಿಂದಂತೆ ನಿಂತಿದ್ದಾನೆ ಬುದ್ಧದೇವ !

ಎಡಬಲಗಳಲ್ಲಿ ಸಾರಿಪುತ್ರ ಆನಂದರಿದ್ದಾರೆ. ಬಿಳಿಯ ದುಪ್ಪಟಿ ಯನ್ನು ಹೊದ್ದು, ಕೂದಲನ್ನು ನಡುನೆತ್ತಿಯ ಮೇಲೆ ಮುಡಿಗಟ್ಟಿ, ಮರದ ಹಾವುಗೆಗಳನ್ನು ಮೆಟ್ಟಿ, ಮಂದಹಾಸ ಬೀರಿ, ಕಮಲ ನಯನ

ಗಳನ್ನು ಅರೆದೆರೆದು ನಿಂತ ಅವನು ದೇವಪುರುಷನಂತೆ ಕಣ್ಗೆಸೆದನು. ತಕ್ಷಣ ತಾರಾಭಗವತಿ ಮೈಬಾಗಿ ಮಹಾನುಭಾವನ ಪಾದ ಕಮಲಗಳಿಗೆ ವಂದಿಸ ಹೋಗುತ್ತಲೂ ಅವನು ಹಿಂದೆ ಸರಿದು ಆಕೆಯ ವಂದನೆಗಳನ್ನು ಹಸ್ತ ಮುಖೇನ ಸ್ವೀಕರಿಸಿ ವಿನೀತನಾಗಿ ಕರಗಳನ್ನು ಜೋಡಿಸಿ ಪ್ರತಿ ವಂದಿಸಿದ.

ಹಸ್ತಗಳನ್ನು ಜೋಡಿಸಿ ವಂದನೆಯನ್ನರ್ಪಿಸಿದರೂ ಮಂತ್ರ ಮುಗ್ಧಳಾದಳು ತಾರಾಭಗವತಿ. ಏನೆನ್ನಬೇಕೋ ಹೊಳೆಯಲಿಲ್ಲ. ಹೇಗೆ ಉಪಚರಿಸಬೇಕೋ ತಿಳಿಯಲಿಲ್ಲ; ಹೇಗೆ ಮಾತನಾಡಿಸಬೇಕೋ ಅದೂ ಗೊತ್ತಾಗಲಿಲ್ಲ. "ಬನ್ನಿ ಕೂಡಿ" ಎನ್ನುವುದು ಸಹ ಮರೆತು ಹೋಯಿತು ! ಮುಗಿದ ಕೈಗಳು ಇಳಿಯಲಿಲ್ಲ ! ಮಂದಹಾಸ ಬೀರಿ ಅಂಜಲೀಬದ್ಧಳಾಗಿ ಮೈಮರೆತುಬಿಟ್ಟಿದ್ದಾಳೆ ! ಹೊತ್ತು ಉರುಳಿದರೂ ಇತ್ತ ಪರಿವೆಯೇ ಇಲ್ಲ !

ಎಚ್ಚರಿಸಲೆಂದೋ ಏನೋ ! ಸುಯ್ಯಲರು ಸುಯ್ಯನೆ ಸುಯ್ದು ಬೀಸಿತು.

ಸುರ ಹೊನ್ನೆಯ ಹೊಂದಳಿದ ಹೊದರಿನಲ್ಲಿ ಹುದುಗಿ ಕುಳಿತ ಕೋಗಿಲೆ ಇನಿದನಿಯಲ್ಲಿ ಹಾಡಿತು ಕುಹೂಊಊ ! ಕುಹೂಊಊ !

ಉಹೂ, ಆದರೂ ಇತ್ತ ಪರಿವೆಯೇ ಇಲ್ಲ.

"ಮಾಯೀ, ಬಹಳ ದೂರದಿಂದ ನಡೆದು ದಣಿದು ಬಂದಿದ್ದಾರೆ ಪ್ರಭು."

ಆನಂದನ ದನಿ ಕಿವಿಯನ್ನು ತಾಗಿದ ಮೇಲೆ ತನ್ನ ರೀತಿ ತನಗೇನೇ ಲಜ್ಜೆಯನ್ನುಂಟುಮಾಡಿತು. ನಾನೇಕೆ ಹಾಗೆ ನಿಂತುಬಿಟ್ಟೆ ? ಪುಂಗಿ ಕೇಳಿದ ಫಣಿಯಂತಾಯಿತು ನನ್ನ ಸ್ಥಿತಿ. ಛೀ ! ಅವರಾದರೂ ಏನೆಂದು ಕೊಂಡಿದ್ದಾರು ? ಅಯ್ಯೋ, ದೇವರೇ ! ನಾನೇಕೆ ಹೀಗಾದೆ ? ನನಗೇಕೆ ಬುದ್ಧಿ ಓಡಲಿಲ್ಲ !

ತಲೆಯಲ್ಲಿ ಪ್ರಶ್ನೆಗಳು ಪುಂಖಾನುಪುಂಖವಾಗೆದ್ದುವು.

"ದಯಮಾಡಿ ಒಳಗಡೆ ಬನ್ನಿರಿ ಪ್ರಭು !" ಎನ್ನುತ್ತ ಎರಡೂ ಕೈಗಳಿಂದ ಸ್ವಾಗತ ನೀಡಿದಳು ತಾರಾಭಗವತಿ. ಭಾವೋದ್ವೇಗದಿಂದ ಮೈ ಪುಳಕಿತವಾಯಿತು. ಅಂತರಂಗದ ಸಂತಸವೆಲ್ಲಾ ಮುಖಕ್ಕೆ ಹೂ ನದಿಯಂತೆ ನುಗ್ಗಿ ಬಂತು.

ಆನಂದ ಸಾರಿಪುತ್ರರೊಡನೆ ಬುದ್ಧದೇವ ಒಳಬಂದ – ಮಹಾ ಮೇರುವೇ ನಡೆದು ಬಂದಂತೆ ಅದೇ ತಾನೇ ತಂದಿದ್ದ ಶುದ್ಧೋದಕದನ್ನು ತಂದು ಸಡಗರದಿಂದ ಜೋಗಸೆಗೆ ಜಳಜಳ ಸುರಿದಳು. ಮೂವರೂ ಕೈಕಾಲು ತೊಳೆದು ಮುಖ ಮಜ್ಜನ ಮಾಡಿದರು. ತೊಟ್ಟಿಯಲ್ಲಿ ಸಾಲು ಮಣೆ ಗಳನ್ನಿಟ್ಟು ಕೈಮುಗಿದು ಹೇಳಿಕೊಂಡಳು ತಾರಾಭಗವತಿ. "ನನ್ನ ಮನೆ ಇಂದು ಪಾವನವಾಯಿತು. ನನ್ನ ಬಡ ಆತಿಥ್ಯವನ್ನು ಸ್ವೀಕರಿಸಿ ತಾವು ಮುಂದೆ ಪಯಣ ಬೆಳೆಸಬೇಕು ಪ್ರಭೂ !"

"ನಾವು ಬಡತನ ಸಿರಿತನಗಳನ್ನು ಲೆಕ್ಕಿಸುವವರಲ್ಲ. ತಮ್ಮ ಸ್ವಹಸ್ತ ದಿಂದ ಏನು ಕೊಟ್ಟರೂ ನಮಗದು ಮಹಾಪ್ರಸಾದ ತಾಯಿ."

ಗಗನ ಸದೃಶ ಬುದ್ಧದೇವ ವಿನೀತನಾಗಿ ಅಮೃತೋಪಮವಾಗಿ ನುಡಿದ.

ಆದರೆ ತಾನಿಂದು ಅಡಿಗೆಯೇ ಮಾಡಿಲ್ಲವಲ್ಲಾ. ಏನು ಕೊಡಲಿ ? ಇನ್ನು ಅಡಿಗೆ ಮಾಡುವವರೆಗೂ ಅವರು ಕುಳಿತಾರೆ ? ಇಂಥ ದುರ್ದಿನವೇ ಅವರು ಬರಬೇಕೆ ? ಇಂದೇಕೆ ನನಗಿಷ್ಟು ಸೋಮಾರಿತನ ಬಂತು ? ಅಯ್ಯೋ, ನನ್ನ ದುರಾದೃಷ್ಟವೇ...!

ಕೈಕಾಲುಗಳ ಶಕ್ತಿ ಉಡುಗಿದಂತಾದರೂ ಓಡಾಡಿದಳು ತಾರಾ ಭಗವತಿ. ಹೆಸರು ಬೇಳೆಯ ಪರಮಾನ್ನ ಪಾತ್ರೆಯ ತುಂಬ ಇದೆ. ಜಗ್ಗೂ ತಾಯಿಯ ಕಿಚಡಿಯೂ ಇದೆ. ಉಗ್ರಾಣಕ್ಕೆ ಹೋಗಿ ನೋಡಿದರೆ ನಿನ್ನೆ ತಂದಿಟ್ಟ ಹಚ್ಚ ಹಸರು ಬಾಳೆಯ ಗೊನೆ ಹಣ್ಣುಗಳುದುರುವಷ್ಟು ಹಣ್ಣಾಗಿದೆ ! ಓ, ಭಾಗ್ಯವೇ ಭಾಗ್ಯ ! ಬುದ್ಧ ದೇವನ ಮಹಿಮೆಯೋ ಏನೋ.

ಕಿಚಡಿ ಪರಮಾನ್ನ ಹಾಲು ಹಣ್ಣುಗಳನ್ನು ಹೊಂದಿಸಿದರೆ ಹೊಟ್ಟೆ ತುಂಬಿ ಅಜೀರ್ಣವಾಗುವಷ್ಟು ಔತಣವಿದೆ ! ಎದೆಯ ಹಕ್ಕಿ ಒಮ್ಮೆಲೇ ಉತ್ಸಾಹದಿಂದ ಉಲಿಯಿತು...ನಿನ್ನ ಪುಣ್ಯವೇ ಪುಣ್ಯ ! ತಾರಾಭಗವತಿ ಎಲ್ಲವನ್ನೂ ಒಯ್ದು ಮುಂದಿಟ್ಟಳು. ಮುಖ ಅರಳಿ ಹೂವಾಯಿತು. ಹಿಂದಿನ ದಿನ ಜಗ್ಗು ಎಳೆಯ ಸೌತೆಕಾಯಿಗಳನ್ನು ತಂದಿದ್ದ. ಅವೆಲ್ಲಿ ? ಆ ಯೋಚನೆ ಬಂದೊಡನೆ ಪುನಃ ಅಡುಗೆ ಮನೆಗೆ ಓಡಿದಳು. ತಾರಾ

ಭಗವತಿ. ಬುಟ್ಟಿಯನ್ನು ತಡುಕಿದರೆ ಅವು ಅಲ್ಲೇ ಇವೆ. ಹೃದಯ ಬಿರಿಯುವಷ್ಟು ಸಂತಸ ಮೂಡಿತು. ಅವನ್ನೂ ಲಗುಬಗನೆ ಕತ್ತರಿಸಿ ಒಯ್ದು ಮುಂದಿಟ್ಟಳು. ಬುದ್ಧ ದೇವ ಹರ್ಷಿತನಾಗಿ ನುಡಿದ "ಇದ ಕ್ಕಿಂತಲೂ ಹೆಚ್ಚಿನ ಆತಿಥ್ಯವುಂಟೇ ?"

ತಾರಾಭಗವತಿ ಮಂದಹಾಸ ಬೀರಿ ಮೈಮರೆತು ನಿಂತಳು.

"ಕುಳಿತುಕೊಳ್ಳಿ ತಾಯಿ. ನೀವೂ ದಯಮಾಡಿ ನಮ್ಮೊಂದಿಗೆ ತೆಗೆದುಕೊಳ್ಳಿ."

ತಾರಾಭಗವತಿಯು ಬದಿಯಲ್ಲಿ ಕುಳಿತುಕೊಂಡು ಕ್ಷುದ್ಬಾಧೆಯನ್ನು ಪರಿಹರಿಸಿಕೊಂಡಳು.

"ಪ್ರಭೂ ! ಧೃತಿಯನ್ನು ದೃಢಗೊಳಿಸುವ ಬಗೆ ಹೇಗೆ ?"

"ಅಂತರಂಗದ ಬಂಧನಗಳಿಗೆ ತುತ್ತಾಗದೆ ನಿರ್ಮಮಕಾರ ಭಾವನೆ ಯನ್ನು ಬೆಳಿಸಿಕೊಂಡರೆ ಸಾಮಾನ್ಯ ಧೃತಿಯು ಧೃಢವಾಗುತ್ತದೆ ತಾಯಿ."

"ಚಿತ್ತ ಶುದ್ಧಿಯನ್ನು ಪಡೆಯುವುದು ಹೇಗೆ ಪ್ರಭೂ ?"

"ಮನಸ್ಸಿಗೆ ಆಳಾಗದಿರುವುದೇ ಚಿತ್ತ ಶುದ್ಧಿಗೆ ಸಾಧನೆ ತಾಯಿ."

"ಸಾಧನೆ—ಸಾಧನೆಯ ಬಗ್ಗೆ ಏನಾದರೂ ಹೇಳುವಿರಾ ತಂದೆ ?"

"ನಿರ್ವಿಕಾರನೂ, ನಿರ್ಮಲಚಿತ್ತನೂ, ನಿರಹಂಕಾರಿಯೂ, ಸದಾ ಸಂತುಷ್ಟನೂ, ಸಂತೃಪ್ತನೂ, ವಿವೇಕಿಯೂ, ವಿಚಾರಶೀಲನೂ ದಯಾ ವಂತನೂ ಆಗಿರುವುದೇ ಸಾಧನೆಯ ಸೋಪಾನ."

"ಪ್ರಭುದೇವ......." ಏನೋ ಹೇಳುವುದಿದ್ದರೂ ತುಟಿಗಳು ಬಿರಿಯಲಿಲ್ಲ.

"ನೋವು ದುಃಖಗಳು ಸಾಧನೆಗೆ ಉತ್ತಮೋತ್ತಮ ಗುರು. ಕಷ್ಟ ಪರಂಪರೆಗಳು ಜ್ಞಾನೋದಯಕ್ಕೆ ನಾಂದಿ...!"

ಬುದ್ಧದೇವ ಶಿಷ್ಯರೊಡನೆ ಔತಣವನ್ನು ತೀರಿಸಿ ಕೈ ತೊಳೆದು ಮುಖಮಜ್ಜನ ಮಾಡಿ, ಕರಕಮಲಗಳನ್ನು ವಿನಯಪೂರ್ವಕವಾಗಿ ಜೋಡಿಸಿ ಅಭಿವಂದಿಸಿ ತಾರಾಭಗವತಿಯ ಅಪ್ಪಣೆಯನ್ನು ಪಡೆದು ಹೊರಟ. ಹೊಲದಂಚಿನಲ್ಲಿ ಸಾಗಿ ದೂರದಲ್ಲಿ ಬಿಳಿಯ ಬಳಪದಂತೆ

ಸಣ್ಣಗೆ ತೋರಿ ಕಣ್ಣಿಗೆ ಕಾಣಿಸದಂತೆ ಕರಗಿ ಹೋಗುವವರೆಗೂ ನಿಂತು ಸಜಲ ನೇತ್ರಳಾಗಿ ನಿಟ್ಟಿಸಿದಳು ತಾರಾಭಗವತಿ.

ಆಹಾ.... ! ನಾನೆಷ್ಟು ಧನ್ಯೆ ! ಬುದ್ಧದೇವ ಬುದ್ಧ ಪೂರ್ಣಿಮೆಯಂದೇ ನನಗೆ ಭೇಟಿ ಕೊಟ್ಟಿದ್ದಾರಲ್ಲ, ಏನಿದ್ದಿರಬಹುದು ? ನಿಜವಾಗಿಯೂ ನನಗೆ ಅವರ ಅನುಗ್ರಹವಿದೆ. ಅಂತಲೇ ಅವರು ತಮ್ಮ ಜನ್ಮದಿನದಂದೇ ಭೇಟಿ ಕೊಟ್ಟಿದ್ದಾರೆ.

ಆನಂದ ಸಾಗರದಲ್ಲಿ ಮುಳುಗೆದ್ದಳು ತಾರಾಭಗವತಿ.

೦ ೦ ೦ ೦

ಸಾಯಂ ಸಮಯ.

ಬೃಹದಾಕಾರದ ಆಲದ ಮರದ ತಣ್ಣೆಳಲಲ್ಲಿ ಬುದ್ಧದೇವ ಮಂಡಿಸಿದ್ದಾನೆ. ಕಾರ್ತಿಕಾನಿಲ ತಣ್ಣಗೆ ತೀಡುತಿದ್ದಾನೆ. ಎಡಬಲಗಳಲ್ಲಿ ಸಾರಿಪುತ್ರ, ಆನಂದರು ಕುಳಿತಿದ್ದಾರೆ. ಸುತ್ತಮುತ್ತ ಬಹು ಮಂದಿ ಶ್ರೋತೃಗಳು, ಶಿಷ್ಯರುಗಳು ಭಾವಾವಿಷ್ಟರಾಗಿ ಮೈಯೆಲ್ಲಾ ಕಿವಿಯಾಗಿ ಕುಳಿತಿದ್ದಾರೆ. ತತ್ವಬೋಧೆ, ಜ್ಞಾನಬೋಧೆ ನಡೆಯುತ್ತಿದೆ. ಸತ್ಯ ಧರ್ಮಗಳೇ ಮಾನವತೆಯ ಹುರುಳೆಂಬುದನ್ನು ಬುದ್ಧದೇವ ಅಮೃತೋಪಮವಾಗಿ ವಿವರಿಸುತಿದ್ದಾನೆ. ಬುದ್ಧದೇವ ಒಂದು ಗಳಿಗೆ ಸ್ವೈ ಮರೆತನೋ ಅಥವಾ ನಾಲಿಗೆ ಸೋತಿತೋ ಅಂತೂ ಸುಮ್ಮನಾದ. ಗುಂಪಿನ ಮಧ್ಯೆ ಕುಳಿತಿದ್ದ ತರುಣನೊಬ್ಬ ಎದ್ದು ಬಂದು ಮೈ ಬಾಗಿ ನಮಸ್ಕರಿಸಿ ವಿನೀತನಾಗಿ ನಿಂತ.

"ಮಗೂ, ನಿನ್ನ ಬಯಕೆ ಏನು ?"

"ದೀಕ್ಷೆ ತೆಗೆದುಕೊಳ್ಳುವುದು."

"ನಿನಗೆ ಹೆಂಡತಿ ಮಕ್ಕಳಿದ್ದಾರೆಯೆ ?"

"ಇಲ್ಲ ಪ್ರಭೂ ! ನಾನಿನ್ನೂ ಅವಿವಾಹಿತ."

"ಏಕೆ ಮಾಡಿಕೊಳ್ಳಲಿಲ್ಲ ಮಗೂ ?

"ಸತ್ ಸಾಧನೆಯ ಹಂಬಲದಿಂದಾಗಿ ಮಾಡಿಕೊಳ್ಳಲಿಲ್ಲ ಪ್ರಭೂ !

"ನಿನ್ನ ಮನಸ್ಸನ್ನು ದೃಢವಾಗಿಟ್ಟುಕೊಳ್ಳಬಲ್ಲೆಯಾ ?"

"ಗುರುಬಲದಿಂದ ಗುರಿಯನ್ನು ಮುಟ್ಟುವೆ ತಂದೆ."

"ನೀನಿನ್ನೂ ಬಹಳ ಚಿಕ್ಕವನು. ಮುಂದೆ ಎಂದಾದರೂ ನಿನ್ನ ಮನಸ್ಸು ವಿಮುಖವಾಗಬಹುದು."

"ಇಲ್ಲ ಭಗವಾನ್ ! ನಾನು ನಿಮ್ಮ ಸೇವೆಯಲ್ಲೇ ನನ್ನ ದಿನಗಳನ್ನು ಕೊನೆಗಾಣಿಸುವೆ."

"ನನ್ನ ಸೇವೆಯಲ್ಲ ಮಗೂ. ಲೋಕ ಸೇವೆ."

"ಪ್ರಸಾದ ಪ್ರಭೂ !"

"ಇಂದ್ರಿಯಗಳನ್ನು ನಿಗ್ರಹಿಸಿ, ವ್ಯಾಮೋಹವನ್ನು ಬದಿಗಿಟ್ಟು, ಐಹಿಕ ಸುಖಗಳನ್ನು ತ್ಯಜಿಸಿ, ಕಷ್ಟಕಾರ್ಪಣ್ಯಗಳನ್ನು ಸಹಿಸಿಕೊಳ್ಳ ಬಲ್ಲೆಯಾ ಮಗೂ ? —ಅನುಗಾಲವೂ ಸಂತುಷ್ಟನಾಗಿ, ಸಂತೃಪ್ತನಾಗಿ ಇರಬಲ್ಲೆಯಾ ಬಾಲ ?

"ನಿಮ್ಮ ಅನುಗ್ರಹವೊಂದಿದ್ದರೆ ಎಲ್ಲವೂ ಸಾಧ್ಯ ತಂದೆ."

"ನೀನು ಇನ್ನೂ ಕೆಲವು ದಿನ ನಮ್ಮ ಶಿಷ್ಯರೊಂದಿಗೆ ಸಾಧನೆ ಮಾಡಿ ವಿಚಾರ ಮಾಡು ಮಗೂ."

"ಅಪ್ಪಣೆ ಮಹಾಪ್ರಭೂ !"

"ನಿನ್ನ ಹೆಸರೇನು ಬಾಲಾ ?"

"ನಾಗಚಂದ್ರ ತಂದೆ—!"

ನಾಗಚಂದ್ರ ವಿನೀತನಾಗಿ ಒಪ್ಪಿಕೊಂಡ. ಹಗಲೆಲ್ಲ ಶಿಷ್ಯವೃಂದದಲ್ಲಿ ಬೆರೆತು ಭಗವಾನ್ ಬುದ್ಧದೇವನ ಉಪದೇಶವನ್ನು ಕೇಳಿ, ಹೀರಿ ಮೈದುಂಬಿ ಕೊಂಡ. ದಿನದ ಗಳಿಗೆಗಳು ಒಂದೊಂದಾಗಿ ಉರುಳುತ್ತಿದ್ದುವು. ಸಾಧನೆಯ ಹಾದಿಯಲ್ಲಿ ದಿಟ್ಟ ಹೆಜ್ಜೆ ಇಟ್ಟ.

ಸಂಜೆಯ ಪ್ರಾರ್ಥನೆಯ ನಂತರ ಗುರುದೇವ ಬುದ್ಧ ಶಿಷ್ಯವೃಂದ ದೊಡಗೂಡಿ ಗಾಳಿಯ ಸಂಚಾರ ಹೊರಟ. ಹೊಳೆಯಂಚಿನಲ್ಲಿ ಮೆಲ್ಲನೆ ಸಾಗುತ್ತಿತ್ತು ಹಾದಿ. ಜುಳು ಜುಳು ಹರಿಯುವ ನೀರಿನ ಮೃದು ಮಧುರ ನಿನಾದ ಕಿವಿಯನ್ನು ತಾಗುತಿತ್ತು.

ನಾಗಚಂದ್ರ ಬಿಳಿಯ ದುಕೂಲವನ್ನು ಹೊದ್ದು ಹಿಂದೆಯೇ ನಡೆದಿದ್ದ. ಜುಳು ಜುಳು ನಿನಾದ ಅಂತರಂಗದ ಸುಪ್ತ ತರಂಗಗಳನ್ನು ಮೆಲ್ಲನೆ ಮಿಾಂಟು ತಿತ್ತು. ಜುಳು—ಜುಳು—ಜುಳು.

ಭಗವಾನ್ ಬುದ್ಧದೇವ ನಿಧಾನವಾಗಿ ಹೆಜ್ಜೆ ಹಾಕುತ್ತಾ ಇಂತೆಂದ, "ಶಿಷ್ಯರೆ, ನಾನು ಗೃಹತ್ಯಾಗಿಯಾದಾಗ ಇನ್ನೂ ಈ ಸಣ್ಣ ಮನಸ್ಸನ್ನು ಗೆದ್ದಿರಲಿಲ್ಲ. ಸಂಸಾರಬಂಧನದಿಂದ ವಿಮುಕ್ತನಾಗಲೇಬೇಕೆಂಬ ಬಯಕೆಯೇನೋ ಬಹಳವಾಗಿತ್ತು. ಆದರೆ ಪೂರ್ಣ ಜಾಗೃತನಾಗುವ ಮುನ್ನ ಆಸೆಗಳ ಹೊಲಸುತನ ನನ್ನನ್ನು ಬಹಳವಾಗಿ ಹಿಂಡಿದೆ. ಉಜ್ವಲ ಭಾವನೆಗಳು ಕಾಮನೆಗಳ ಕೊಳಚೆಯಲ್ಲಿ ಸಿಲುಕಿ ಘಾಸಿ ಪಟ್ಟಿವೆ. ಅಂತಃಶತ್ರುಗಳು ಹೆಜ್ಜೆ ಹೆಜ್ಜೆಯಲ್ಲಿಯೂ ನನ್ನನ್ನು ಮುಳುಗಿಸಲು ಪ್ರಯತ್ನಪಟ್ಟಿವೆ. ಅಂಕುಶವಿಲ್ಲದಿದ್ದಲ್ಲಿ ಮನಸ್ಸು ಮದಿಸಿದ ಆನೆಯೇ ಸೈ. ಹುಟ್ಟು, ಬೆಳವಣಿಗೆ, ರೋಗ, ಜರೆ, ಸಾವು, ನೋವು, ಅಧಿಕಾರ, ಐಶ್ವರ್ಯ, ಭೋಗ, ಭಾಗ್ಯ, ಯೌವನ, ಸತಿ, ಸುತರು ನನ್ನನ್ನು ಮುಳ್ಳು ಬೇಲಿಯಂತೆ ಸುತ್ತುವರಿದಿದ್ದರು. ನಿಮ್ಮೆಲ್ಲರಂತೆ ನನಗೂ ಐಹಿಕ ಸುಖವನ್ನು ತ್ಯಜಿಸುವುದು ಬಹಳ ಕಷ್ಟವಾಗಿದೆ. ಆದರೂ ಬದುಕಿನಲ್ಲಿ ಬೇಸತ್ತು, ಮಾನಸಿಕ ಹಿಂಸೆಯನ್ನು ಸಹಿಸಿ, ಸಂಸಾರಬಂಧನವನ್ನು ಕಿತ್ತೊಗೆದು ಸತ್ಯಾನ್ವೇಷಿಯಾಗಿ ಹೊರಟೆ. ಹಾದಿ ಸುಗಮವೇ ? ಅರಮನೆಯ ವೈಭವದಲ್ಲಿ ಬೆಳೆದು, ಹಾಲೋಗರವನ್ನುಂಡು, ಸೊಂಪಾಗಿ ಬೆಳೆದ ಮೈ ಅಷ್ಟು ಸುಲಭವಾಗಿ ತಪಸ್ಸಿನ ಕಠಿಣ ಜೀವನವನ್ನು ಸಹಿಸಿಕೊಳ್ಳಬಲ್ಲುದೇ ? ಸಾಧನೆಯ ಹಾದಿ ಕಲ್ಲುಮುಳ್ಳುಗಳಿಂದ ಕೂಡಿದೆ. ಜಡಜಾಪತ್ತುಗಳಿಂದ ತುಂಬಿದೆ. ಅರಸುಕುವರನಿಗೆ ತಿರಿದುಂಬುದರ ಕ್ಲೇಶವೆಷ್ಟಿರಬಹುದು ? ತಿಂಬುವುದಿರಲಿ, ಕಣ್ಣಿಂದ ಸಹ ನೋಡಿರದ, ಮನಸ್ಸಿಂದ ಸಹ ಯೋಚಿಸಿರದ ವ್ಯಕ್ತಿಗೆ ಸಾಧನೆಯ ಗಳಿಗೆ ಎಂತಿರಬಹುದು ?

"ಎಷ್ಟೋ ಬಾರಿ 'ಅಮ್ಮಾ' ಎಂದು ಕರೆದಿರುವೆ. ಎಷ್ಟೋ ಬಾರಿ 'ಅಪ್ಪಾ' ಎಂದು ಕನಲಿರುವೆ. ಎಷ್ಟೋ ಬಾರಿ 'ಯಶೋಧರಾ' ಎಂದು ಕಂಬನಿ ಮಿಡಿದಿರುವೆ. ಎಷ್ಟೋ ವೇಳೆ ಹಿಂದಿರುಗಲೇ ಎಂಬ ಯೋಚನೆಯೂ ಬಂದಿದೆ. ಏಕಾಂತ ವಾಸವು ನರಕೋಪಮವಾಗಿ ತೋರುತಿತ್ತು. ಹಗಲು ಉರುಳಿ ರಾತ್ರಿ ಮರಳಿದಾಗ ಹೆದರಿ ಹೈರಾಣಾದುದೂ ಉಂಟು. ರಾತ್ರಿ ವೇಳೆ ಎಲ್ಲೋ ಒಂದೆಡೆ ಅಡಗಿ ಮೈ ಮುದುಡಿ ಕುಳಿತಾಗ ಒಂದು ಹುಲ್ಲೆಕರು ಬಂದರೂ ಸಾಕು. ಒಂದು

ಕಾಡುಬೆಕ್ಕು ಚಲಿಸಿದರೂ ಸಾಕು. ಮರದ ಮೇಲಿನ ಪಕ್ಷಿ ರೆಕ್ಕೆ ಅಲುಗಿಸಿದರೂ ಸಾಕು. ಒಂದು ಒಣಗಿದ ಕಡ್ಡಿ ಕೆಳಗೆ ಬಿದ್ದರೂ ಸಾಕು. ಗಾಳಿಯಿಂದ ಎಲೆಗಳು ಮರ್ಮರಿಸಿದರೂ ಸಾಕು "ಅಗೋ ಬಂತು!" ಎಂಬ ಮಹಾ ಭಯ ಮನದಲ್ಲಿ ಮೂಡುತಿತ್ತು. 'ಮಹೋತ್ಪಾತ!' ಎಂದು ತಲ್ಲಣಗೊಳ್ಳುತಿತ್ತು ಪುಕ್ಕಲು ಎದೆ, ನಿಲ್ಲುವಂತಿಲ್ಲ, ಮಲಗುವಂತಿಲ್ಲ. ಕೂಡುವಂತಿಲ್ಲ, ಅಂಥ ಅಂಜಿಕೆ. ಅಂಥ ಭಯ–ಭೀತಿ. ಹೀಗೆ ಅಂತರಂಗದ ಬಂಧನಗಳಿಗೆ ತುತ್ತಾದವನನ್ನು ಮುಕ್ತನಾಗಲು ಸಹಾಯ ಮಾಡಿದುದು ಸಾಧನೆಯ ನಿಷ್ಠೆ. ಆ ನಿಷ್ಠೆಯೊಂದಿಲ್ಲದಿದ್ದಲ್ಲಿ ಮನಸ್ಸು ನಿಜವಾಗಿಯೂ ದೃಢವಾಗುತ್ತಿರಲಿಲ್ಲ. ಕ್ರಮ ಕ್ರಮೇಣ ದಿಟ್ಟತನವನ್ನು ಹೆಜ್ಜೆ ಹೆಜ್ಜೆಯಲ್ಲಿಯೂ ಗಳಿಸಿಕೊಂಡೆನೇ ಹೊರತು ಒಮ್ಮೆಲೇ ಅಲ್ಲ.

"ಬುದ್ಧ ಎಂದೂ ಬುದ್ಧನಾಗಿ ಪ್ರಬುದ್ಧನಾಗಿ ಜನಿಸಲಿಲ್ಲ. ಅವನು ಜನಿಸಿದುದು ಸಿದ್ಧಾರ್ಥನಾಗಿ, ಗೌತಮನಾಗಿ. ಆದುದರಿಂದ ನೀವ್ಯಾರೂ ಸಾಧನೆ ಕೈಗೂಡಲಿಲ್ಲವೆಂದು ಇದು ಮಹಾ ಕಠಿಣವೆಂದು ಕೈಬಿಡದಿರಿ. ಸತ್‌ಸಾಧನೆ ಶಿಥಿಲ ಮನಸ್ಕರನ್ನೂ ದಿಟ್ಟ ಹಾದಿಗೆ ಹಚ್ಚುತ್ತವೆ. ದುಷ್ಟ ಕಾಮನೆಗಳನ್ನು ಪ್ರಚೋದನೆಗೊಳಿಸುವ ಸಂದರ್ಭಗಳಲ್ಲಿ ಬಳಿಯಲ್ಲಿದ್ದರೆ ನೀವು ದೂರವಾಗಿರಿ.

"ಸತ್ಯಾನ್ವೇಶಿಗೆ, ಧರ್ಮಾನ್ವೇಶಿಗೆ ನಿರ್ಮಲ ಚಿತ್ತವೇ ರಾಜಪಥ. ಅಂತಃಶತ್ರುಗಳೊಡನೆ ನಾವು ದಯೆದೋರಿದೆವಾದರೆ ನಮ್ಮನ್ನು ಅವು ಶೋಕ ಸಾಗರದಲ್ಲಿ ಮುಳುಗಿಸಿಬಿಡುತ್ತವೆ. ಲೌಕಿಕ ಮೌಲ್ಯವನ್ನು ವರ್ಜಿಸಿ ಆತ್ಮ ಸಾಕ್ಷಾತ್ಕಾರದ ವೈಭವವನ್ನು ವೈಚಾರಿಕವಾಗಿ ಸೂಕ್ಷ್ಮವಾಗಿ ಗಮನಿಸಿರಿ. ಶಿಷ್ಯರೇ, ಶಾಂತಿಯನ್ನು ಪಡೆಯಬೇಕಾದರೆ ವೈರಾಗ್ಯದ ವನದಲ್ಲಿ ಧಾರ್ಮಿಕ ಸಸಿಯನ್ನು ನೆಡಿರಿ. ಅದು ಎಂದೂ ನಲುಗದಿರಲಿ. ಅದು ಇನ್ನೆಂದೂ ಬಾಡದಿರಲಿ. ಪ್ರೇಮವಾರಿಯನ್ನು ಸುರಿದು ಅದನ್ನು ಅನೂಚಾನವಾಗಿ ಸಂರಕ್ಷಿಸಿದಲ್ಲಿ ಭಾವೀ ಭಾರತ ಪುಣ್ಯ ಭೂಮಿಯಾಗುವುದರಲ್ಲಿ ಸಂಶಯವಿಲ್ಲ."

ಬುದ್ಧದೇವ ಸ್ವಾನುಭವಧಾರೆಯನ್ನು ಬಿತ್ತರಿಸುತ್ತಾ ಹೋದಂತೆಲ್ಲ ಶಿಷ್ಯಗಣ ಪುಳಕಿತರಾದರು. ನಾಗಚಂದ್ರ ಆನಂದಾಂಬುಧಿಯಲ್ಲಿ ಮುಳುಗಿ

ತೇಲಿ ಓಲಾಡಿದ. ಬುದ್ಧನ ಶಿಷ್ಯನಾಗಿ ದೀಕ್ಷೆ ಪಡೆಯಲೇಬೇಕೆಂಬ ಉತ್ಕಟ ಆಕಾಂಕ್ಷೆ ಬಹಳವಾಗಿತ್ತು. ಪಡೆಯುವುದಂತೂ ದಿಟ. ಆದರೆ ಸಾಧನೆಯ ಹಾದಿಯಲ್ಲಿ ಕಳ್ಳುಮುಳ್ಳುಗಳಿವೆ ಎಂಬ ಭಯವೂ ಇತ್ತು. ಈಗ ಅದು ಅಳಿಯತೊಡಗಿದೆ. ಇನ್ನು ಬಾಳಿನ ಸಂಜೆಯಲ್ಲಿ ತನ್ನನ್ನು ನೆಮ್ಮಿಕೊಂಡ ತಾಯಿ ಏನು ಮಾಡಲಿ? ಅವರನ್ನು ನಲುಗಿಸುವುದೇ? ರಾಕಾ ಚಂದ್ರನಿರುವವರೆಗೆ ಅವರಿಗೆ ಯಾವ ತೊಂದರೆಯೂ ಆಗದು. ಅಂದಮೇಲೆ ತೊಂದರೆಯೇನುಂಟು? ಇನ್ನೆಂದಾದರೂ ವಿಪುಲ ಬರುತ್ತಾನಷ್ಟೆ?

ದೀಕ್ಷಾಬದ್ಧನಾಗಿ ಬೋಧಕ ಬುದ್ಧ ಹೊರಬಿದ್ದನೆಂದರೆ ಜನಗತಿಯ ಹೆಜ್ಜೆಹೆಜ್ಜೆಯೂ ನಿಯಮ ಬದ್ಧ. ಓಹ್! ನೋಡಿದಷ್ಟೂ ಸಾಲದು, ಹೀರಿದಷ್ಟೂ ಸಾಲದು, ಏನೇ ಇರಲಿ, ನಾನು ದೀಕ್ಷೆ ತೊಟ್ಟೇ ತೊಡುವೆ. ಗುರುವಿದ್ದಾಗ ಗುರಿಯನ್ನು ಮುಟ್ಟಲಾರೆನೆಂದರೆ ಮುಂದೆಂದೂ ಸಾಧ್ಯವೇ ಇಲ್ಲ.

ಓ! ದೇವಗಣಗಳೇ! ನನ್ನನ್ನು ಕ್ಷಮಿಸಿರಿ, ಮಾಯಿ ನನ್ನನ್ನು ಕ್ಷಮಿಸಿಬಿಡಿ! ನಾನು ದೀಕ್ಷೆ ಕೈಕೊಂಡು ಬುದ್ಧ ಭಿಕ್ಷುವಾಗುವೆ.

ಬುದ್ಧಂ ಶರಣಂ ಗಚ್ಛಾಮಿ,
ಸಂಘಂ ಶರಣಂ ಗಚ್ಛಾಮಿ,
ಧರ್ಮಂ ಶರಣಂ ಗಚ್ಛಾಮಿ.

ವಿಪುಲಚಂದ್ರ ಸೈನ್ಯಕ್ಕೆ ಸೇರುವ ಸ್ವಲ್ಪ ಮುಂಚೆ ಹೇಳಿದ್ದ, "ನಾಗೂ, ಯುದ್ಧಭೂಮಿ ಎಂದಾದರೂ ನನಗೆ ರುದ್ರಭೂಮಿ ಯಾಗಲಿಕ್ಕೂ ಸಾಕು, ಎಂದೂ ನೀನು ನನ್ನನ್ನು ನೆಚ್ಚಿಕೊಳ್ಳಲೇಬೇಡ, ಮನೆ ಮಠಗಳ ಭಾರ ನಿನ್ನ ಮೇಲೆಯೇ, ಮಾಯಿಗೆ ಮನೆಯಲ್ಲಿ ಒಬ್ಬರೇ ಇದ್ದು ಬೇಸರ ಬಂದಿದೆ, ಅವರನ್ನು ಸದಾ ಪ್ರೀತಿಯಿಂದ ಕಾಣು ಉದಾಸೀನ ಮಾಡಬೇಡ," ದನಿಯಲ್ಲಿ ಒತ್ತಾಯವಿತ್ತು. ಅಧಿಕಾರವಿತ್ತು, ಅನುಕಂಪವಿತ್ತು.

ಹಾಗೆಂದು ನಾನು ಮನೆಯಲ್ಲುಳಿದರೆ ದೀಕ್ಷೆ ತೊಡುವಂತೆಯೂ ಇಲ್ಲ, ಗುರಿ ಮುಟ್ಟುವಂತೆಯೂ ಇಲ್ಲ. ಐಹಿಕ ಸುಖದಲ್ಲಿ ಮುಳುಗಿ ಕೊಚ್ಚೆಯ ಹುಳುವಾಗುವುದರಲ್ಲಿ ಅನುಮಾನವಿಲ್ಲ. ದೀಕ್ಷೆ ಪಡೆಯದ

ಹೊರತು ನನ್ನ ಬದುಕು ತುಂಬುವುದಿಲ್ಲ. ನಮ್ಮ ಮಾರ್ಗದರ್ಶನಕ್ಕಾಗಿ ಭಗವಂತನೇ ಬುದ್ಧ ರೂಪದಲ್ಲಿ ಮೈದಾಳಿರುವಾಗ ಮೈಮರೆತರೆ ನಮಗೆ ನರಕದಲ್ಲಿಯೂ ಸ್ಥಳ ದೊರೆಯಲಾರದು. ಸದ್ಗುರುವಿನ ಅನುಗ್ರಹ ಲಭ್ಯ ವಿಲ್ಲದೆ ದೊರೆಯುವುದುಂಟೇ ? ಸದ್ಗುರುವಿನ ಸಾನ್ನಿಧ್ಯದಲ್ಲಿ ಸಿದ್ಧಿಯನ್ನು ಪಡೆದುಕೊಳ್ಳುವ ತನಕ ನನ್ನ ಮನಸ್ಸಿಗೆ ಶಾಂತಿ ದೊರೆಯಲಾರದು. ಶಾಂತಿ ದೊರೆಯದಿದ್ದರೆ ಬದುಕು ನಿರರ್ಥಕ. ಧಾರ್ಮಿಕ ಪಥದಲ್ಲಿ ಪದಾರ್ಪಣೆ ಮಾಡುವ ನೂತನಾಭ್ಯಾಸಿಗೆ ಸದ್ಗುರುವು ಅವಶ್ಯಕವಾಗಿಯೂ ಬೇಕು. ಗುರುವಿಲ್ಲದೆ ಎಲ್ಲರೂ ಬುದ್ಧದೇವನಂತೆ ಪ್ರಬುದ್ಧರಾಗಬಲ್ಲರೆ ? ಎಂದಿಗೂ ಸಾಧ್ಯವೇ ಇಲ್ಲ.

ಬುದ್ಧಂ ಶರಣಂ ಗಚ್ಛಾಮಿ,
ಸಂಘಂ ಶರಣ ಗಚ್ಛಾಮಿ,
ಧರ್ಮಂ ಶರಣಂ ಗಚ್ಛಾಮಿ.

೦ ೦ ೦ ೦

ಮೂಡಣ ದಿಕ್ಕಿನಿಂದ ಒಯ್ಯೊಯ್ಯನೆ ತಣ್ಣಗೆ ತೀಡಿ ಬರುತ್ತಿದೆ–ಗಾಳಿ–ತಂಗಾಳಿ.

ಸಣ್ಣ ದನಿಯಲ್ಲಿ ಸುಪ್ರಭಾತವನ್ನು ಹಾಡಿಕೊಳ್ಳುತ್ತಾ ಮುಂಬಾಗಿಲನ್ನು ತೆರೆದಳು–ತಾರಾಭಗವತಿ. ಉಟ್ಟ ಬಿಳಿಯ ಸೀರೆ ಶುಭ್ರ ಧವಳ ಕಾಂತಿಯನ್ನೊಸುರುತಿತ್ತು. ಬೆಳ್ಳಗೆ ಬೆಳಗಿದ ತಂಬಿಗೆಯಲ್ಲಿ ತಿಳಿ ನೀರನ್ನು ತಂದ ಅವಳು ಬಾಗಿಲ ಮುಂದೆ ಅಂಗಳದುದ್ದಕ್ಕೂ ಚಿಮುಕಿಸಿ ಕಸ ಉಡುಗಿ ರಂಗೋಲಿ ಇಟ್ಟು ಒಳಬಂದಳು. ಮಟ್ಟಸವಾದ ನಿಲುವು, ಅರ್ಧ ನೆರೆದ ಕೂದಲು, ಹೊಳೆಹೊಳೆಯುವ ಕಣ್ಣುಗಳು, ಅಂತರಂಗದ ಶುದ್ಧಿಯನ್ನು ಸೂಸುವ ಶುಭ್ರ ಮುಖಭಾವ, ಆತ್ಮಶ್ರೀಗೆ ಹೊಂಗಳಸವಿಟ್ಟಂತೆ ತೆಳ್ಳನೆಯ ಮೈ.

ಪೀಠದ ಮೇಲಿನ ಕಾಲಿಮಾ ವಿಗ್ರಹದ ಮುಂದೆ ಸಣ್ಣ ದೀಪ ಉರಿಯುತಿತ್ತು, ಅದರ ಬತ್ತಿಯ ಕುಡಿಯನ್ನು ಉದುರಿಸಿ ಬತ್ತಿಯನ್ನು ಮುಂದೆ ನೂಕಿ ಪ್ರಾರ್ಥನೆ ಸಲ್ಲಿಸಿದಳು ತಾರಾಭಗವತಿ. ಅನುದಿನದ ಬೆಳಗಿನ ಉಪಹಾರ ತಂಗಳನ್ನ ಮೊಸರು. ಒಮ್ಮೊಮ್ಮೆ ಅವಲಕ್ಕಿಯನ್ನು

ಬಳಸುವುದೂ ಉಂಟು. ಪ್ರಾರ್ಥನೆ ಮುಗಿಸಿ ಅಡುಗೆ ಮನೆಗೆ ಬಂದರೆ ಕುಳಿತು ಉಣ್ಣಲೂ ಮನಸ್ಸಾಗಲಿಲ್ಲ. ನಾಗಚಂದ್ರ ಮನೆಯಲ್ಲಿದ್ದಾಗ, ವಿಪುಲಚಂದ್ರ ಊರಿಗೆ ಮರಳಿದಾಗ ದಿನಚರಿ ಹಿತಕರವಾಗಿರುತ್ತಿತ್ತು. ಮೈಯಲ್ಲಿ ಚಟುವಟಿಕೆ ಉತ್ಸಾಹಗಳಿರುತ್ತಿದ್ದುವು. ಕೆಲಸ ಕಾರ್ಯಗಳ ಹಣಾಹಣಿಯಲ್ಲಿ ಏನೆನ್ನಿಸದಿದ್ದರೂ ಊಟಮಾಡುವಾಗ ಮನಸ್ಸು ಮಕ್ಕಳನ್ನು ನೆನೆಯುತಿತ್ತು. ಅಳಿದ ಪತಿಯನ್ನು ಧ್ಯಾನಿಸುತಿತ್ತು. ಆಗ...ಆಗ ಹೃದಯ ಸಂಪುಟ ನೋವಿನ ಗೂಡಾಗಿ, ಕಂಬನಿಗಳು ಹನಿಹನಿಯಾಗಿ ಉದುರುತಿದ್ದುವು.

ಊಟದ ಬಟ್ಟಲಿಗೆ ಕೈ ಹಚ್ಚುವಷ್ಟರಲ್ಲಿ ಜಗ್ಗು ಒಳಬಂದ.

"ಉಂಡೆಯಾ ಜಗ್ಗೂ ?"

"ಇಲ್ಲ ಮಾಯೀ"

"ಅದೇಕೆ ಇನ್ನೂ ಉಣಲಿಲ್ಲ ?"

"ಅನ್ನ ಹಳಸಿತು."

"ಬಾ ಇಲ್ಲೇ ಉಣ್ಣು."

ಹುಡುಗ ಒಳಗಡೆ ಕುಳಿತ. ಮಾಯಿ ಉಣಬಡಿಸಿದಳು. ಗಟ್ಟಿ ಮೊಸರು ಅನ್ನವನ್ನು ಉಂಡು ಕೈತೊಳೆಯುತ್ತಲೂ ಮಾಯಿ ಅಂದಳು.

"ಬಿಸಿಲು ಬಹಳವಾಗಿದೆ. ದನಕರುಗಳನ್ನು ನೆರಳಿನಲ್ಲಿ ಬಿಡು ಜಗ್ಗೂ."

"ನಿನ್ನೆಯೂ ನೆರಳಿನಲ್ಲೇ ಬಿಟ್ಟಿದ್ದೆ. ಇಂದೂ ಅಲ್ಲೇ ಬಿಡುನೆ ಮಾಯೀ !"

"ಪರೇಶ ಕಕ್ಕ ಮನೆಯಲ್ಲಿದ್ದಾರೇನೋ ?"

"ಇಲ್ಲ. ಅವರು ಹೊತ್ತು ಮೂಡುವ ಮುಂಚೆಯೇ ಎದ್ದು ಸೋನ್‌ಪುರಿಗೆ ಹೋಗಿದ್ದಾರೆ."

"ಬರುವುದೆಂದು ?"

"ಇಂದೇ....ಇಳಿ ಹೊತ್ತಾದ ಮೇಲೆ ಬರಬಹುದು."

"ಜಗ್ಗೂ ತಾಯಿ ಏನು ಮಾಡುತ್ತಿದ್ದಾರೆ ?"

"ಪಾತ್ರೆ ತೊಳೆಯುತ್ತಿದ್ದರು..." ಎನ್ನುತ್ತಾ ಹುಡುಗ ಅಂಗಳಕ್ಕೆ ಹಾರಿದ.

ಹಿಂದಿನಿಂದ ಕಣ್ಣುಗಳೆರಡು ಹಿಂಬಾಲಿಸಿದುವು. ಹುಡುಗ ಜಂಗನೆ ಚಿಗುರೆಯಂತೆ ಹಾರಿದ್ದ, ಇನ್ನೇನು ಮರಗಳಿಗೆಯಲ್ಲೇ ದನಕರುಗಳನ್ನು ಮೇಯಲು ಬಿಟ್ಟಿರುತ್ತಾನೆ. ಒಂದು ಕಾಲದಲ್ಲಿ ನಾಗಚಂದ್ರ ಹೀಗೇ ಇದ್ದ. ಈಗಿನ ಅವನ ರೀತಿಯೇ ಬೇರೆ. ಅದೊಂದು ಅದ್ಭುತ ಮಾರ್ಪಾಡು. ಹೇಗೆ ಹೀಗಾದ ? ಏನು ಕಾರಣ ?

ವಿಪುಲಚಂದ್ರ ಸೈನಿಕ ದಳಕ್ಕೆ ಸೇರುವಾಗ "ಮಾಯೀ, ನಮಗಿರುವ ಜಮೀನಿನಲ್ಲಿ ಎಲ್ಲರ ಜೀವನ ಸಾಗುವುದು ಕಷ್ಟ. ನಾನು ಹೊರಗಡೆ ಇದ್ದರೆ ನಾಗಚಂದ್ರನಿಗೆ ಕೈತುಂಬ ಕೆಲಸವಿರುತ್ತದೆ. ಇಲ್ಲೇ ಇದ್ದರೆ ನನಗೂ ಇಲ್ಲ. ಅವನಿಗೂ ಇಲ್ಲ. ನಾನಿರುವುದರಿಂದಲೇ ಅವನಿಗೆ ಅಷ್ಟು ಉದಾಸೀನ – ನೀವೇನೂ ಯೋಚಿಸಬೇಡಿ. ಬಿಡುವಿದ್ದಾಗಲೆಲ್ಲ ಬಂದು ಹೋಗುವೆ."

ತಮ್ಮನಿಗಾಗಿ ವಿಪುಲ ಮನೆ ಬಿಟ್ಟ. ಈಗ ನೋಡಿದರೆ ಅವನೂ ಇಲ್ಲ. ಇವನೂ ಇಲ್ಲ. ನನಗಾದರೂ ಏಕೆ ಬೇಕು ಈ ಬದುಕು ? ಒಹೋ.... ಎಂಥ ಕೆಲಸ ಮಾಡಿದೆ. ಅಂದು ಬುದ್ಧದೇವ ಬಂದಾಗ ನಾಗಚಂದ್ರನಿಗೆ ಬುದ್ಧಿ ಹೇಳಿ ಮನೆಗೆ ಹಚ್ಚಿರಿ ಎಂದು ಕೇಳಿಕೊಳ್ಳಲು ಮರೆತೇ ಬಿಡುವುದೆ ? ಮರೆತದ್ದಾದರೂ ಹೇಗೆ ? ಅದೇಕೆ ಯಾವ ಭಾವವೂ ನನ್ನ ಮನದಲ್ಲಿ ಸುಳಿಯಲಿಲ್ಲ ? ನಿರ್ಮಮಭಾವ ಮೂಡಿದುದಾದರೂ ಹೇಗೆ ? ಅದು ಬುದ್ಧದೇವನ ಪ್ರಭಾವವೇ ? ಏನಿದ್ದಿರಬಹುದು ? ಅವರೆಲ್ಲೇ ಇರಲಿ, ಹುಡುಕಿಕೊಂಡಾದರೂ ಹೋಗಿ ನನ್ನ ಕಷ್ಟ ಸುಖಗಳನ್ನು ನಿವೇದಿಸಿಕೊಳ್ಳ ಬೇಕೆಂಬುದು ನನ್ನ ಬಲು ದಿನಗಳ ಹಂಬಲವಾಗಿತ್ತು. ಆದರೂ ಮರೆತು ದೆಂದರೆ ಆಶ್ಚರ್ಯ ! ಅದರಲ್ಲೂ ಅವರು ತಾನಾಗಿ ಒಲಿದು ಬಂದಂತೆ ಬಂದು ದರ್ಶನವಿತ್ತಾಗಲೂ ನನಗೆ ಹೊಳೆಯಲಿಲ್ಲವೆಂದರೆ ಎಂತಹ ಆಶ್ಚರ್ಯ !

ನಿಜವಾಗಿಯೂ....!

ಈಗ ಎಲ್ಲಿದ್ದಾರೋ ? ಊರು ಸುತ್ತುತ್ತಾ ದೂರ ಹೋಗಿರಲಿಕ್ಕೂ ಸಾಕು. ಇನ್ನು ನನಗೆ ದರ್ಶನಲಾಭವುಂಟೇ ? ಕೈಗೆ ಬಂದ ತುತ್ತು

ಬಾಯಿಗೆ ಬರದಂತಾಯಿತಲ್ಲಾ, ನಾನೆಂತಹ ಅದೃಷ್ಟಹೀನೆ. ಇನ್ನೇನು ಮಾಡಲಿ ? ಹೇಗೆ ಅರಸಲಿ ? ಯಾರು ನನಗೆ ದಾರಿ ತೋರಿಯಾರು ?

ಓ—ಕಾಲಿಮಾ ! ನೀನೇ ನನಗೆ ದಾರಿ ತೋರು.

ಮರ್ಮರ ಮರುಗಿತು ಮನಸ್ಸು. ಒಡಲ ಸಂಕಟನೆಲ್ಲಾ ಕಂಬನಿಯಾಗಿ ಸೂಸಿತು. ಉಣ್ಣಲೂ ಮನಸ್ಸಾಗಲಿಲ್ಲ. ಅಡುಗೆ ಮಾಡಲೂ ಮನಸ್ಸಾಗಲಿಲ್ಲ. ಎಷ್ಟೇ ಪ್ರಯತ್ನಪಟ್ಟರೂ ಮನಸ್ಸನ್ನು ದೃಢಪಡಿಸಿಕೊಳ್ಳಲಾಗದೆ ತತ್ತರಿಸಿದಳು–ತಾರಾಭಗವತಿ.

ಪತಿ ಹೇಮಚಂದ್ರ ಅಳಿದಾಗ ಅವಳಿನ್ನೂ ಹದಿನೆಂಟರ ಮುಗುದೆ. ಆಗಲೇ ಎರಡು ಮಕ್ಕಳ ತಾಯಿ. ಅಂದಿನಿಂದ ಇಂದಿನವರೆಗೆ ಮಕ್ಕಳನ್ನು ನೇರ ಹಾದಿಗೆ ಹಚ್ಚಲು ಪಟ್ಟ ಶ್ರಮ ಚಿತ್ತಭಿತ್ತಿಯಲ್ಲಿ ಚಲನಚಿತ್ರದಂತೆ ಸುಳಿದಳಿಯಿತು, ನೇರ ಪಥಕ್ಕೆ ಹಚ್ಚಿದರೂ ತನಗೆ ದಕ್ಕಲಿಲ್ಲ ಎಂಬುದು ಮಹಾ ದುಃಖ. ನಾನಾದರೂ ಇನ್ನೇಕೆ ಶ್ರಮ ವಹಿಸಲಿ ಯಾರಿಗಾಗಿ ಮನೆ ಮಠ ನೋಡಿಕೊಳ್ಳಲಿ ನಾನೂ ಬುದ್ಧದೇವನ ಶಿಷ್ಯಳಾಗುವೆ, ನನಗಿನ್ನು ಯಾವ ಸಂಕಷ್ಟವೂ ಬೇಕಿಲ್ಲ. ಯಾವ ಸಂಪತ್ತೂ ಬೇಕಿಲ್ಲ,

ಹೇಮಚಂದ್ರ ಮರವನ್ನೇರಿ ಒಣಗಿದ ಕೊಂಬೆಯನ್ನು ಕತ್ತರಿಸುತ್ತಿದ್ದಾಗ ಕಾಲುಜಾರಿ ಕೆಳಗೆ ಬಿದ್ದು, ಸೊಂಟ ಮುರಿದು, ಹತ್ತು ದಿನಗಳ ಕಾಲ ನರಳಿ ಮರಣವನ್ನಪ್ಪಿದ್ದ. ಪತ್ನೀಪುತ್ರರನ್ನು ಬಿಟ್ಟು ಹೋಗಲಾರದೇ ಹೋಗುವಾಗ– "ದೇವೀ ಭಗವತಿ, ನಿನಗೆ ಕೊಡಬಾರದ ಕಷ್ಟ ಕೊಟ್ಟುದೂ ಅಲ್ಲದೆ ಮಕ್ಕಳ ಭಾರನ್ನೂ ಹೊರಿಸುತ್ತಿದ್ದೇನೆ, ಏನೇ ಬರಲಿ, ಧೃತಿಗೆಡದೆ ಬಂದದ್ದೆಲ್ಲ ಸಹಿಸಿಕೊಂಡು ಮಕ್ಕಳನ್ನು ಹಾದಿಗೆ ಹಚ್ಚು. ಅವರನ್ನು ಖಂಡಿತಾ ಕೈಬಿಡಬೇಡ. ನಮ್ಮ ವಂಶದ ಕುಡಿ ಮೊಳಕೆಯಲ್ಲೇ ನಲುಗಬಾರದು. ಏನೇ ಬರಲಿ ಧೃತಿಗೆಡದೆ ಮಕ್ಕಳನ್ನು ಹಾದಿಗೆ ಹಚ್ಚು, ನಮ್ಮ ವಂಶೋದ್ಧಾರಕ್ಕಾಗಿಯಾದರೂ ನೀನು ಬದುಕಲೇಬೇಕು ಭಗವತಿ."

"ನನಗಿನ್ನೇಕೆ ಬದುಕು ? ಮಕ್ಕಳನ್ನು ಯಾರಿಗಾದರೂ ಒಪ್ಪಿಸುವೆ, ಹುಟ್ಟಿಸಿದವ ಹುಲ್ಲು ಮೇಯಿಸುತ್ತಾನೆ."

'ಹಾ ! ಹಾಗೆನ್ನಬಾರದು. ಮಕ್ಕಳಿಗಾಗಿ ನೀನು, ನಿನಗಾಗಿ ಮಕ್ಕಳು, ಭಗವಂತನಿಂದ ಕರೆ ಬರುವವರೆಗೆ ನೀನು ಹೊರಡಬಾರದು. ಹಾಗೆಂದು ನನಗೆ ಭಾಷೆ ಕೊಡು."

ಹೇಮಚಂದ್ರ ಆತಂಕದಿಂದ ನೀಡಿದ ಕೈಗಳಿಗೆ ಕೈ ನೀಡಿ, ಭಾಷೆ ಕೊಡುವಾಗ ಎದೆ ತಲ್ಲಣಿಸಿತು. ಕಣ್ಣುಗಳಲ್ಲಿ ನೀರು ಕೋಡಿಗಟ್ಟಿ ಹರಿಯಿತು.

"ಜೀವನಕ್ಕೆ ಅಳುಕುವುದೇ ಭಗವತೀ ? ಜೀವನ ಯಾರಿಗಿಲ್ಲ ? ಭಾರತದಲ್ಲಿ ಹೆಣ್ಣು ಎಲೆಮರೆಯ ಕಾಯಿಯಾಗಿ ಜೀವಿಸುತ್ತಾಳೆ ನಿಜ. ಹಾಗೆಂದು ಅನುಗಾಲವೂ ಎಲೆಯನ್ನು ನೆಚ್ಚಿಕೊಂಡಿರಬಾರದು. ಪ್ರಬುದ್ಧ ಹೆಣ್ಣಿಗೆ ಹೇಳಿಕೊಡುವುದೇನಿದೆ ? ಏನೇ ಬರಲಿ, ಕರ್ತವ್ಯ ಪರಾಙ್ಮುಖಳಾಗಬೇಡ. ನಮ್ಮ ದೂರದ ಬಂಧು ಪರೇಶ ವಾರ್ಧಾದಲ್ಲಿದ್ದಾನೆ. ಅವನನ್ನು ಕರೆಸಿಕೊಂಡು ಮನೆಯ ಬಳಿ ಇಟ್ಟುಕೊಂಡರೆ ನಿನಗೆ ಹೆಚ್ಚು ತೊಂದರೆಯಾಗದು."

ಮನವೊಪ್ಪಿದರೂ ಹೃದಯವೊಪ್ಪದು. ತಾರಾಭಗವತಿ ಉಭಯ ಸಂಕಟಕ್ಕೊಳಗಾದಳು. ದುಃಖದ ನೆರೆಯುಕ್ಕಿತು.

"ಭಗವತೀ..."

"........."

"ಭಗವತೀ ಧೈರ್ಯಗೆಡಬೇಡ."

"........."

"ಚಿಂತೆ ಮಾಡಬೇಡ. ನಿನ್ನ ಭಾಗಕ್ಕೆ ದೇವರಿದ್ದಾನೆ."

"ಆ ದೇವರು ಎಲ್ಲಿದ್ದಾನೋ...?"

ಹೇಮಚಂದ್ರ ಕಣ್ಮುಚ್ಚಿದ ನಂತರ ಅದೇ ಒಂದು ಭಿಗ ಜಮಾನಿನಲ್ಲಿ ಜೀವನ ಸಾಗಿ ಬಂದಿತ್ತು. ಆಗಾಗ ಸಮಯ ಸಂದರ್ಭಗಳಲ್ಲಿ ರಾಕಾಚಂದ್ರ ಬಂದು ಹೋಗುತ್ತಿದ್ದ. ಅವಶ್ಯ ಬಿದ್ದಾಗ ತನ್ನ ಹೆಂಡತಿ ಬೃಂದಾವಲಿಯನ್ನು ಕಳುಹಿಸಿಕೊಡುತ್ತಿದ್ದ. ಇತರರ ಕೈ ಹೆಚ್ಚು ಹಾರೈಸದೆ ಜೀವನ ಸಾಗಿಸಿದ್ದಳು ತಾರಾಭಗವತಿ. ಪರೇಶ ಕಕ್ಕ ಬಂದು ನೆಲೆಸಿದ ಮೇಲೆ ಮನಸ್ಸಿಗೆ ಎಷ್ಟೋ ಹಿತ. ಆದರೂ...

ಚಿತ್ತಭಿತ್ತಿಯಲ್ಲಿ ಅಂದಿನ ಚಿತ್ರಣವೆಲ್ಲಾ ತೇಲಿ ನಲಿಯಿತು. ಹೇಮ ಚಂದ್ರನ ಆಶೋತ್ತರವನ್ನೀಡೇರಿಸಿದರೂ ಬಂದ ಭಾಗ್ಯವೇನು ? ಪ್ರಬುದ್ಧ ಮಾನರಾದ ಮಕ್ಕಳೆಲ್ಲೋ ತಾನೆಲ್ಲೋ. ತಾನೊಂದು ನೆನೆದರೆ ದೈವ ವೊಂದು ನೆನೆಯುತ್ತೆ.

ತುತ್ತು ನುಂಗುವಾಗಲೂ ಚಿತ್ತ ಎಲ್ಲೋ ಗತಕಾಲದಲ್ಲಿ ಅಂಡಲೆ ಯುತಿತ್ತು.

ವಿಪುಲಚಂದ್ರನಿಗೆ ಮದುವೆ ಮಾಡುವ ಎಂದರೆ ಅವನೂ ಕಾಲ ಪಕ್ವವಾಗುವ ಮೊದಲೇ ಸೈನಿಕ ದಳಕ್ಕೆ ಸೇರಿಕೊಂಡ. ಅವನಿಗೇನೋ ಬದುಕಿನಲ್ಲಿ ಆಸೆ ಇದೆ. ಕೈಯಲ್ಲಿ ನಾಲ್ಕು ಕಾಸು ಗಳಿಸಿಕೊಂಡರೆ ಹತ್ತಿರದಲ್ಲಿ ನಾಲ್ಕು ಭಿಗ ಜಮಿನು ಕೊಂಡುಕೊಂಡು ಸುಖವಾಗಿರಬಹು ದೆಂದು ಮನಸ್ಸು. ಆದರೆ, ಅದು ಯಾವಾಗಲೋ. ಅಲ್ಲಿಯವರೆಗೆ ತಾನೊಬ್ಬಳೇ ಹೇಗಿರಲಿ ? ನಾಗಚಂದ್ರ ಏಕೆ ಹೀಗಾದನೋ ದೇವರಿಗೇ ಗೊತ್ತು.

ಧಿಗ್, ಧಿಗ್, ಧಿಗ್, ಧಿಗ್.

ಪದಾಘಾತ ಕೇಳಿದೊಡನೆ ಮನಸ್ಸು ಯೋಚನೆಯಿಂದ ವಿಮುಖ ವಾಯಿತು. ಕಣ್ಣುಗಳು ಬಾಗಿಲ ಕಡೆಗೆ ಹೊರಳಿದುವು.

"ಮಾಯೀ !"

"ಓ....ರಾಕಾಚಂದ್ರ."

ತಲೆಬಾಗಿಲ ಬಳಿ ಕೇಳಿ ಬಂದ ಪಾದ ಸಪ್ಪಳ ಬರಬರುತ್ತಾ ಸನಿಹಕ್ಕೆ ತಂದಿತು. ಮರುಕ್ಷಣದಲ್ಲಿ ರಾಕಾಚಂದ್ರ ಮೈದೋರಿದ. ಅವನನ್ನು ನೋಡುತ್ತಲೂ ಮುಖ ಅರಳಿತು, ತುಟಿಗಳು ಬಿರಿದುವು.

"ಮಾಯೀ !"

"ಬಾಪ್ಪಾ, ಕೂಡು,"

"ನೀವು ಊಟ ಮಾಡಿರಿ,"

"ಇರಲಿ, ಬಾ ಕೂಡು-"

ರಾಕಾಚಂದ್ರ ಒಳಬಂದು ಕುಳಿತ. ನೋಟ ಸುತ್ತಲೂ ಹೊರಳಿತು. ಮನೆಯೆಲ್ಲಾ ಬಣಬಣ. ಒಳಗೆಲ್ಲೂ ನಾಗಚಂದ್ರನ ಸುಳಿವಿಲ್ಲ. ಎಳ್ಳು ಬೀರಿದರೂ ಕೇಳಿಸುವಂತಹ ನಿಶ್ಶಬ್ದ. ಶೀತಲ ಶಾಂತಿ.

"ನಾಗಚಂದ್ರ ಬರಲಿಲ್ಲವೇ ಮಾಯಿ ?"

"ಇಲ್ಲ ರಾಕೂ..."

ಊಟವನ್ನು ಅಷ್ಟಕ್ಕೇ ಬಿಟ್ಟಿದ್ದಳು ತಾರಾಭಗವತಿ.

"ನಿಮ್ಮ ಊಟ ತಣ್ಣಗಾಗುತ್ತಿದೆ, ಎದ್ದಿರೇಕೆ ?"

ಕಣ್ಣುಗಳನ್ನು ತೀಡಿಕೊಂಡು ದುಃಖಮಿಶ್ರಿತ ದನಿಯಲ್ಲಿ – "ಆಗಲಿ, ಪರವಾಯಿಲ್ಲ, ನೀನೂ ನನ್ನ ಜೊತೆ ಒಂದಿಷ್ಟು ಅವಲಕ್ಕಿ ಮೊಸರು ತೆಗೆದುಕೊ."

ಅವನು ಬೇಡವೆನ್ನುವುದರೊಳಗಾಗಿ ಅವಳು ಕೈತೊಳೆದುಕೊಂಡು ತಟ್ಟೆಯನ್ನಿಟ್ಟಳು. ಅವನು ಹೊರಹೋಗಿ ಕೈಕಾಲು ತೊಳೆದುಕೊಂಡು ಬಂದು ಕುಳಿತುಕೊಂಡ. ಹಸನಾದ ಅವಲಕ್ಕಿ ಮೊಸರನ್ನು ಮುಂದೆ ಇಟ್ಟಳು ತಾರಾಭಗವತಿ, ಇಬ್ಬರ ಊಟವೂ ಸಾಗಿತು.

"ಈ ಸಲ ಗೋಧಿ ಬೆಳೆ ಬಹಳ ಹುಲಸಾಗಿ ಬಂದಿದೆ,"

ತಾರಾಭಗವತಿ ಮಾತಾಡಲಿಲ್ಲ. ಎಲ್ಲಾ ಯಾರಿಗಾಗಿ ಎಂದು ಚಿಂತಿಸಿತು ಮನಸ್ಸು. ಕಣ್ಣುಗಳಂಚಿನಲ್ಲಿ ಪುನಃ ಬೆಳ್ಳಿಯ ಗೆರೆಯಂತೆ ನೀರಾಡಿತು. ತಟ್ಟೆಯಲ್ಲಿ ಬೆರಳಾಡಿಸುತ್ತಾ "ಬಿಂದಿ ಚೆನ್ನಾಗಿದ್ದಾಳೆಯೆ ? ಮಕ್ಕಳು ಕ್ಷೇಮವೇ ?"

'ಹ್ಞೂ—ಮಾಯಿ," ಒಂದು ಗಳಿಗೆ ಯೋಚಿಸಿ "ಏಕೆ ವ್ಯಸನ ಪಡುತ್ತೀರಿ ? ನಾನೆಲ್ಲ ಸರಿಪಡಿಸುವೆ."

"ಆಳೆತ್ತರಕ್ಕೆ ಬೆಳೆದ ಮಕ್ಕಳನ್ನು ಯಾರು ತಾನೆ ಸರಿಪಡಿಸಿಯಾರು ರಾಕೂ ?"

"ದೇವರಿದ್ದಾನೆ—ಯೋಚಿಸಬೇಡಿ,"

"ಅವನಿದ್ದಿದ್ದರೆ ನನ್ನ ಮೊರೆ ಅವನಿಗೆ ಮುಟ್ಟದಿರುತ್ತಿರಲಿಲ್ಲ, ಇದ್ದರೂ ಬಹುಶಃ ಕಿವುಡಾಗಿದ್ದಿರಲಿಕ್ಕೂ ಸಾಕು,"

ತಾರಾಭಗವತಿ ಯಾಂತ್ರಿಕವಾಗಿ ತುತ್ತು ನುಂಗಿದಳು. ಒಂದು ವೇಳೆ ದೇವರಿದ್ದರೂ ಜಗತ್ತಿನ ನಿಯಂತ್ರಣದಲ್ಲಿ ದಣಿದು ನಿದ್ದೆ ಹೋಗಿರಲಿಕ್ಕೂ ಸಾಕು ಎಂದು ಚಿಂತಿಸಿತು ಮನಸ್ಸು. ಏನೋ ಹೇಳಲು ಬಯಸಿ "ರಾಕೂ..." ಎಂದಳು ಮಾತು ಮುಂದೆ ಹೊರಡಲಿಲ್ಲ.

"ನೀವು ಮನಸ್ಸಿಗೆ ಬಹಳ ಹಚ್ಚಿಕೊಳ್ಳುತ್ತೀರಿ."

"ಏನು ಮಾಡಲಿ, ಹೇಳು ? ಹೇಗೆ ಕಾಲಹರಣ ಮಾಡಲಿ ?"

"ಯಾರು ನಿಮ್ಮ ಬಗ್ಗೆ ಚಿಂತಿಸುವುದಿಲ್ಲವೋ ಅವರ ಬಗ್ಗೆ ನೀವು ಚಿಂತಿಸುವುದೇಕೆ ?"

"......."

ಒಂದೆರಡು ಗಳಿಗೆ ಯೋಚಿಸಿದಳು ತಾರಾಭಗವತಿ. ಅದೇನೋ ಸರಿಯೆ ಎಂದು ಒಪ್ಪಿಕೊಂಡಿತು ಮನಸ್ಸು. ಹೃದಯ ಕಲ್ಲು ಹೊತ್ತಷ್ಟು ಭಾರವಾಯಿತು. ಬಸಿ ಬಟ್ಟಲುಗಳನ್ನು ಕೊಂಡೊಯ್ದು ತೊಳೆದಿಟ್ಟು ಒಳಬಂದಳು. ರಾಕಾಚಂದ್ರ ನಡುಮನೆಯಲ್ಲಿ ಅಡ್ಡಾಡುತಿದ್ದ. ಒಲೆಯುರಿ ಸುವುದರೊಳಗಾಗಿ ಜಗ್ಗೂ ತಲೆಬಾಗಿಲಲ್ಲಿ ನಿಂತು ಕರೆದ,

"ಮಾಯೀ !"

ರಾಕಾಚಂದ್ರ ಅಲ್ಲಿಂದಲೇ ಕೇಳಿದ "ಏನಪ್ಪಾ, ಜಗ್ಗೂ."

"ಬಿಸಿಲು ಬಹಳ ಸುಡುತ್ತಿದೆ ಹಸುವನ್ನು ಈಗಲೇ ಒಳಗೆ ಕಟ್ಟಲೇ"

"ಆಗಲಿ, ಕಟ್ಟು."

ಜಗ್ಗೂ ಹೆಜ್ಜೆ ತೆಗೆದ.

"ಪರೇಶ ಕಕ್ಕ ಹೇಗಿದ್ದಾರೆ ಜಗ್ಗೂ !"

"ಚೆನ್ನಾಗಿದ್ದಾರೆ."

"ಜಗ್ಗೂ ತಾಯಿ "

"ಚೆನ್ನಾಗಿದ್ದಾರೆ." ಹೇಳು ಹೇಳುತ್ತಲೇ ಕಣ್ಮರೆಯಾದ ಜಗ್ಗೂ.

ತಾರಾಭಗವತಿ ಒಲೆಯ ಮೇಲೆ ನೀರಿಟ್ಟು ಅಲ್ಲಿಗೆ ಬರುತ್ತಲೂ ಇಬ್ಬರೂ ಕುಳಿತುಕೊಂಡರು. ಬುದ್ಧದೇವ ಮನೆಗೆ ಬಂದು ಹೋದು ದನ್ನು ಸಾಂಗೋಪಾಂಗವಾಗಿ ತಿಳಿಸಿ "ಬಹಳ ದಿನಗಳಿಂದಲೂ ಬುದ್ಧ ದೇವ ನನ್ನು ಕಂಡು ನಮ್ಮ ಸ್ಥಿತಿಗತಿಯನ್ನು ತಿಳಿಸಿ ಅವರಿಂದ ನಾಗಚಂದ್ರನಿಗೆ ನಾಲ್ಕು ಮಾತು ಹೇಳಿಸಿ ಅವನನ್ನು ದಾರಿಗೆ ಹಚ್ಚಬೇಕು ಎಂದುಕೊಂಡಿದ್ದೆ. ಆದರೆ ಅಕ್ಷತೆಯಿಟ್ಟು ಕರೆದಂತೆ ಅವರೇ ಮನೆಗೆ ಬಂದಾಗ ಮರೆತು ಹೋಗ ಬೇಕೆ ಬಹಳ ಆಶ್ಚರ್ಯ—ಅದ್ಹೇಗೆ ಮರೆತುಬಿಟ್ಟೆನೋ ದೇವರಿಗೇ ಗೊತ್ತು."

ರಾಕಾಚಂದ್ರ ಮಾತಾಡದೆ ಮುಗುಳು ನಕ್ಕ.

"ಈ ಮಕ್ಕಳಿಂದ ನಾವು ನಿರೀಕ್ಷೆ ಮಾಡಿದ್ದೇನೋ—ಆದದ್ದೇನೋ!"

"ಮುಂದೆ ಸರಿ ಹೋದಾರು."

"ನಾಗು ಮನಸ್ಸಾದರೂ ಏನು ರಾಕೂ?"

"ಅವನು ನನ್ನ ಬಳಿಯೂ ಮನಬಿಚ್ಚಿ ಹೇಳುವುದಿಲ್ಲ."

"ಈಚೀಚೆಗಂತೂ ಏನೋ ಒಂದು ರೀತಿ. ಮಂಕೋ, ಭ್ರಾಂತೋ ಏನೋ ಅರ್ಥವಾಗುವುದಿಲ್ಲ."

"ನನಗೂ ಅದೇ ಸಮಸ್ಯೆ ಮಾಯೀ."

"ಮದುವೆಯಾಗಿ, ಸುಖವಾಗಿ ಮನೆಯಲ್ಲಿರಬೇಕಾದ ಮಗ ಕಾಡು ಮೇಡುಗಳಲ್ಲಿ ಅಲೆಯುವುದೆಂದರೆ...ಏನಾಗಿರಬಹುದು. ?"

"ಅದೇ ಆಶ್ಚರ್ಯ...."

"ಹೇಗಾದರೂ ಅವನನ್ನು ದಾರಿಗೆ ಹಚ್ಚು ರಾಕೂ."

"ಮನೆಯಲ್ಲಿ ಸುಖವಾಗಿರಬಹುದಾಗಿತ್ತು. ಯಾವ ತೊಂದರೆಯೂ ಇರಲಿಲ್ಲ."

"ನನಗಂತೂ ಹೇಳಿ ಕೇಳಿ ಸಾಕಾಗಿದೆ. ಹುಡುಗ ಮಾತುಕತೆಯಲ್ಲಿ ಬಹಳ ಹಿತಮಿತ. ಮನದಲ್ಲಿ ಏನಿದೆ ಎಂಬುದನ್ನು ಪತ್ತೆ ಹಚ್ಚುವುದೇ ಕಷ್ಟ."

"ನಿಜ."

"ಛೀ! ಹುಡುಗ ಹೀಗಾದುದು ತುಂಬ ಆಶ್ಚರ್ಯ."

"ಪರೇಶಕಕ್ಕ ಅನ್ನುವುದೇ ಬೇರೆ. ಅವರಿಗೆ ಭೂತ-ಬೇತಾಳಗಳ ಶಂಕೆಯೇ ಹೆಚ್ಚು."

ಉಕ್ಕಿ ಬಂದ ಕಂಬನಿಯನ್ನು ತೀಡಿಕೊಂಡಳು ತಾರಾಭಗವತಿ.

"ಚಿಂತಿಸಬೇಡಿ, ಎಲ್ಲಿದ್ದಾನೋ ನೋಡಿ ಹುಡುಕಿಕೊಂಡು ಬಂದು ಕಟ್ಟುನಿಟ್ಟಾಗಿ ನಾಲ್ಕು ಮಾತು ಹೇಳಿದರಾಯಿತು. ನಾಗು ಉಡಾಫೆಯ ಹುಡುಗನಲ್ಲ. ಕೇಳಿದರೂ ಕೇಳಬಹುದು."

ನನ್ನ ಕೊನೆಯ ದಿನಗಳನ್ನು ನಿಶ್ಚಿಂತೆಯಿಂದ ಕಳೆಯಬೇಕೆಂಬ ಅಭಿಲಾಷೆಯಿತ್ತು."

"ಆಗಲಿ, ಆ ಅಭಿಲಾಷೆಯನ್ನು ಈಗಲೇ ಏಕೆ ಬಿಟ್ಟುಕೊಡಬೇಕು ? ನಾಗು, ವಿಪುಲರು ಹಿಂದಿರುಗಲಾರರೇನು ?"

"ಏನೋ...." ಇನ್ನೂ ಹೇಳುವುದಿತ್ತು, ಗಂಟಲು ಗದ್ಗದಿತವಾದುದರಿಂದ ಮಾತು ಹೊರಡಲಿಲ್ಲ. ಸ್ವಲ್ಪ ಹೊತ್ತು ಮೌನವಾವರಿಸಿತು. ಮುಂದೇನು ? ಎಂಬುದನ್ನು ಇಬ್ಬರ ಮನಸ್ಸೂ ಚಿಂತಿಸಿತು. ಯೋಚನೆಯ ಮಂಪರದಲ್ಲಿ ಗೋಡೆಗಾಂತು ಕುಳಿತಿದ್ದ ತಾರಾಭಗವತಿಯ ನೋಟ ಅಡುಗೆಯ ಮನೆಯ ಕಡೆ ಹೊರಳಿತು. ಹೊತ್ತುಏರತೊಡಗಿದ್ದರೂ ಅಡಿಗೆಗಿಟ್ಟಿರಲಿಲ್ಲ.

"ಅಡುಗೆಗಿಟ್ಟು ಬರುವೆ ರಾಕೂ" ಎಂದ ತಾರಾಭಗವತಿ ಉತ್ತರಕ್ಕೂ ನಿರೀಕ್ಷಿಸದೆ ಎದ್ದು ಒಳಹೋದಳು. ಬಹುಶಃ ರಾಕಾಚಂದ್ರನಿಲ್ಲದೆ ಹೋಗಿದ್ದರೆ ಅಡುಗೆ ಮಾಡುವ ಯೋಚನೆಯೂ ಮಾಡುತ್ತಿರಲಿಲ್ಲವೇನೋ.

ರಾಕಾಚಂದ್ರ ಸ್ವಲ್ಪ ಹೊತ್ತು ಹಾಗೇ ಕುಳಿತ.

ರಾಕಾಚಂದ್ರನ ತಂದೆ ತಾರಾಚರಣನಿಗೆ ತಾರಾಭಗವತಿ ಒಬ್ಬಳೇ ತಂಗಿ. ಅಣ್ಣ ತಂಗಿಯರ ಸಂಸಾರ ಮೂರು-ನಾಲ್ಕು ಮೈಲಿಗಳ ಅಂತರದಲ್ಲಿದ್ದರೂ ಹಾಸುಹೊಕ್ಕಾಗಿ ಹೆಣೆದುಕೊಂಡಿತ್ತು. ರಾಕಾಚಂದ್ರ ನಾಗು ವಿಪುಲರೊಡನೆ ಗುರುಕುಲದಲ್ಲಿ ಮಾತ್ರವಲ್ಲ, ಮನೆಯಲ್ಲೂ ಕೂಡಿ ಅಡಿ ಬೆಳೆದಿದ್ದ. ಈಚೆಗೆ ತನ್ನ ತಂದೆ ಸತ್ತಮೇಲೂ ಸೋದರತ್ತೆಯ ಸಂಬಂಧ ಹಿಂದಿನಂತೆಯೇ ಚಿಗುರೊಡೆಯುತಿತ್ತು. ವಿಪುಲಚಂದ್ರ ತಾನು ಸೈನಿಕ ದಳಕ್ಕೆ ಸೇರಿಕೊಳ್ಳುವುದಾಗಿ ಕೇಳಿದಾಗ ರಾಕಾಚಂದ್ರ ಮೊದಲು ನಿಷೇಧಿಸಿದರೂ ಅನಂತರ ಒಪ್ಪಿಕೊಂಡಿದ್ದ. ಹೋಗಿ ನಾಲ್ಕು ಕಾಸು ಗಳಿಸಿಕೊಂಡು ಬರಲಿ ಎಂಬ ಆಸೆ ಸಮಾಧಾನಗಳು ಉತ್ತೇಜನ ನೀಡಿದ್ದುವು. ಆದರೆ ಇದೇಕೋ ತೊಂದರೆಗಿಟ್ಟುಕೊಂಡಿತು. ಆಗೆಲ್ಲಾ ಸರಿಯಾಗಿದ್ದ ನಾಗಚಂದ್ರನಿಗೆ ಈಗೇನು ಬಂದಿದೆ ?

ಯೋಚನೆಯ ಮಂಪರದಲ್ಲೇ ಹೊತ್ತು ಉರುಳಿತು. ಆತುರಾತುರವಾಗಿ ಅಡುಗೆ ಮುಗಿಸಿ ಹೊರಬಂದ ಮಾಯಿಯನ್ನು ಕಾಣುತ್ತಲೂ ಅಂಗಳದಲ್ಲಿ ಪದಚಾರಣ ಮಾಡುತ್ತಿದ್ದ ರಾಕಾಚಂದ್ರ ನಗುಮುಖದಿಂದ ಕೇಳಿದ.

"ಆಯಿತೇ ಮಾಯೀ ?"

"ಹೆಚ್ಚೇನೂ ಮಾಡಲಿಲ್ಲ, ಅನ್ನ ಹುಳಿ."

"ಸಾಕು, ಬೇಕಷ್ಟಾಯಿತು."

"ಬಿಂದಿ ನಿಮ್ಮನ್ನು ಕರೆತರಲು ಹೇಳಿದ್ದಾಳೆ. ಮೂರು-ನಾಲ್ಕು ದಿನ ಇದ್ದು ಬರಬಹುದು. ಹೊಲದ ಕಡೆ ಹೇಗೂ ಕೆಲಸವಿಲ್ಲ. ಪರೇಶ ಕಕ್ಕನಿಗೆ ಹೇಳಿ ಹೋದರಾಯಿತು. ನಾಗಚಂದ್ರ ಬಂದರೆ ಅಲ್ಲಿಗೆ ಬರು ವಂತೆ ಹೇಳಿ ಹೋಗೋಣ."

ತಾರಾಭಗವತಿ ಒಂದು ಗಳಿಗೆ ನಿಂತು ಯೋಚಿಸಿದಳು. ಇಲ್ಲಿ ಒಬ್ಬಳೇ ತೊಳಲುವುದಕ್ಕಿಂತ ಅಲ್ಲಿಗೆ ಹೋಗಿ ನಾಲ್ಕು ಇದ್ದು ಬಂದರೂ ಕ್ಷೇಮ ಎನ್ನಿಸಿತು. ಬಿಂದಿಯನ್ನು ನೋಡಿಯೂ ನಾಲ್ಕಾರು ತಿಂಗಳು ಕಳೆದಿತ್ತು. ಕೇವಲ ನಾಲ್ಕಾರು ಮೈಲಿಯಂತರದ ಊರಿಗೆ ಹೋಗಿ ಬರಲು ಅಷ್ಟೇಕೆ ಯೋಚನೆ ? ಹೋಗಿಯೇ ಬರೋಣ......

"ಏಕಷ್ಟು ಯೋಚನೆ ಮಾಯಿ ?"

"ನಾಗು ಬಂದಾನೇನೋ ಎಂಬ ಯೋಚನೆ."

"ಪರೇಶ ಕಕ್ಕನಿಗೆ ಹೇಳಿದರೆ ಆಯಿತಲ್ಲ."

ತಾರಾಭಗವತಿ ಮೌನವಾಗಿ ಸಮ್ಮತಿ ಸೂಚಿಸಿದಳು.

o o o o

ವಿಪುಲಚಂದ್ರ ಮೂರು ದಿನಗಳ ರಜೆ ಪಡೆದುಕೊಂಡು ಮನೆಗೆ ಮರಳಿದಾಗ ಮನೆ ರುದ್ರಮೌನ ತಳೆದಿತ್ತು. ಬಂದವನೇ ಒಳಗೆಲ್ಲಾ ಒಂದು ಸುತ್ತು ಹಾಕಿದ. ಎಲ್ಲೆಡೆಯೂ ಬಣಬಣ ಎನ್ನುತ್ತಿದೆ. ಜೋಡಿಸಿಟ್ಟ ವಸ್ತುವಸ್ತುಗಳೂ ಯಥಾ ರೀತಿ ಇವೆ. ಜಗಲಿಯಲ್ಲಿ ಜಗ್ಗು ಮಲಗಿ ನಿದ್ದೆ ಹೊಡೆಯುತ್ತಿದ್ದ. ಪಾದ ಸಪ್ಪಳ ಕೇಳಿ ಎಚ್ಚರವಾಗಿ ಇತ್ತಲೇ ನಿರಿನಿರಿ ನಿಟ್ಟಿಸಿದ. ಅತೀ ನಿದ್ದೆಯಲ್ಲಿ ಯಾರೆಂಬುದು ಹೊಳೆಯದಣು. ವಿಪುಲಚಂದ್ರ ನಸುನಕ್ಕು "ಜಗ್ಗೂ ! ಇದೇನು ಈ ಹೊತ್ತಿನಲ್ಲಿ ನಿದ್ದೆ ?"

"ಞ...ಞ...!"

"ಜಗ್ಗೂ ಏಳು, ಏಳು !"

ಜಗ್ಗು ಎದ್ದು ಕುಳಿತ.

"ಮಾಯಿ ಎಲ್ಲಿ ಜಗ್ಗೂ ?"

"ಅವರಿಲ್ಲ." ಮೈ ಕೈ ನುಲಿಯುತ್ತಾ ನುಡಿದ ಜಗ್ಗೂ.

"ಮಾಯಿ ಇಲ್ಲವೇ ? ನಿನ್ನಗಿನ್ನೂ ನಿದ್ದೆ ಹರಿಯಲಿಲ್ಲವೇ ?"

"ಇಲ್ಲ ಬಾಬಾ. ಅವರು ಫೂಲ್‌ಪುರಕ್ಕೆ ಹೋಗಿದ್ದಾರೆ."

"ಓಹೋ ! ನಾಗು ಎಲ್ಲಿ ?"

"ಬರಲಿಲ್ಲ."

"ಹೋಗಿ ಎಷ್ಟು ದಿನಗಳಾದವು ?"

"ತಿಂಗಳ ಮೇಲಾಯಿತು ಬಾಬಾ."

"ಪರೇಶ ಕಕ್ಕ ಇದ್ದಾರೇನು ?"

"ಇದ್ದಾರೆ."

ವಿಪುಲಚಂದ್ರ ಮನೆಯ ಪಕ್ಕದಲ್ಲಿದ್ದ ಪರೇಶ ಕಕ್ಕನ ಮನೆಗೆ ಹೋದ. ಅವನು ಅದೇ ತಾನೇ ಸ್ನಾನಮಾಡಿ ಹೊರಬಂದಿದ್ದ. ಅವನಿಂದ ಎಲ್ಲವನ್ನೂ ತಿಳಿದುಕೊಂಡು ಫೂಲ್‌ಪುರಕ್ಕೆ ಹೊರಡುವುದಾಗಿ ಹೇಳಿ ಕೈಕಾಲು ತೊಳೆದು, ಮುಖ ಮಜ್ಜನ ಮಾಡುವಷ್ಟರಲ್ಲಿ ಜಗ್ಗೂ ತಾಯಿ ಹಾಲು, ಹಣ್ಣು, ತಿಂಡಿಗಳನ್ನು ತಂದು ಮುಂದಿಟ್ಟಳು. ಸ್ನಾನ ಮಾಡುವ ಯೋಚನೆಯೂ ಇತ್ತು. ಆದರೆ ಇನ್ನೂ ಮೂರು ಮೈಲಿಯ ಪಯಣವಿದ್ದುದರಿಂದ ಸ್ನಾನದ ಯೋಚನೆ ಬಿಟ್ಟು ಕುದುರೆಗೆ ಹುಲ್ಲು, ನೀರು ಕೊಟ್ಟು ಮೈಯುಜ್ಜಿ ಅರ್ಧ ತಾಸು ದಣಿವಾರಿಸಿಕೊಂಡು ಫೂಲ್ ಪುರಕ್ಕಭಿಮುಖವಾಗಿ ಹೊರಟ. ದಣಿವಾರಿಸಿಕೊಂಡ ಕುದುರೆ ಪುನರ್ ಚೇತನಗೊಂಡಿತ್ತು. ಮೂರು ಮೈಲಿಯ ಹಾದಿ ಗೊತ್ತು ಗುರಿಯಿಲ್ಲದೆ ಕರಗಿತು. ಸೂರ್ಯ ಪಡುವಣ ಮಟ್ಟಿಗೆ ಇಳಿಯುವುದರೊಳಗೆ ಫೂಲ್‌ಪುರ ಸೇರಿದ ವಿಪುಲಚಂದ್ರ.

ಫೂಲ್‌ಪುರದ ಓಣಿಯೊಂದರಲ್ಲಿ ರಾಕಾಚಂದ್ರನ ಹಳೆ ನಮೂನೆಯ ನಾಡು ಹೆಂಚಿನ ತೊಟ್ಟಿ ಮನೆ. ನಾಗದತ್ತ ಮಹಾಶಯನಿಗೆ ತಾರಾಚರಣ, ತಾರಾಭಗವತಿಯರಿಬ್ಬರೆ ಮಕ್ಕಳು. ಮಕ್ಕಳನ್ನು ಸೋದರ ಸಂಬಂಧದ ಹೇಮಚಂದ್ರನಿಗೆ ಕೊಟ್ಟು ಮದುವೆ ಮಾಡಿದ್ದ. ನಾಗದತ್ತನಿಗೆ ಒಂದು ಭಿಗ ಜಮೀನೂ ಇರಲಿಲ್ಲ. ಅವನ ಜೀವನ ಗುರುಕುಲದ ಮುಖೇನ

ನಡೆಯುತ್ತಿತ್ತು. ಶಾಲೆಗಳಿಲ್ಲದ ಆ ಕಾಲದಲ್ಲಿ ಕಲಿಯುವವರು ಮನೆಗೆ ಬಂದು ಪಾಠ ಹೇಳಿಸಿಕೊಳ್ಳುತ್ತಿದ್ದರು. ಗುರುಕುಲ ಹಗಲಿರುಳೂ ನಡೆಯುತ್ತಿತ್ತು. ಮಧ್ಯರಾತ್ರಿಯವರೆಗೆ ನಿರಾಯಾಸವಾಗಿ ಪಾಠ ಹೇಳುತ್ತಿದ್ದ. ಗುರುಕಾಣಿಕೆಯು ಕೈತುಂಬ ಬರುತ್ತಿದ್ದುದರಿಂದ ಜೀವನ ನೆಮ್ಮದಿಯಿಂದಿತ್ತು. ತಾರಾಚರಣನ ಕಾಲಕ್ಕೆ ನಾಲ್ಕಾರು ಭಿಗ ಜಮೀನು ಗುರುಕಾಣಿಕೆಯಾಗಿ–ಉಂಬಳಿಯಾಗಿ ಬಂದಿತ್ತು. ತಾರಾಚರಣ ಭೂಮಿಯ ಒಡೆಯನಾದ. ಹಿರಿಯರ ಮರಣಾನಂತರ ರಾಕಾಚಂದ್ರ ಯಜಮಾನಿಕೆಯ ಗದ್ದುಗೆಯನ್ನೇರಿ ನಶಿಸಿದ ಗುರುಕುಲವನ್ನು ಸಂವೃದ್ಧಿಗೊಳಿಸಿದ. ತಾರಾಚರಣನ ಕಾಲದಲ್ಲಿ ಕುರುಡುತ್ತಾ ಕುಂಟುತ್ತಾ ನಡೆದಿದ್ದು ಒಂದು ಕಾಲಕ್ಕೆ ನಿಂತುಹೋಗಿದ್ದ ಗುರುಕುಲ ಮತ್ತೆ ತಲೆಯೆತ್ತಿತ್ತು. ತಾರಾಚರಣ ಮರಣಶಯ್ಯೆಯಲ್ಲಿದ್ದಾಗ ರಾಕಾಚಂದ್ರನಿಗೆ ತಂಗಿಯನ್ನು ವಿಚಾರಿಸಿಕೊಳ್ಳಲು ಬಹಳವಾಗಿ ಹೇಳಿದ್ದ. ಅದರಂತೆಯೇ ತಂದೆಯ ಕಾಲದಿಂದ ಸೋದರಳಿಯನ ಕಾಲದವರೆಗೆ ತೌರುಮನೆಯವರ ಸಹಾಯ ಹಸ್ತವಿದ್ದುದರಿಂದ ತಾರಾಭಗವತಿಯು ಬಾಲವಿಧವೆಯಾದರೂ ಚೇತರಿಸಿಕೊಂಡಿದ್ದಳು.

ವಿಪುಲಚಂದ್ರ ಕುದುರೆಯನ್ನು ಮೇಯಲು ಬಿಟ್ಟು ಜೀನು ಕಳಚಿ ತೆಗೆದುಕೊಂಡು ಒಳಬಂದಾಗ ಗುರುಕುಲ ನಡೆಯುತ್ತಿತ್ತು. ರಾಕಾಚಂದ್ರ ಅಲ್ಲಿಂದಲೇ ಹುಬ್ಬೇರಿಸಿದ. "ಓ....ಬಹಳ ದಿನಗಳಾಗಿತ್ತು ನಿನ್ನನ್ನು ನೋಡಿ. ಮಾಯಿ ಇದ್ದಾರಂತಲೇ ಈ ಕಡೆ ಬಂದೆ. ಇಲ್ಲದಿದ್ದರೆ ಹಾಗಿಂದ್ಹಾಗೇ ಹೊರಟುಬಿಡುತ್ತಿದ್ದೆ ಅಲ್ಲವೇ ?"

"ಇಲ್ಲಪ್ಪಾ, ಈ ಸಲ ಇಲ್ಲಿಯವರೆವಿಗೂ ಬಂದು ಹೋಗುವ ಯೋಚನೆ ಇತ್ತು."

"ಆಗಲಿ, ಬಾ. ಅಷ್ಟು ಜ್ಞಾಪಕವಿಟ್ಟುಕೊಂಡರೆ ಬೇಕಾದಷ್ಟಾಯಿತು."

"ಓ...ಹೋ...ಹೋ ! ನಾನು ಅಷ್ಟೊಂದು..."

ಮಾತು ಮುಂದುವರಿಯಗೊಡದಂತೆ ರಾಕಾಚಂದ್ರ ನಡುವೆ ಬಾಯಿ ಹಾಕಿದ.

"ಹೋಗಲಿ ಬಿಡು. ಬಹಳ ದೂರದ ಪಯಣದಿಂದ ದಣಿದಿದ್ದಿ. ಸ್ವಲ್ಪ ಸುಧಾರಿಸಿಕೋ." ನಗು ನಗುತ್ತಾ ನುಡಿದ ರಾಕಾಚಂದ್ರ.

ತಾರಾಭಗವತಿ ಬೃಂದಾವಲಿ ಹೊರಗಡೆ ಬಂದರು. ಪರಸ್ಪರ ದರ್ಶನ ಲಾಭದಿಂದ ತಾಯಿ ಮಕ್ಕಳ ಮುಖ ಹೂವಿನಂತರಳಿತು. ಇನ್ನೊಂದರ್ಧ ತಾಸಿನಲ್ಲಿ ಪರಸ್ಪರ ಕ್ಷೇಮ ಸಮಾಚಾರಗಳೂ ಮುಗಿದುವು.

"ಮೊದಲು ನಾನೊಂದಿಷ್ಟು ಜಳಕ ಮಾಡುವುದಿದೆ ಬಿಂದಿಮಾ !"

"ಆಗಲಿ ಮಾಡಪ್ಪಾ."

ರಾಕಾಚಂದ್ರನ ಪಂಚೆಯನ್ನೂ ಮೇಲಂಗಿಯನ್ನೂ ತಂದು ಮುಂದೆ ಹಿಡಿದಳು ಬೃಂದಾವಲಿ. ವಿಪುಲಚಂದ್ರ ಧಳಧಳ ತಣ್ಣೀರು ಸುರಿದು ಜಳಕಮಾಡಿ ದಣಿವಾರಿಸಿಕೊಂಡು ಬಂದ. ಬರುವಷ್ಟರಲ್ಲಿ ತಿಂಡಿ ತಿನಿಸುಗಳೊಂದಿಗೆ ತಣ್ಣನೆಯ ಪಾನೀಯವೂ ಅಣಿಯಾಗಿತ್ತು. ಬೇಡನೆಂದರೂ ಕೇಳಲಿಲ್ಲ ಬಿಂದಿ. ತಿಂಡಿ ಮುಗಿಸುವಷ್ಟರಲ್ಲಿ ಗುರುಕುಲವು ತೆರವಾಗಿತ್ತು. ತೊಟ್ಟಿಯಲ್ಲಿ ಎಲ್ಲರೂ ಕೂಡಿದರು.

"ಪರೇಶ ಕಕ್ಕ ಎಲ್ಲಾ ಹೇಳಿದರು. ನಾಗೂ ವಿಚಾರ ನನಗೂ ಆಶ್ಚರ್ಯವೆನಿಸಿದೆ," ಮುಖದ ಮೇಲೆ ವ್ಯಸನದ ಕಪ್ಪುಛಾಯೆ ಮಿನುಗಿ ಮಾಯವಾಯಿತು. ಮುಖದ ಭಾವ ಗಂಭೀರ ತಳೆಯಿತು. ವಿಪುಲ ಪುನಃ ನುಡಿದ. "ಅವನು ಏಕೆ ಹೀಗೆ ? ಎಲ್ಲಿಗೆ ಹೋಗುತ್ತಾನೆಂಬುದು ಯಾರಿಗೂ ತಿಳಿಯದೆ ? ಯಾರೂ ನೋಡಲಿಲ್ಲವೇ ?"

"ಇಲ್ಲವೇ ಇಲ್ಲ," ಗೋಣು ಅಲ್ಲಾಡಿಸಿದ ರಾಕಾಚಂದ್ರ

"ಮಾಯೀ ! ನಿಮಗೀಗ ಕಷ್ಟಕ್ಕೆ ಬಂತು. ಈ ವರ್ಷ ಹೇಗಾದರೂ ಸುಧಾರಿಸಿಕೊಳ್ಳಿರಿ, ಮುಂದಿನ ವರ್ಷ ನಾನು ಕೆಲಸ ಬಿಟ್ಟು ಬರುವೆ."

"ಅಷ್ಟಾದರೆ ಸಾಕು."

"ನಾಲ್ಕು ಭಿಗ ಜಮೀನು ಕೊಳ್ಳುವಷ್ಟು ಹಣ ಗಳಿಸಿಕೊಂಡರೆ ಮತ್ತೆ ಆ ಕಡೆ ಮುಖ ಹಾಕುವುದಿಲ್ಲ."

"ಇಲ್ಲಿ ಎಷ್ಟು ದಿನ ಇರುತ್ತಿ ? ಎಷ್ಟು ದಿನ ಸೂಟಿ ತೆಗೆದು ಕೊಂಡಿರುವೆ ?"

"ಈ ಕಾಲದಲ್ಲಿ ಹೆಚ್ಚು ಬಿಡುವು ಮಾಡಿಕೊಳ್ಳುವುದು ಕಷ್ಟ. ಕಳಿಂಗ ರಾಜ್ಯದ ಕಡೆ ಹೋಗಬೇಕಾಗಿ ಬರಬಹುದೆಂದು ತೋರುತ್ತದೆ."

"ಓಹೋ !"

ತಾರಾಭಗವತಿ ಮಾತಾಡದೆ ಕಂಬನಿ ಮಿಡಿದಳು.

"ನೀನೊಂದು ಗುರುಕುಲ ಕೈಕೊಂಡಿದ್ದರೂ ಜವಿಾನು ಕೊಂಡು ಕೊಳ್ಳಬಹುದಾಗಿತ್ತು. ಇದಕ್ಕಾಗಿ ಯುದ್ಧಭೂಮಿಗೆ ಹೋಗಬೇಕಾಗಿತ್ತೆ ?" ಬೃಂದಾವಲಿ ಕೇಳಿದಳು,

"ವಾಸ್ತವ್ಯ, ನಾನು ತಪ್ಪು ಮಾಡಿದೆ. ಕೊಲ್ಲುವುದಕ್ಕಿಂತ ವಿದ್ಯಾದಾನ ಮಾಡುವುದು ಸಾವಿರ ಪಾಲು ಉತ್ತಮವಾಗಿತ್ತು."

"ಈಗಲೂ ಬಿಟ್ಟುಬಿಡಬಹುದಲ್ಲ ?"

ಈಗ ಪರಿಸ್ಥಿತಿ ಹದಗೆಟ್ಟಿರುವುದರಿಂದ ಕೇಳಿಕೊಂಡರೂ ನಮ್ಮ ದಳಪತಿ ಬಿಡುಗಡೆ ಮಾಡಲಾರ."

"ಹಾಗೆಂದರೆ ಇನ್ನಷ್ಟು ಕಾಲವೋ ?"

ರಾಕಾಚಂದ್ರ ನಡುವೆ ಬಾಯಿ ಹಾಕಿದ. "ನಾಗಚಂದ್ರ ಮನೆಯಲ್ಲಿದ್ದಿದ್ದರೆ ಅಷ್ಟು ಕಷ್ಟವಾಗುತ್ತಿರಲಿಲ್ಲ. ಅವನು ಎಲ್ಲೋ ಹೋಗುತ್ತಾನೆ, ಎಂದೋ ಬರುತ್ತಾನೆ."

"ಇದಂತೂ ಎಲ್ಲಿಲ್ಲದ ಆಶ್ಚರ್ಯ" ಯೋಚನಾಕ್ರಾಂತನಾಗಿ ಕುಳಿತ ವಿಪುಲಚಂದ್ರ.

ಒಂದೆರಡು ಗಳಿಗೆ ಮೌನವಾವರಿಸಿತು. ಎಲ್ಲರ ಮನಸ್ಸೂ ಅದೇ ಸಮಸ್ಯೆಯನ್ನು ಕುರಿತು ಚಿಂತಿಸಿತು.

"ಹೇಳಿಯೂ ಹೋಗುವುದಿಲ್ಲವೇ ?"

"ಹೊರಗೆ ಹೋಗಿ ಬರುವೆ ಎನ್ನುತ್ತಾನೆ. ಅನಂತರ ಬಂದಾಗಲೇ ಬಂದ, ಹೀಗಾದರೆ ಏನು ಗತಿ ? ತನ್ನ ನೆಲೆಯೇನು ? ತನ್ನ ಗುರಿಯೇನು? ಎಂಬುದನ್ನಾದರೂ ತಿಳಿಸಬಾರದೇ !"

"ಏಕೆ ಹೀಗಾದ ! ಯಾವುದಾದರೂ ಹೆಣ್ಣಿನ ಬಲೆಗೆ ಬಿದ್ದಿರಬಹುದೆ !"

"ಛೀ ! ಅವನಲ್ಲಿ ಆ ಭಾವನೆಯೇ ಇಲ್ಲ,"

"ಮತ್ತೇನಿರಬಹುದು ? ಮದಿರಾ ಭಕ್ತನಂತೂ ಅಲ್ಲವೇ ಅಲ್ಲ. ಯಾವ ದುಸ್ಸಂಗವೂ ಇಲ್ಲ. ವಾಚಾಳಿಯೂ ಅಲ್ಲ. ಸೋಮಾರಿಯೂ ಅಲ್ಲ. ಆದ್ದರಿಂದ ಅವನನ್ನೇ ಸ್ಪಷ್ಟ ಕೇಳಿಬಿಡಿ."

ಕಾಡು ಮೇಡುಗಳಲ್ಲಿ ಅಲೆಯುವುದನ್ನು ನೋಡಿದರೆ ಯಕ್ಷ, ಕಿನ್ನರ, ಕಿಂಪುರುಷರ ಕಾಟವಿರಬಹುದೇ ಎಂದೂ ಯೋಚನೆ ಬರುತ್ತೆ ವಿಪುಲ" ಎಂದ ರಾಕಾಚಂದ್ರ.

"ಹಾಗೇನಾದರೂ ಆಗಿದ್ದರೆ ಹುಚ್ಚೋ ಭ್ರಾಂತೋ ಹಿಡಿಯುತ್ತದೆ. ಅಂಥಾದ್ದೇನೂ ಇಲ್ಲ. ಮನೆಯಲ್ಲಿದ್ದಾಗ ಬಹಳ ಅಚ್ಚುಕಟ್ಟು. ಎಲ್ಲಾ ಬಗೆಯ ಕೆಲಸ ಕಾರ್ಯಗಳನ್ನೂ ಶ್ರದ್ಧೆಯಿಂದ ಮಾಡುತ್ತಾನೆ. ಏನೆಂಬುದೇ ಅರ್ಥವಾಗುವುದಿಲ್ಲ" ಖಿನ್ನ ಮುಖದಿಂದ ನುಡಿದಳು ತಾರಾ ಭಗವತಿ.

"ಕೆಲವು ದಿನ ಇಲ್ಲಿಗೆ ಕಳುಹಿಸಿ ಮಾಯೀ."

"ನಾನೂ ಅದನ್ನೇ ಯೋಚಿಸುತ್ತೆ ಬಂದೀ."

"ಈ ಸಲ ಮನೆಗೆ ಬಂದರೆ ಇಲ್ಲಿಗೆ ಕರೆದು ತಂದು ಕೆಲವು ದಿನ ಗುರುಕುಲವನ್ನು ಅವನ ತಲೆಗೆ ಕಟ್ಟಿ ನೋಡುವೆ. ಹುಡುಗ ಹಾದಿಗೆ ಬಂದಾನೇನೋ" ಒಂದು ಗಳಿಗೆ ತಡೆದು ರಾಕಾಚಂದ್ರ ಮುಂದುವರಿದ "ಬೆಳೆದ ಮಕ್ಕಳಿಬ್ಬರೂ ತಮ್ಮ ಹಾದಿ ನೋಡಿಕೊಂಡು ವೃದ್ಧ ಮಾತೆಯನ್ನು ಒತ್ತಟ್ಟಿಗೆ ಕೂರಿಸಿಬಿಟ್ಟರೆ ಹೇಗೆ ಹೇಳು ?"

"ನಾಗು ಹೀಗಾಗುತ್ತಾನೆಂದು ಯಾರು ತಿಳಿದಿದ್ದರು ?"

"ಅದೇನೋ ನಿಜ."

"ಅವನು ಹೊರಡುವಾಗ ನೀವು ಹಿಂದಿರುಗುವುದೆಂದು ಎಂದು ಕೇಳುವುದಿಲ್ಲವೇ ?"

"ಅವನು ಹೊರಡುವ ಸೂಚನೆ ಕೊಟ್ಟರಷ್ಟೆ ? ಹೊಲಕ್ಕೆ ಹೋದವನು ಹಾಗಿಂದ ಹಾಗೇ ಹೋದುದೂ ಉಂಟು. ಮನೆಯಿಂದ ಹೋದುದೂ ಉಂಟು. ಕೊನೆಗೊಂದು ದುಪ್ಪಟಿಯನ್ನೂ ತೆಗೆದು ಕೊಂಡು ಹೋಗುವುದಿಲ್ಲ. ಏನೋ ದಿನ ನಿತ್ಯ ಹೊರಡುವಂತೆ ಹೊರಡುತ್ತಾನೆ. ದಿನ ನಿತ್ಯದಂತೆ 'ಹೋಗಿ ಬರುವೆ' ಎನ್ನುತ್ತಾನೆ, ನಾನು ಹೇಗೆ

ತಿಳಿದುಕೊಳ್ಳಲಿ ! ದಿನಕ್ಕೆ ನಾಲ್ಕು ಮಾತಾಡಿದರೆ ಹೆಚ್ಚು.... ಪರಿಸ್ಥಿತಿ ಹೀಗಿದೆ."

"ನೀನು ಅವನು ಬರುವದರೆಗೆ ಇದ್ದು ನಾಲ್ಕು ಮಾತು ಹೇಳಿ ನೋಡು ವಿಪುಲ."

"ನನಗಷ್ಟು ದಿನ ಇಲ್ಲಿರಲು ಸಮಯವಿಲ್ಲ ಬಿಂದೀಮಾ."

"ನೀನು ಇನ್ನೆಷ್ಟು ದಿನಗಳಿರುವೆ ?"

"ನಾಲ್ಕು ದಿನ ಇರುವೆ."

ಅಷ್ಟರೊಳಗಾಗಿ ಬಂದಾನೇನೋ" ಎಂದಳು ತಾರಾಭಗವತಿ. ಹೃದಯ ಭಾರವಾಗಿತ್ತು.

ಂ ಂ ಂ ಂ

ನೀರವ, ನಿಶ್ಶಬ್ಧ ; ನಿಸ್ಪಂದ.

ಮೆಲ್ಲೆಲರು ಬಹು ಮೆಲ್ಲನೆ ತಿಡುತ್ತಿದೆ, ಹೊತ್ತು ಸದ್ದಿಲ್ಲದೆ ಉರುಳುತ್ತಿದೆ.

ಬುದ್ಧಂ ಶರಣಂ ಗಚ್ಛಾಮಿ.
ಸಂಘಂ ಶರಣಂ ಗಚ್ಛಾಮಿ.
ಧರ್ಮಂ ಶರಣಂ ಗಚ್ಛಾಮಿ.

ಭಗವಾನ್ ಬುದ್ಧದೇವನ ಪ್ರಾರ್ಥನಾ ಸಭೆ. ಸುತ್ತುಮುತ್ತು ಬಿಳಿಯ ದುಕೂಲವನ್ನು ಹೊದ್ದು ಬಹು ಮಂದಿ ಕಣ್ಣು ಮಿಟುಕಿಸದೆ, ತುಟಿ ಪಿಟಕ್ಕೆನ್ನದೆ ಗುರುದೇವನ ಉಪದೇಶಾಮೃತವನ್ನು ಕೇಳುತಿದ್ದಾರೆ. ಬೆಣ್ಣೆಯ ಮೃದುವನ್ನೂ ಅಣಕಿಸುವ ದನಿಯಲ್ಲಿ ಬುದ್ಧದೇವನ ಉಪ ದೇಶಾಮೃತವು ಹರಿದು, ಶ್ರೋತೃಗಳ ಕರ್ಣದೇಶಗಳ ಮೇಲೆ ಧುಮುಕಿ, ಮನವನ್ನು ಅರಳಿಸಿ ಹೃದಯ ಸಂಪುಟಗಳಲ್ಲಿ ಜ್ಞಾನ ತೃಷೆ ಯನ್ನು ಉಕ್ಕಿಸುತಿತ್ತು.

ತರಗೆಲೆ ಉದುರಿದರೂ, ಗಿಡದಿಂದ ಗಿಡಕ್ಕೆ ಹಕ್ಕಿಗಳು ಹಾರಿದರೂ, ಸುಯ್ಯೆಲರು ಸುಯ್ಯನೆ ಸುಯ್ದರೂ, ಶಾಂತಿಗೆ ಭಂಗ ತಾರದಂತೆ ಸಮ ಯೋಚಿತವಾಗಿ ಸದ್ದಿಲ್ಲದೆ ಕೈಂಕರ್ಯ ನಡೆಸುತ್ತಿವೆ. ನೋಡೆ ಬುದ್ಧ ದೇವನುಟ್ಟ ದುಕೂಲ ಮೆಲ್ಲನಲುಗಿತು. ಕುರುಳುಗಳೂ ಅತ್ತಿಂದಿತ್ತ

ತುಯ್ಯಲಾಡಿದುವು. ಓ...ಸುಯ್ಯೆಲರು ಸಮಯಕ್ಕಂಜಿದರೂ ತನ್ನ ಕರ್ತವ್ಯಕ್ಕೆನಿತೂ ಲೋಪವೆಸಗಿರಲಿಲ್ಲವೆಂಬುದಕ್ಕೆ ಅಲಗುವಿಕೆಯು ಸಾಕ್ಷಿ !

ನಿಜವಾಗಿಯೂ....

ಉಪದೇಶವಾದ ನಂತರ ಪ್ರಾರ್ಥನೆ. ಸಾಮೂಹಿಕ ಪ್ರಾರ್ಥನೆಯಾದ ನಂತರ ಸಭಿಕರು ಒಕ್ಕೊರಲಿಂದ ಘೋಷಿಸಿದರು.

ಬುದ್ಧಂ ಶರಣಂ ಗಚ್ಛಾಮಿ.
ಸಂಘಂ ಶರಣಂ ಗಚ್ಛಾಮಿ.
ಧರ್ಮಂ ಶರಣಂ ಗಚ್ಛಾಮಿ.

ಹೊತ್ತು ತಂಗಿ ಕತ್ತಲಾವರಿಸಹತ್ತಿತು. ಕತ್ತಲೆಯ ತೆರೆ ಇಳೆಯನ್ನು ತೆರೆತೆರೆಯಾಗಿ ಮುಸುಗುತ್ತಲೂ ನೆರೆದ ಮಂದಿಯಲ್ಲಿ ಬಹುಮಂದಿ ತಮ್ಮ ತಮ್ಮ ಕ್ಷೇತ್ರಗಳ ಕಡೆ ಹೊರಟರು. ಆತ್ಯಂತ ಆತ್ಮೀಯರು ಕೆಲವರು ಬುದ್ಧದೇವನ ನೆಲೆಯಲ್ಲೇ ಉಳಿದರು. ಬುದ್ಧಾನುಯಾಯಿ ನಾಗಚಂದ್ರ ಸರ್ವೇಸಾಮಾನ್ಯವಾಗಿ ಹೊರಗಡೆ ಉಳಿಯುತ್ತಿರಲಿಲ್ಲ. ಒಮ್ಮೊಮ್ಮೆ ಹೊರಹೋದರೂ ಬಂದು ಬುದ್ಧ ನೆಲೆಯಲ್ಲಿಯೇ ನೆಲೆಸುತಿದ್ದ.

"ಮಗೂ, ನಾಗಚಂದ್ರ !"

"ಮಹಾ ಪ್ರಭೂ !"

"ನೀನು ನಮ್ಮಲ್ಲೇ ಉಳಿದರೆ ಸಂಘ ಸದಸ್ಯನಾಗಿ ಉಳಿಯುತ್ತೀಯೇ ಹೊರತು ಸ್ವತಂತ್ರನಾಗಿ ಚಿಂತಿಸಲಾರೆ. ಹೊರ ಹೋಗಿ ದೀರ್ಘವಾಗಿ ವಿಚಾರ ಮಾಡು ಮಗೂ."

"ಮಾಡಿದ್ದೇನೆ. ಇನ್ನೂ ಮಾಡಲು ಅಪ್ಪಣೆಯಾದರೆ ಖಂಡಿತವಾಗಿಯೂ ಮಾಡುವೆ ಗುರುದೇವ !"

"ಮಾಡು ಮಗೂ, ನಿನ್ನ ತಾಯಿಯ ಬಗ್ಗೆಯೂ ನೀನು ಚಿಂತಿಸುವುದಿದೆ. ಸ್ವಾರ್ಥವನ್ನು ಬದಿಗಿಟ್ಟು ಯೋಚನೆ ಮಾಡು ಮಗೂ."

"ಅಪ್ಪಣೆ ಪ್ರಭೂ !"

"ನಿನಗೆ ನನ್ನ ಆಶೀರ್ವಾದವಿದೆ. ಶುಭಾಶಯವಿದೆ."

"ಮಹಾ ಪ್ರಸಾದ ತಂದೆ. ನನಗಿನ್ನೇನೂ ಬೇಕಿಲ್ಲ. ಉಳಿದುದೆಲ್ಲಾ ಮಿಥ್ಯೆ."

ಬುದ್ಧಂ ಶರಣಂ ಗಚ್ಛಾಮಿ.
ಸಂಘಂ ಶರಣಂ ಗಚ್ಛಾಮಿ.
ಧರ್ಮಂ ಶರಣಂ ಗಚ್ಛಾಮಿ.

ಮೂರು ದಿನಗಳ ನಂತರ.

ಅದೇ ಮಹಾ ವಟವೃಕ್ಷದ ತಣ್ಣೆಳಲಲ್ಲಿ ಬುದ್ಧಾನುಯಾಯಿಗಳ ತುಂಬು ಸಭೆ ನಡೆದಿದೆ. ಮಹಾ ವಟವೃಕ್ಷದ ಬುಡದಲ್ಲಿ ಭಗವಾನ್ ಬುದ್ಧದೇವ ಮಂಡಿಸಿದ್ದಾನೆ. ಬುದ್ಧದೇವನ ಬಾಯಿಯಿಂದ ಹೊರಸೂಸುವ ಮಾತಿನ ಮುತ್ತುಗಳಿಗಾಗಿ ಕಿವಿಗಳು ಹಾತೊರೆದಿವೆ. ಮೈಯೆಲ್ಲಾ ಮನಸ್ಸಾಗಿ ಸುಖ ಶಾಂತಿ ಸಂತೋಷ ಒಲವುಗಳ ಆಗರವಾಗಿ ಸಾಸಿರ ಮಂದಿ ಸುತ್ತುವರಿದು ಕುಳಿತಿದ್ದಾರೆ.

ಆ ಮಹಾನುಭಾವನ ವಿನಯಪೂರ್ಣವಾದ ದನಿ ಸಕ್ಕರೆಯ ಸವಿಯನ್ನು ಪೂಸಿದಂತೆ ಹೊರಹರಿದು ಬಂತು.

"ಶಿಷ್ಯರೇ, ನನ್ನ ನಡವಳಿಕೆಗಳಲ್ಲಿ ಅಥವಾ ಕೃತಿಯಲ್ಲಿ ಅಥವಾ ಮಾತಿನಲ್ಲಿ ಏನಾದರೂ ತಪ್ಪು ಕಂಡು ಬಂದಿದೆಯೆ ? ಹಾಗೆ ಕಂಡು ಬಂದಿದ್ದಲ್ಲಿ ಲೇಶಮಾತ್ರವೂ ಸಂಕೋಚವಿಲ್ಲದೆ ಹೇಳಿರಿ."

ಎಂತಹ ಪ್ರಶ್ನೆ ?

"ಹಾ !" ಎಂದು ಸುಯ್ದರು ಮಂದಿ. ಹೊದ್ದ ಬಿಳಿಯ ದುಕೂಲಗಳ ಮರೆಯಲ್ಲಿ ಹೃದಯ ಸಂಪುಟಗಳು ಮೇರೆ ಮೀರಿ ಮಿಡಿದುವು. ಚಂದನವೊರೆದಂತೆ ಕಣ್ಣು ಕೆನ್ನೆ ಮೂಗು ಮುಖಗಳು ಕೆಂಪಗೆ ಕೆಂಪು ತಳೆದುವು.

ಅದೇನು ಲಜ್ಜೆಯ ರಂಗೋ ? ಸಂತಾಪದ ಕೆಂಪೋ ? ಸಂತೋಷದ ಪೆಂಪೋ ?

ಭಗವಾನ್ ಬುದ್ಧದೇವನ ಉಜ್ವಲ ನೋಟ ಎಲ್ಲರನ್ನೂ ನಿಟ್ಟಿಸಿತು. ಎಲ್ಲರ ಬಗೆಗಣ್ಣುಗಳನ್ನೂ ಹೊಕ್ಕು ನೋಡಿತು. ಎದೆಯೊಳಕ್ಕೂ ಇಳಿದು ನೋಡಿತು. ಎಲ್ಲಿ ನೋಡಿದರೂ ಎಲ್ಲಿ ತಡುಕಿದರೂ ಭಕ್ತಿಯ ತನಿರಸ.

ಅರ್ಥಾತ್, ಯಾರನ್ನು ನಿಷ್ಕಲಂಕನೆಂದೂ ಪರಿಶುದ್ಧಾತ್ಮನೆಂದೂ ಪ್ರಬುದ್ಧನೆಂದೂ ಪರಿಭಾವಿಸಿದ್ದರೋ ಆ ಮಹಾತ್ಮನಿಂದಲೇ ಈ ಪ್ರಶ್ನೆ? ಪವಾಡರಹಿತ ಸ್ವರ್ಗೀಯ ಅತಿಮಾನುಷ ಶಕ್ತಿಯ ಉಜ್ವಲ ಮೂರ್ತಿಯ ಮುಂದೆ ಯಾವ ನಾಲಿಗೆ ಅಲುಗೀತು ?

ಮಂತ್ರಮುಗ್ಧರಂತೆ ಕುಳಿತ ಎಲ್ಲರನ್ನೂ ಭಗವಾನ್ ಬುದ್ಧದೇವನ ನೋಟ ಮತ್ತೊಮ್ಮೆ ನಿಟ್ಟಿಸಿತು.

"ಶಿಷ್ಯರೇ. ಶ್ಲಾಘನೆಯು ಎಂತೋ ದೂಷಣೆಯೂ ಅಂತೆಯೇ ! ಸಂಕೋಚರಹಿತವಾಗಿ ನಿರ್ದಯರಾಗಿ ಮನಬಿಚ್ಚಿ ಮಾತಾಡಿರಿ. ಅದರಿಂದ ಯಾವ ಬಾಧಕವೂ ಇಲ್ಲ."

ಶಿಷ್ಯಗಣ ಒಕ್ಕೊರಲಿನಿಂದ ಘೋಷಿಸಿತು. "ಇಲ್ಲ ಪ್ರಭೂ! ನಾವೆಂದೂ ನಿಮ್ಮಲ್ಲಿ ಲೋಪ ದೋಷಗಳನ್ನು ಕಾಣಲಿಲ್ಲ. ನೀವೇ ನಮ್ಮ ಸದ್ಗುರು....ನೀವೇ ನಮ್ಮ ಮಾರ್ಗದರ್ಶಿ !"

ನಾಗಚಂದ್ರ ಅಂಜಲೀಬದ್ಧನಾಗಿ ಎರಡೂ ಕೈಗಳನ್ನು ಜೋಡಿಸಿ ಇಂತೆಂದ "ತಂದೆ ! ಯುಗಯುಗಾಂತರಗಳಲ್ಲೂ ನಿಮ್ಮಂತಹ ಮಹಾನುಭಾವರು ದುರ್ಲಭ."

"ನಾಗಚಂದ್ರ, ಹಿಂದಿನ ಎಲ್ಲಾ ಬುದ್ಧರೂ ನಿನಗೆ ಗೊತ್ತೆ ?"

"ಇಲ್ಲ ಪ್ರಭೂ !

"ನಿನಗೆ ಮುಂಬರಲಿರುವ ಬುದ್ಧಾನುಬುದ್ಧರು ಗೊತ್ತುಂಟೆ ?"

"ಇಲ್ಲ ತಂದೆ !"

"ಹೋಗಲಿ, ನನ್ನ ಮನಸ್ಸಾದರೂ ನೀನು ಚೆನ್ನಾಗಿ ತಿಳಿದುಕೊಂಡಿರುವೆಯಲ್ಲವೇ ?"

"ಅದೂ ಸಹ ಇಲ್ಲ ಮಹಾಪ್ರಭು !"

"ಅಂದಮೇಲೆ ನನ್ನನ್ನೇಕೆ ಶ್ಲಾಘನೆ ಮಾಡುತ್ತಿ ?"

ಅಮೃತೋಪಮವಾದ ದನಿ ಎದೆಯಾಳಕ್ಕಿಳಿಯಿತು. ನಾಗಚಂದ್ರ ನತಶಿರಸ್ಕನಾಗಿ ನಿಂತ. ಶಿಷ್ಯಗಣ ಪುಳಕಿತವಾಯಿತು.

ಚಾಂದ್ರಮಾನವೊಂದು ಉರುಳಿತು.

ನಾಗಚಂದ್ರ ಬುದ್ಧಭಿಕ್ಷುವಾಗಿ ದೀಕ್ಷೆ ಕೈಕೊಂಡ. ಅದೇ ಸುಂದರ ಸಂಜೆ ಬಿಳಿಯ ದುಕೂಲವನ್ನುಟ್ಟು ತಾರಾಭಗವತಿ ರಾಕಾಚಂದ್ರನೊಡನೆ ಬುದ್ಧ ಸನ್ನಿಧಿಗೈತಂದಳು. ನಲವತ್ತು ವಸಂತಗಳನ್ನು ದಾಟಿದರೂ ಮುಪ್ಪಿಗೆ ಶರಣಾಗದ ದೇಹ. ಕಪ್ಪು ಕೂದಲ ರಾಶಿಯಲ್ಲಿ ಬೆಳ್ಳಿಯಂತೆ ಹೊಳೆ ಹೊಳೆಯುವ ಬಿಳಿಯ ಕೂದಲುಗಳು. ಬೆಳ್ಳನೆಯ ಮಟ್ಟಸವಾದ ಹೆಣ್ಣು. ತಲೆಯ ಮೇಲೆ ಸೆರಗು ಹೊದ್ದು ಎರಡೂ ಕೈಗಳನ್ನು ಜೋಡಿಸಿ ಕೊಂಡು ನಿಂತಾಗ ವನದೇವಿಯಂತೆ ಕಣ್ಗೆಸೆದಳು.

"ತಾಯಿ, ದೂರದ ಪಯಣದಿಂದ ದಣಿದು ಬಂದಿದ್ದೀರಿ. ದಯ ಮಾಡಿ ಕುಳಿತುಕೊಳ್ಳಿ."

"ಶರಣು ತಂದೆ !

"ಶರಣು ತಾಯಿ !"

"ಶರಣು ! ಶರಣು !"

"ದಯವಿಟ್ಟು ಕುಳಿತುಕೊಳ್ಳಿ ತಾಯಿ."

''ಹಸಾದ ತಂದೆ."

''ಯಾವ ಕಾರ್ಯಭಾರವು ತಮ್ಮನ್ನು ಇಲ್ಲಿಯವರೆಗೆ ಬಿಜಯ ಗೈಯಲು ಪ್ರೇರೇಪಿಸಿತು ತಾಯಿ ?"

''ತಮ್ಮಲ್ಲಿ ಭಿಕ್ಷೆ ಬೇಡಲು ಬಂದಿರುವೆ ತಂದೆ."

''ಭಿಕ್ಷೆ ! ಭಿಕ್ಷುವಿನಲ್ಲಿ ಭಿಕ್ಷೆಯೆ ?" ಮುಗುಳು ನಕ್ಕರು ಬುದ್ಧ ದೇವ.

"ತಮ್ಮಲ್ಲಿರುವ ವಸ್ತುವನ್ನು ಮಾತ್ರ ನಾನು ಭಿಕ್ಷೆ ಬೇಡುವೆ ಪ್ರಭೂ. ನಿಮ್ಮ ಉಡಿಯಲ್ಲಿರುವ ನಾಗಚಂದ್ರ ನನ್ನ ಪುತ್ರ. ಪುತ್ರಭಿಕ್ಷೆ ಬೇಡಲೆಂದು ನಿಮ್ಮ ಬಳಿಗೆ ಬಂದೆ–ಗುರುದೇವ !"

ಬುದ್ಧದೇವ ಒಂದು ಗಳಿಗೆ ಚಿಂತಿಸಿದ. ಈ ಗೋಳು ದಿನವೂ ಇದ್ದದ್ದೆ. ಎಷ್ಟೋ ಮಂದಿ ಮಡದಿಯರು. ಎಷ್ಟೋ ಮಂದಿ ತಾಯಂದಿರು ಪತಿಭಿಕ್ಷೆ ಪುತ್ರಭಿಕ್ಷೆ, ಬೇಡಿದ್ದುಂಟು. ಸ್ವತಃ ಯಶೋಧರಾ ಬಂದು ಬೇಡಲಿಲ್ಲವೇ !

ಭಿಕ್ಷುಗಳ ಮಧ್ಯೆ ತಲೆಬಾಗಿ ಕುಳಿತ ನಾಗಚಂದ್ರ ತಲೆಯೆತ್ತಲಿಲ್ಲ. ಕಣ್ಣು ಕೆನ್ನೆಗಳಲ್ಲಿ ಚಂದನವೊರೆದಂತೆ ರಂಗು ಮೂಡಿತು. ಕ್ಷಣ ಕ್ಷಣಗಳು ಮೆಲ್ಲನೆ ಉರುಳಿದುವು. ಗಳಿಗೆ ಗಳಿಗೆಗಳು ಸದ್ದಿಲ್ಲದೆ ನಡೆದುವು. ಎಳ್ಳು ಬೀರಿದರೂ ಕೇಳಿಸುವಂತಹ ನಿಶ್ಯಬ್ದ ಮನೆಮಾಡಿತು. ಕುಳಿತ ಮಂದಿ ಮಿಸುಕಾಡದೆ ಉಸಿರಾಡಿದರು. ತಾರಾಭಗವತಿ ಸೆರಗೊಡ್ಡಿ ತಲೆಬಾಗಿ ದೈನ್ಯವೇ ಮೂರ್ತಿವೆತ್ತು ಬಂದಂತೆ ಕುಳಿತಿದ್ದಾಳೆ. ಕಣ್ಣುಗಳಲ್ಲಿ ಕಂಬನಿಯು ಧಾರಾಕಾರವಾಗಿ ಹರಿಯುತ್ತಿದೆ.

"ತಾಯಿ ! ಅವನಿಂದು ಭಿಕ್ಷುವಾಗಿ ದೀಕ್ಷೆ ಕೈಗೊಂಡಿದ್ದಾನೆ."

"ನನಗೇನು ಹೇಳುವಿರಿ ತಂದೆ ?"

"ನಾನು ಏನು ಹೇಳಬಲ್ಲೆ ತಾಯಿ ?"

"ವಿಪುಲಚಂದ್ರ ರಣರಂಗದಲ್ಲಿ, ನಾಗಚಂದ್ರ ನಿಮ್ಮ ಪದತಲದಲ್ಲಿ. ಈ ನಲವತ್ತರ ತಾಯಿಯ ಗತಿಯೇನು ಎಂಬುದನ್ನು ಯೋಚಿಸಿರಿ ತಂದೆ."

"ತಾಯಿ....!"

"ಪ್ರಭುದೇವ !"

"ಒಲ್ಲದವರಿಗಾಗಿ ಬೇಡಿ ಏನು ಫಲ ? ಸಂಸಾರಿಕವಾಗಿ ಪ್ರೀತಿ ವಿಶ್ವಾಸಗಳು ಸ್ವತಃ ಮೊಳೆಯಬೇಕೆ ಹೊರತು ಬಲಾತ್ಕಾರ ಸಲ್ಲದು."

"ತಂದೆ..."

"ಬಿಟ್ಟ ಬಾಣವನ್ನು ಬೆನ್ನಟ್ಟುವುದೇನು ಪ್ರಯೋಜನ ತಾಯಿ ?"

"ಬುದ್ಧದೇವ .."

"ತಾಯಿ. ನೀವು ಸ್ವತಃ ನಾಗಚಂದ್ರನನ್ನು ಎಳೆದೊಯ್ದರೂ ಅವನು ಸಂಸಾರಿಯಾಗಲಾರ. ಅಂತಲೇ ಭಗವಂತ ನಿಮಗೆ ರಾಕಾಚಂದ್ರನನ್ನು ನೀಡಿದ್ದಾನೆ. ಮತ್ತೇಕೆ ದುಃಖ ?"

"........"

"ತಾಯೀ, ರಾಕಾಚಂದ್ರನನ್ನು ನಿಮ್ಮ ಔರಸಪುತ್ರನನ್ನಾಗಿ ಮಾಡಿಕೊಂಡು ನಿಶ್ಚಿಂತೆಯಿಂದಿರಿ."

"......"

"ರಾಕಾಚಂದ್ರನನ್ನು ನಿಮಗೆ ಭಿಕ್ಷೆಯಾಗಿ ನೀಡುವೆ ತಾಯಿ."

"ಶರಣು...ಶರಣು ತಂದೆ !"

ಮೆಲ್ಲೆಲರು ಸುಯ್ಯನೆ ಸುಯ್ದು ಬೀಸಿತು.

ಕೆಂದಳಿರ ಹೊದರಿನಲ್ಲಿ ಹುದುಗಿ ಕುಳಿತ ಪಕ್ಷಿ ಸಾಂತ್ವನಗೈಯುವ ದನಿಯಲ್ಲಿ ಕೂಗಿತು ಚಿಕ್ಕವ್ವೋ‌ೀೀೀೀೀ !

ಮಗದೊಂದು ವೇದನಾಪೂರ್ವಕವಾಗಿ ಮರುದನಿ ಕೊಟ್ಟಿತು ಚಿಕ್ಕವ್ವೋೀೀೀೀೀ !

o o o o

ಸೈನಿಕರ ಶಿಬಿರದಲ್ಲಿ ದಳವಾಯಿ ರಾಜೇಂದ್ರಸಿಂಹ ವೀರಾಸನದಲ್ಲಿ ಮಂಡಿಸಿದ್ದಾನೆ. ಹುರಿ ಮೀಸೆ ತೀಕ್ಷ್ಣವಾದ ಕಣ್ಣುಗಳು ದಳವಾಯಿ ತನಕ್ಕೆ ಹುರುಪು ನೀಡಿವೆ. ಹತಭಾಗಿನೀ ತಾರಾಭಗವತಿ ಎರಡೂ ಕೈಗಳನ್ನೂ ಜೋಡಿಸಿಕೊಂಡು ವಿನೀತಭಾವದಿಂದ ಪುತ್ರಭಿಕ್ಷೆ ಬೇಡಿದ್ದಾಳೆ.

ರಾಜೇಂದ್ರಸಿಂಹ ಒಂದೇ ನಿರ್ಧಾರದಿಂದ ನುಡಿದ. "ಈ ಉತ್ಕಟ ಪರಿಸ್ಥಿತಿಯಲ್ಲಿ ವಿಪುಲಚಂದ್ರನನ್ನು ಬಿಟ್ಟುಕೊಡುವಂತಿಲ್ಲ. ಸ್ವಲ್ಪಕಾಲ ದಯವಿಟ್ಟು ಸಹಿಸಿಕೊಳ್ಳಿರಿ."

"ಪ್ರಭೂ...."

"ದಯಮಾಡಿ ಕ್ಷಮಿಸಿರಿ."

"........"

ರಾಕಾಚಂದ್ರ ಅವಳನ್ನು ಹೊರಡಲು ಒತ್ತಾಯಪಡಿಸುತಿದ್ದಂತೆಯೇ ವಿಪುಲಚಂದ್ರ ತಾಯಿಯ ಕಾಲ್ಮುಟ್ಟಿ ನಮಸ್ಕರಿಸಿ ಎದೆಗಪ್ಪಿ ಸಂತೈಸಿ ಬೀಳ್ಕೊಟ್ಟು ಅತ್ಯಂತ ದೈನ್ಯತೆಯಿಂದ ಹನಿಗಣ್ಣಾಗಿ ನಿಂತ. ರಂಗೊರೆದ. ಆ ಹನಿಗಣ್ಣ ನೋಟ ದೀನ ನೋಟವನ್ನು ಬೀಳ್ಕೊಟ್ಟಿತು. ಸಂಕಟ ತುಂಬಿದ ಹೃದಯ ವ್ಯಸನದುಂಬಿದ ಹೃದಯವನ್ನು ಬೀಳ್ಕೊಟ್ಟಿತು.

ಕಂಬನಿಯ ಕಡಲಲ್ಲಿ ಮಿಂದು ಮನೆಯನ್ನು ಮುಟ್ಟಬೇಕಾದರೆ ಹೆಣ್ಣು ಜೀವ ಹಣ್ಣಾಗಿತ್ತು. ಹಳ್ಳತಿಟ್ಟುಗಳ ಹರದಾರಿ ಹಾದಿಯನ್ನು ನಡೆದು ದಣಿದುದಕ್ಕಿಂತ ಭಾರವಾದ ದೇಹವನ್ನು ಹೊರಲಾರದೆ ಹೊತ್ತು ಕಾಲುಗಳು ದಣಿದಿದ್ದುವು. ರಾಕಾಚಂದ್ರ ನೂರು ಒತ್ತಾಸೆಗಳನ್ನು ನೀಡಿ ಸಾಂತ್ವನಗೈದಿದ್ದ.

ಪತಿ ಸುತರು ನನ್ನ ಭಾಗಕ್ಕಿಲ್ಲವಾದರೂ ರಾಕಾಚಂದ್ರನಿದ್ದಾನೆ. ಆ ಅಲ್ಪ ಭಾಗ್ಯವೂ ಇಲ್ಲದ ನಿರ್ಭಾಗ್ಯರೆಷ್ಟು ಮಂದಿ ಇಲ್ಲ? ದೀನಾ ದೀನರನ್ನು ನೆನೆದಾದರೂ ಧೈರ್ಯಗೊಳ್ಳುವೆ. ವಿಪುಲಚಂದ್ರ ಮನೆಗೆ ಮರಳುವ ತನಕವಾದರೂ ನಾನು ಜೀವಿಸಬೇಕಲ್ಲ. ಅವನು ಯುದ್ಧ ಭೂಮಿಯಲ್ಲಿರುವಾಗ ದೇಶರಕ್ಷಣೆಯ ಹೋರಾಟದಲ್ಲಿರುವಾಗ ನಾನು ಸತ್ತು ಅವನ ಎದೆಗುಂಡಿಗೆಯ ಧೈರ್ಯವನ್ನು ಬಸಿಯುವುದೇ? ಅವನೀಗ ನಿಶ್ಚಿಂತೆಯಿಂದಿರಲು ಅನುವು ಮಾಡಿಕೊಡುವುದು ಮಾತೃ ಧರ್ಮ.

ಹೃದಯ ಭಾರವಾದರೂ ಮನಸ್ಸು ಕರ್ತವ್ಯದ ಹಾದಿಯನ್ನು ಅರಸತೊಡಗಿತು.

ಬೃಂದಾವಲಿ ಸೋತು ಸುಣ್ಣವಾಗಿ ಹೊಡರುತ್ತಾ ಬಂದ ತಾರಾ ಭಗವತಿಯನ್ನು ನೋಡುತ್ತಲೂ ಓಡಿ ಬಂದು ಕೈಯಾಸರೆ ನೀಡಿ "ಓ...ಮಾಯೀ! ನೀವಷ್ಟು ದೂರ ನಡೆದುಹೋದುದೇ ತಪ್ಪು. ಈ ಇಳಿವಯಸ್ಸಿನಲ್ಲಿ ಒಂದೇಸಮನೆ ನಡೆದರೆ ಹೇಗಿರಬೇಡ? ಮೊದಲಿಷ್ಟು ಕೈಕಾಲು ಮುಖ ತೊಳೆದುಕೊಂಡು ತಣ್ಣನೆಯ ಪಾನಕ ಕುಡಿದು ವಿಶ್ರಾಂತಿ ತೆಗೆದುಕೊಳ್ಳಿ. ಇಂದು ಸ್ನಾನವಿಲ್ಲದಿದ್ದರೂ ತೊಂದರೆ ಇಲ್ಲ; ಮಡಿ ಮೈಲಿಗೆಯ ಗೋಜೇ ಬೇಡ. ದೇವರು ದಯಾಘನ. ದೂರದ ಹಾದಿಯನ್ನು ಕಡೆಗೂ ಕಡೆಹಾಯಿಸಿದನಲ್ಲಾ. ರೆಕ್ಕೆಪುಕ್ಕ ಬಲಿತ ಮೇಲೆ ಹಕ್ಕಿಮರಿ ಗೂಡಿನಲ್ಲುಳಿದೀತೇ? ಜಗತ್ತೇ ಹಾಗೆ. ಅದಕ್ಕೇಕೆ ದುಃಖ? ಇಂದು ಮಕ್ಕಳಿಗೆ ತಾಯಿ ಬೇಡವಾದರೂ ಮುಂದೆ ಬೇಕಾದಾಗ ಓಡಿ ಬಂದಾರು. ಮನಸ್ಸಿಗೆ ಹಚ್ಚಿಕೊಳ್ಳಬೇಡಿ ಮಾಯೀ...!"

ಬೃಂದಾವಲಿ ಬಳಬಳ ಮಾತಾಡುತ್ತಲೇ ಶುದ್ಧೋದಕವನ್ನು ತಂದು ಬೊಗಸೆಯೊಡ್ಡಿದ ಕೈಗೆ ಸುರಿದು ಅವಳು ಕೈಕಾಲು ತೊಳೆದುಕೊಳ್ಳಲು ಸಹಾಯಮಾಡಿ ಒಗೆದ ಮಡಿಬಟ್ಟೆಯನ್ನು ತಂದು ನೀಡಿದಳು. ಅವಳು ಉಟ್ಟುಕೊಳ್ಳುವುದರೊಳಗಾಗಿ ಸುತ್ತಿದ್ದ ಹಾಸಿಗೆಯನ್ನು ಬಿಚ್ಚಿಯೂ ಆಯಿತು. ಬೃಂದಾವಲಿ ಚಿಗರಿಯಂತೆ ಹಾರಾಡುತ್ತಾ ರಾಕಾಚಂದ್ರನಿಗೂ ಸ್ನಾನಕ್ಕೆ ನೀರು ಅಣಿಮಾಡಿ ಇಬ್ಬರಿಗೂ ತಣ್ಣನೆಯ ಪಾನಕವನ್ನು ತಂದು ಮುಂದಿಟ್ಟಳು.

ರಾಕಾಚಂದ್ರನು ತನು ತಂಪಾಗುವಷ್ಟು ಪಾನೀಯವನ್ನು ಹೀರಿ— "ಮಾಯೀ, ನೀವು ಬಹಳವಾಗಿ ದಣಿದಿದ್ದೀರಿ. ಮೂರು ದಿನ ಏಳಲೇ ಬೇಡಿ. ದೇವರು ನನಗೆ ಏನೂ ಕಡಿಮೆ ಮಾಡಲಿಲ್ಲ. ನಿಮಗೊಂದು ತುತ್ತು ನೀಡುವುದು ಹೆಚ್ಚಲ್ಲ."

ತಾರಾಭಗವತಿ ಮಾತಾಡಲಿಲ್ಲ. ಕಣ್ಣುಗಳಲ್ಲಿ ಕೃತಜ್ಞತೆಯ ಬೆಳಕು ಮಿನುಗಿ ಮಾಯವಾಯಿತು. ತನು ತಂಪಾಗುವಷ್ಟು ಶೈತ್ಯೋಪಚಾರ ನಡೆದಿದ್ದರೂ ಮನಸ್ಸು ಲೋಕಾಂತರವನ್ನೈದಿತ್ತು. ಕಾಲದೆಸೆಯಲ್ಲಿನ ಹೊದಿಕೆಯನ್ನು ಮೇಲೆಳೆದುಕೊಂಡು ಮಲಗಿದಳು.

ಮೂರು ದಿನಗಳು ಸಂದುವು.

ಮೈ ಖಂಡಖಂಡಗಳೂ ಸಿಡಿದೊಡೆಯುವಂತೆ ನೋಯುತ್ತಿವೆ. ಎದ್ದು ಓಡಾಡಲೂ ಆಗದಷ್ಟು ನಿತ್ರಾಣ. ಮಲಗಿರಲೂ ಬೇಸರ. ಬೃಂದಾವಲಿಯ ಮೂರು ಮಕ್ಕಳೂ ಬಳಿಯಲ್ಲಿ ಕುಳಿತು ಚದುರಂಗ ಆಡುತ್ತಾ, ನಗೆಮಾತುಗಳಿಂದ ಗದ್ದಲವೆಬ್ಬಿಸಿದಾಗ ಮನಸ್ಸು ಅರಳುತಿತ್ತು. ಬೃಂದಾವಲಿ ಕೆಲಸ ಕಾರ್ಯ ಮುಗಿಸಿ ಬಳಿಯಲ್ಲಿ ಕುಳಿತಾಗ ದುಃಖ ಅರುಗಾಗುತ್ತಿತ್ತು. ಮರುಗಳಿಗೆಯಲ್ಲಿ ಅಳಿದ ಪತಿಯ ಬಳಿ ಸುಳಿಯುತಿತ್ತು ಚಿತ್ತ. ದೂರವಾದ ಮಕ್ಕಳನ್ನು ಹಂಬಲಿಸುತಿತ್ತು ಹೃದಯ.

ಬೃಂದಾವಲಿ ಮಿಂದು ಮಡಿಯುಟ್ಟು ಕೊಠಡಿಗೆ ಪದಾರ್ಪಣೆ ಮಾಡುತ್ತಲೇ ಅಂದಳು. "ಇದೇನು ಮಾಯಿ ? ಒಂದು ವಾರ ಕಳೆದರೂ ಸುಧಾರಿಕೊಳ್ಳಲಿಲ್ಲ ? ನಿಮ್ಮ ಮಕ್ಕಳು ಕಡಿಮೆಯೆ ? ವಿಪುಲ ಸೈನ್ಯಾಧಿಪತಿ ! ನಾಗು ಬೌದ್ಧ ಭಿಕ್ಷು ! ಮತ್ತೇಕೆ ಕೊರಗು ? ನಿಮ್ಮ ಮಗ ಬುದ್ಧನಾದರೆ ಕೆಡುಕೇನು ? ಭಗವಾನ್ ಬುದ್ಧ ಲೋಕಪ್ರಸಿದ್ಧನಾಗಿದ್ದಾನೆ ! ಅಂತಹವನ ಶಿಷ್ಯ ನಾಗಚಂದ್ರ ! ನಿಜವಾಗಿಯೂ ಹೆಮ್ಮೆ ಪಡುವಂತಾದ್ದು ! ನಿಮ್ಮ ಮಗ ಪ್ರಬುದ್ಧನಾಗಲಿ ಬಿಡಿ. ಯೋಚಿಸಿ ಯೋಚಿಸಿ ಮೇಲೇರುವವರಿಗೆ ನಿಮ್ಮ ಎದೆಯ ಬಿಸುಸುಯ್ಲು ತಟ್ಟುವಂತೆ ಮಾಡಬೇಡಿರಿ."

ತಾರಾಭಗವತಿ ಏನೋ ಹೇಳಬೇಕೆಂದು ಪ್ರಯತ್ನಿಸಿದರೂ ತುಟಿ ಬಿರಿಯಲಿಲ್ಲ. ಹಸನ್ಮುದ್ರೆ ತಳೆದು ಸುಮ್ಮನಾದಳು.

"ನಾನು ಒಂದು ವಾರ ತೌರಿಗೆ ಹೋದರೆ ನಿಮ್ಮ ಕೈ ಕಾಲಿಗೆ ತಾನಾಗಿ ಶಕ್ತಿ ತುಂಬಿಕೊಳ್ಳುತ್ತದೆ. ನೀವು ಹೀಗೆಯೇ ಮೂಲೆ ಸೇರಿದರೆ ನಾನು ಹೊರಡುವುದೇ ಸೈ."

"ನೀನು ಹೊರಟರೆ ಗಂಡ ಮಕ್ಕಳು ಉಪವಾಸ ಬೀಳ ಬೇಕಾಗುತ್ತದೆ."

"ನೀವಿರುವಾಗ ಅದು ಸಾಧ್ಯವೇ ಇಲ್ಲ. ನನ್ನ ಮಕ್ಕಳು ನಿಮಗೆ ವಿರಾಮ ಕೊಟ್ಟಾರೆಯೆ ?"

ಇಬ್ಬರ ಮುಖದಲ್ಲೂ ಮುಗುಳು ನಗು ಮೂಡಿತು.

"ಗುರುಕುಲದಲ್ಲಿ ಕೂಡಿರಿ. ನಿಮ್ಮ ಮನಸ್ಸಿಗಿಷ್ಟು ನೆಮ್ಮದಿ ಬರುತ್ತದೆ."

"ಆಗಲೀ ಬಿಂದೀ"

ಬೃಂದಾವಲಿ ಹೊರಬಿದ್ದಳು.

ಒಂದು ಗಳಿಗೆ ಯೋಚಿದಳು ತಾರಾಭಗವತಿ.

...ದಾರಿದ್ರ್ಯ ದೇವತೆಯ ಕಾರುಣ್ಯಾಶ್ರಯದಲ್ಲಿ ನಲುಗಿದ ವಿಪುಲ ಸೈನ್ಯಕ್ಕೆ ಸೇರುವ ಅಭಿಲಾಷೆಯನ್ನು ಮುಂದಿಟ್ಟಾಗ ಮಿತಭಾಷಿ ನಾಗ ಚಂದ್ರ 'ಹಾ, ಹೂ' ಎನ್ನಲಿಲ್ಲ. ತಿಳಿದೂ ತಿಳಿದೂ ಸುಮ್ಮನಾಗಿಬಿಟ್ಟ. ಸಂದರ್ಭೋಚಿತವಾಗಿಯಾದರೂ ತನ್ನ ಗುರಿಯನ್ನು ಮುಂದಿಡಬಹು ದಾಗಿತ್ತು. ಇಬ್ಬರೂ ಒಂದಾಗಿಯೇ ತಮ್ಮ ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳಬಹುದಾಗಿತ್ತು. ಅಂದರೆ ಸಂಸಾರ ಚೂರ್ಣ ವಿಚೂರ್ಣ ವಾಗಿ ಜೀವನ ಶಾಂತಿ ಹದಗೆಟ್ಟು ಧೂಳೀಪಟವಾಗುತ್ತಿರಲಿಲ್ಲ. ಇದನ್ನೆಲ್ಲಾ ಕುರಿತು ಯೋಚಿಸಲಾರದಷ್ಟು ಮೂರ್ಖನಲ್ಲವಲ್ಲಾ ನಾಗು...? ಯಾವ ಜನ್ಮದ ಕರ್ಮ ಬೆಂಬತ್ತಿ ಕಾಡುತ್ತಿದೆಯೋ ದೇವರಿಗೇ ಗೊತ್ತು. ಹಾ...!

ಬಿಸುಸುಯ್ಲು ಹೊಮ್ಮಿತು.

ತಾರಾಭಗವತಿ ಎದ್ದು ಹೊರಬಂದಾಗ ಗುರುಕುಲ ತೆರವಾಗಿತ್ತು. ಮಕ್ಕಳು ತೊಟ್ಟಿಯಲ್ಲಿ ಆಟವಾಡುತಿದ್ದರು. ಒಬ್ಬ ಬುದ್ಧನ ಪಾತ್ರ ವಹಿಸಿದ್ದ. ಕೆಲವರು ಶಿಷ್ಯಪಾತ್ರವನ್ನು ವಹಿಸಿದ್ದರು. ಬೃಂದಾವಲಿಯು

ಹಿರಿಯ ಮಗ ನಾಗಚಂದ್ರನ ಪಾತ್ರವನ್ನು ದಕ್ಷತೆಯಿಂದ ನಿರ್ವಹಿಸಿದ್ದಾನೆ! ನೋಡು ನೋಡುತ್ತಾ ಹಾಗೇ ನಿಂತಳು ತಾರಾಭಗವತಿ. ಮಕ್ಕಳ ಆಟ ಕೂಟ ಮನವನ್ನು ಆಕರ್ಷಿಸಿತು. ಮಕ್ಕಳೆಲ್ಲಾ ಭಿಕ್ಷೆಗೆ ಹೊರಟರು "ಭಿಕ್ಷಾಂ ದೇಹಿ!"

ಬೃಂದಾವಲಿ ಮಕ್ಕಳ ಕೈಗೆ ಮೊಸರನ್ನದ ತುತ್ತು ನೀಡಿದಳು. ರಾಕಾಚಂದ್ರ ಎಲ್ಲರ ಕೈಗೂ ಒಂದೊಂದು ಬಾಳೆ ಹಣ್ಣನ್ನಿಟ್ಟ.

"ಭಿಕ್ಷಾಂ ದೇಹಿ!"

"ಇಲ್ಲಿ ನಾನೇನು ಕೊಡಬಲ್ಲೆ? ನಮ್ಮ ಮನೆಗೆ ಬಂದರೆ ಕೈತುಂಬ ಸಿಹಿ ನೀಡುವೆ" ಎಂದಳು ತಾರಾಭಗವತಿ.

"ಅಲ್ಲಿಗೆ ಬಂದಾಗ ನೀಡುವುದು ಹೇಗೂ ಉಂಟಲ್ಲ, ಈಗಲೂ ನೀಡಿರಿ."

ರಾಕಾಚಂದ್ರ ಬೃಂದಾವಲಿಯರು ಕುಲು ಕುಲು ನಕ್ಕರು.

"ಇಲ್ಲಿ ನನ್ನನ್ನು ಹೊರತು ಏನಿದೆ ಹೇಳಿ, ನನ್ನ ಬಳಿ?" ಸುತ್ತುವರಿದು ನಿಂತ ಮಕ್ಕಳನ್ನು ನೋಡಿ ಮುಖ ಅರಳಿತು. ಎಳೆ ನಾಗಚಂದ್ರನ ಗಲ್ಲ ಹಿಡಿದು ಮುದ್ದಿಟ್ಟುಕೊಂಡಳು—ತಾರಾಭಗವತಿ.

"ಭಿಕ್ಷಾಂ ದೇಹಿ!"

"ನಿಮ್ಮನ್ನೇ ನೀವು ನೀಡಿರಿ. ಇನ್ನು ಮೇಲೆ ಹೇಗೂ ನಾನೇ ನಾಗಚಂದ್ರ."

ಎಲ್ಲರ ಮುಖದಲ್ಲೂ ಎಳೆನಗು ಮಿನುಗಿತು.

ತಾರಾಭಗವತಿ ಬಾಲ ನಾಗಚಂದ್ರನನ್ನು ಎದೆಗಪ್ಪಿಕೊಂಡಳು.

ೲ ೲ ೲ ೲ

ಅದೊಂದು ಅತ್ಯಂತ ಸುಂದರ ಮುಂಜಾನೆ.

ಪಕ್ಷಿಗಳಿಂಚರವು ತಾನೇ ತಾನಾಗಿ ಕಿವಿಯ ಮೇಲೊರೆಯುತ್ತಿತ್ತು. ಬಾಲರವಿಯ ಬಾಲಕೋಮಲ ಕಿರಣಗಳು ಮೂಡಣ ದಿಶೆಯಲ್ಲಿ ಇದೀಗ ತಾನೇ ಹಣುಕುತಿದ್ದುವು. ವಾತಾವರಣ ಶುಭ್ರವಾಗಿದ್ದು ತನುಮನಗಳಿಗೆ ತಂಪನ್ನೂಡಿಸುತ್ತಿತ್ತು. ಪ್ರಾತರ್ವಿಧಿಗಳನ್ನು ಮುಗಿಸುತಿದ್ದರೂ ಇಂದು ಯಾಕೋ ಮನಸ್ಸಿಗೆ ಎಲ್ಲಿಲ್ಲದ ಕಳವಳ. ರಾತ್ರಿ ನಿದ್ದೆಯೂ ಸಹ

ಸರಿಯಾಗಿ ಬರಲಿಲ್ಲ. ಒಮ್ಮೆ ತುಸು ನಿದ್ದೆ ಬಂದರೂ ಮರುಗಳಿಗೆಯಲ್ಲಿ ಹೊಡೆದೆಬ್ಬಿಸಿದಂತೆ ಎಚ್ಚರವಾಗುವುದು. ಏಕೋ ಏನೋ ತಾಳಲಾಗದ ತಳಮಳ. ಸಹಿಸಲಾಗದ ಬೇಗುದಿ. ಅಂತಃಪ್ರಜ್ಞೆ ಚಡಪಡಿಸಿತು.... ಏಕೆ ಹೀಗೆ ? ಏನಿರಬಹುದು ? ಬಂಧು ಬಳಗದಲ್ಲಿ ಯಾರಾದರೂ ಅಸ್ವಸ್ಥರಿರಬಹುದೆ ? ಅಯ್ಯೋ, ದೇವರೇ ! ಅಂತಹ ಯಾವ ತೊಂದರೆಯೂ ಬಾರದಿರಲಿ. ಇದುವರೆವಿಗೆ ಅನುಭವಿಸಿದ ತೊಂದರೆಗಳೇ ಸಾಕಾಗಿದೆ.

ಮೊರೆ ಇಟ್ಟಿತು ದುಃಖ ದಗ್ಧ ಹೃದಯ.

ಜಗ್ಗೂ ತಾಯಿ ಒಳಬಂದು ಕೇಳಿದಳು. "ಅಡುಗೆ ಮಾಡಿಟ್ಟು ಹೊಲಕ್ಕೆ ಹೋಗುವೆ, ಯಾವ ತರಕಾರಿ ಹೆಚ್ಚಲಿ ?"

"ಇಂದು ಏನೂ ಬೇಡ. ಮೊಸರಿದೆ ಅಷ್ಟೇ ಸಾಕು."

"ಅದೇಕೆ ? ತರಕಾರಿ ಇದೆಯಲ್ಲ, ಹಾಳುಮಾಡುವುದೇ ?"

"ಅದನ್ನು ನೀನೇ ತೆಗೆದುಕೊಂಡು ಹೋಗು ಕಕ್ಕಿ. ಅಡಿಗೆ ಮಾಡಿ ಇಕ್ಕಿದರೆ ಜಗ್ಗು ಹಾಯಾಗಿ ಉಂಡಾನು.

ಅವಳ ರೀತಿಯೇ ಅರ್ಥವಾಗಲಿಲ್ಲ. ಒಂದು ಗಳಿಗೆ ಹಾಗೇ ನಿಂತಳು ಜಗ್ಗೂ ತಾಯಿ.

"ರಾತ್ರಿ ನಿದ್ದೆ ಬರಲಿಲ್ಲ. ಹೊಟ್ಟೆಯೊಳಗೆ ಸಂಕಟ. ಏನೋ ಒಂದು ಬಗೆಯ ಕಿನಿಸಿಗೆ. ಇಂದಿನ ಮಟ್ಟಿಗೆ ನನಗೆ ಏನೂ ಬೇಡ. ಬರೀ ಅನ್ನ ಮಜ್ಜಿಗೆ ಉಂಡು ಜೀರ್ಣಿಸಿಕೊಂಡರೆ ಸಾಕಾಗಿದೆ.

ಅವಲಕ್ಕಿ ಮೊಸರಿನ ಉಪಹಾರ ಮುಗಿಸಿಕೊಂಡು ಜಗ್ಗೂ ತಾಯಿ ಹೊರಟಳು. ತಾರಾಭಗವತಿ ನಡುಮನೆಯಲ್ಲಿ ಚಾಪೆಯ ಮೇಲೆ ಸುಮ್ಮನೆ ಕುಳಿತುಕೊಂಡಳು. ಹೊಟ್ಟೆಯೊಳಗೆ ಏನೋ ಒಂದು ಬಗೆಯ ನುಲಿತ, ಏನೋ ಒಂದು ಬಗೆಯ ಸಂಕಟ, ಯಾವ ಕೆಲಸ ಮಾಡಲೂ ಮನಸ್ಸಿಲ್ಲ, ತಿರುಗಾಡಲೂ ಮನಸ್ಸಿಲ್ಲ, ಏಕೆ ಹೀಗೆ....? ಏನಿರಬಹುದು ?

ಅಲ್ಲಿ ಕೂಡಲಾಗದೆ ಎದ್ದಳು.

ಒಡಲ ಸಂಕಟವೆಲ್ಲ ಕಂಬನಿಯಾಗಿ ಸುರಿಯಿತು.

ಹೊತ್ತು ದೀರ್ಘವಾಗಿ ಉರುಳಿದಂತೆ ಭಾಸವಾಯಿತು. ಹೇಗೋ ಹಾಗೆ ಇಲ್ಲದ ಕೆಲಸ ಕಾರ್ಯಗಳನ್ನು ಹೊಂಚಿಕೊಂಡು ಹೊತ್ತು ಕಳೆದಳು

ತಾರಾಭಗವತಿ. ಬಣ್ಣಿಸಲಾಗದ.. ಮೈ ಹಬೆ ಏಳುವಂತ ದಗೆ. ನೀರು ಕುಡಿದಷ್ಟೂ ಹೊಟ್ಟೆ ತುಂಬುತಿತ್ತೇ ವಿನಾ ದಾಹವಡಗದು. ಸಧ್ಯ ಹಗಲು ರುಳಿ ಸೂರ್ಯ ಮುಳುಗಿದರೆ ಸಾಕು, ಎಂದು ಹಾರೈಸಿತು ಜೀವ.

ಅಂತೂ ..!

ದಿನದ ಗಾಲಿ ದೀರ್ಘದಾಗಿ–ಬಲು ದೀರ್ಘವಾಗಿ ಉರುಳಿ ಸೂರ್ಯ ದೇವ ಪಡುವಣ ಮಟ್ಟೆಗೆ ಬಿಜಯಂಗೈದ. ಇನ್ನು ಮುಳುಗುವುದೊಂದು ಬಾಕಿ. ದನಕರುಗಳಿಗೆ ಹುಲ್ಲು ನೀರು ಕೊಟ್ಟು ಒಳ ಬಂದಾಗ ಮಬ್ಬು ಗತ್ತಲು ಕವಿಯುತಿತ್ತು. ಜಗ್ಗೂ ಕಂದೀಲು ಹಚ್ಚಿದ್ದ. ಹೊರ ಬಾಗಿಲಲ್ಲಿ ಹರಳೆಣ್ಣೆ ದೀಪ ಹಚ್ಚಿ ಮುಂಬಾಗಿಲು ಹಾಕಿದಳು. ಒಳಗಡೆ ಮಂದಪ್ರಕಾಶ ಹರಡಿತ್ತು.

ಮಗ್ಗುಲು ಮನೆಯಲ್ಲಿ ಪರೇಶ ಕಕ್ಕ, ಜಗ್ಗೂ ತಾಯಿ ಮಾತಾಡು ತಿದ್ದುದು ಕೇಳಿಸುತಿತ್ತು—ಜಗ್ಗೂ ನಡುಮನೆಯಲ್ಲಿ ಕುಳಿತು ಕಂದೀಲಿನ ಬೆಳಕಿನಲ್ಲಿ ಗ್ರಂಥ ಪಠಣ ಕೈಕೊಂಡಿದ್ದ.

ಕಾಲಿಮಾ ಪೀಠದ ಬಳಿ ನಂದಾದೀಪ ಉರಿಯುತಿತ್ತು. ತಾರಾ ಭಗವತಿ ಕೈ ಜೋಡಿಸಿದ್ದಾಳೆ. ಸಂಜೆಯ ಪ್ರಾರ್ಥನೆ ಅನುದಿನದಂತೆ ನಡೆ ಯುತಿದ್ದರೂ ಮನಸ್ಸಿಗೆ ಸಮಾಧಾನವಿಲ್ಲ. ಎಷ್ಟೇ ಪ್ರಯತ್ನಿಸಿದರೂ ಮನ ಸ್ಸನ್ನು ಪ್ರಾರ್ಥನೆಯಲ್ಲಿ ತೊಡಗಿಸಲಾಗಲಿಲ್ಲ. ಬಲಗಣ್ಣು ಅದುರಿತು. ಮನಸ್ಸು ಮಿಡುಕಿತು. ಪ್ರಾರ್ಥನೆಯನ್ನು ಬದಿಗೊತ್ತಿ ಚಿಂತೆಯಲ್ಲಿ ಮುಳುಗಿತು ಮನಸ್ಸು. ದುಃಖ ದುಗುಡಗಳ ಹೊರೆಯಲ್ಲಿ ದೇಹ ಸೋತಿತು. ಜೀವ ನೊಂದಿತು. ದುಃಖಪೂರ್ಣ ದನಿಯಲ್ಲಿ ಪ್ರಾರ್ಥನೆ ಸಲ್ಲಿಸಿ ಹೊರಬಂದಳು.

ಎಂದೂ ಇಲ್ಲದ್ದು ಇಂದೇಕೆ ಹೀಗೆ ?

ಒಂದು ವಾರದ ಕೆಳಗೆ ಯುದ್ಧಭೂಮಿಯಿಂದ ತಾನು ಸುಖವಾಗಿರುವು ದಾಗಿ ಸಂದೇಶ ಕಳಿಸಿದ್ದ–ವಿಪುಲಚಂದ್ರ. ರಾಕಾಚಂದ್ರನೂ ಮೊನ್ನೆಯಷ್ಟೆ ಬಂದು ಹೋಗಿದ್ದ. ಬುದ್ಧತಾಣದಿಂದ ಮಾತ್ರ ಯಾವ ಸುದ್ದಿಯೂ ಬಂದಿರಲಿಲ್ಲ. ಕಳುಹಿಸುವ ಸ್ವಭಾವವೂ ಅವನಿಗಿಲ್ಲ. ಅಂದಮೇಲೆ ಇನ್ನೇನಿರಬಹುದು ? ಏಕೆ ಇಷ್ಟೊಂದು ಸಂಕಟ ?

ಸಂಕಟ...ಸಂಕಟ. ಒಂದು ತುತ್ತು ತಂಗಳನ್ನ ಉಂಡರೆ ಸಂಕಟ ಅಳಿಯಬಹುದೇನೋ ಎಂದು ಚಿಂತಿಸಿತು ಮನಸ್ಸು. ಆದರೆ ಏನು ಮಾಡುವುದಕ್ಕೂ ಮನಸ್ಸಿಲ್ಲ. ನಡುಮನೆಯಲ್ಲಿ ಜಗ್ಗು ಬಳಿ ಸ್ವಲ್ಪ ಹೊತ್ತು ಕುಳಿತು ನಾಗಚಂದ್ರ ವಿಪುಲಚಂದ್ರರ ಕೊಠಡಿಗಳಿಗೆ ಹೋಗಿ ಒಂದು ಗಳಿಗೆ ಸುತ್ತಾಡಿ ಅಡುಗೆ ಮನೆಗೆ ಬಂದಳು. ತಂಗಳನ್ನ ನೊಸರನ್ನು ತಟ್ಟೆಗೆ ಬಡಿಸಿ ಜಗ್ಗೂ ಮುಂದಿಟ್ಟಾಗ ಅವನೆಂದ "ಮನೆಯಲ್ಲಿ ಒಳ್ಳೆಯ ಹುಳಿಯಿತ್ತು. ಅಲ್ಲೇ ಉಂಡು ಬಂದೆ."

"ಸ್ವಲ್ಪ ಮಾತ್ರ ಇದೆ. ಇದನ್ನೂ ಉಂಡು ಬಿಡು."

ಜಗ್ಗೂ ಮುಗುಳು ನಕ್ಕ.

ಊಟದ ಶಾಸ್ತ್ರವೂ ಮುಗಿಯಿತು. ತನು ತಂಪಾಗುವಷ್ಟು ಮಜ್ಜಿಗೆ ಕುಡಿದು ಹಾಸಿಗೆ ಸೇರಿದಳು ತಾರಾಭಗವತಿ. ಕಂದೀಲು ಸಣ್ಣಗೆ ಮಿಣುಕು ಮಿಣುಕಾಗಿ ಉರಿಯುತಿತ್ತು. ಜಗ್ಗು ಮಲಗಿದ ಕೆಲವೇ ಕೆಲವು ಕ್ಷಣ ಗಳಲ್ಲಿ ಗೊರಕೆ ಹೊಡೆಯಹತ್ತಿದ. ಅಯ್ಯೋ, ನನಗೂ ನಿದ್ದೆ ಬಂದಿದ್ದರೆ? ವಿಪುಲಚಂದ್ರ ಬರುವುದು ಎಂದೋ. ಕಾಯುವ ಕಷ್ಟ ಯಾರಿಗೂ ಬೇಡ. ಗಳಿಗೆ ಗಳಿಗೆಯೂ ದೀರ್ಘವಾಗಿ ಉರುಳಿದಂತೆ ಭಾಸವಾಯಿತು. ಮಲಗಿದ ಮಗ್ಗಲು ನೋಯಹತ್ತಿ ಹೊರಳಿ ಮಲಗಿದಳು. ಎಷ್ಟೇ ಪ್ರಯತ್ನ ಪಟ್ಟರೂ ನಿದ್ದೆ ಬಾರದು. ಕಣ್ಣೆವೆ ಮುಚ್ಚಿ ತೆಗೆದು ಕಣ್ಣುಗಳು ನೋಯ ತೊಡಗಿದುವು. ಉರಿಗಣ್ಣುಗಳನ್ನು ತೆರೆಯಲಾರದೆ ಹಾಗೇ ಮುಚ್ಚಿ ಹೊದಿಕೆಯನ್ನು ಮೇಲೆಳೆದುಕೊಂಡಳು.

ಹೊರಗಡೆ ಎಲ್ಲೋ ದೂರದಲ್ಲಿ ನಾಯಿ ಬೊಗಳುವ ಸದ್ದು ಕೇಳಿಸು ತಿತ್ತು. ಜಗ್ಗು ಗೊರಕೆ ಹೊಡೆಯುವ ಸದ್ದೂ ಕಿವಿಯ ಮೇಲೊರೆಯು ತಿತ್ತು. ಮುಚ್ಚಿದ ಕಣ್ಣುಗಳು ಹಾಗೇ ಇವೆ. ಎರಡು ಕೈಗಳೂ ಎದೆಯ ಮೇಲೆ ಹೆಣೆದುಕೊಂಡಿವೆ. ಇದ್ದಕ್ಕಿದ್ದಂತೆ ಬೆಳ್ಳನೆ ಬೆಳಕು ಕಣ್ಣುಗಳನ್ನು ಮುತ್ತಿತು. ಇದೇನು? ಇಷ್ಟು ಬೇಗನೆ ಬೆಳಕಾಯಿತೇ? ಅಚ್ಚರಿಯಿಂದ ಕಣ್ತೆರೆದಳು ತಾರಾಭಗವತಿ.

ಇದೆಂತಹ ಆಶ್ಚರ್ಯ!

ಕಿಟಿಕಿಯಲ್ಲಿ ಬೆಳಕಿಲ್ಲವೇ ಇಲ್ಲ. ಕೊಟಡಿಯಲ್ಲಿ ದೀಪ ಹಚ್ಚಿದಷ್ಟು ಬೆಳಕು. ಎಲ್ಲಿಯ ಬೆಳಕು ? ಯಾರು ಹಚ್ಚಿದರು ? ಎಂಥ ಆಶ್ಚರ್ಯ ! ಕಣ್ಣುಗಳನ್ನರಳಿಸಿ ನಿರಿನಿರಿ ನಿಟ್ಟಿಸಿದರೆ ಬೆಳಕಿನ ನೆಲೆಯಲ್ಲಿ ವಿಪುಲಚಂದ್ರ ! ಕೈಯಲ್ಲಿ ಕಂದೀಲು ಹಿಡಿದು ಮಂದಹಾಸ ಬೀರಿ ನಿಂತಿದ್ದಾನೆ–ವಿಪುಲ !

ವಿಪುಲ !

ಧಿಗ್ಗನೆದ್ದಳು ತಾರಾಭಗವತಿ. ಆದರೆ ಒಮ್ಮಿಂದೊಮ್ಮೆಲೇ ಬೆಳಕೂ ಮಾಯ ! ಅವನೂ ಮಂಗಳ ಮಾಯ ! ಅಯ್ಯೊ, ದೇವರೇ ! ಅವನು ಇನ್ನಷ್ಟು ಹೊತ್ತಿದ್ದರೆ ಮಾತಾಡಿಯೇ ಹೋಗಬಹುದಿತ್ತಲ್ಲ. ಅಷ್ಟೇನು ಅವಸರವಾಗಿತ್ತು ? ಅವನು ಬಂದಿದ್ದಾರೂ ಏಕೆ ? ಹಾಗೇ ಹೋದದ್ದಾದರೂ ಏಕೆ ?

ಏನಿರಬಹುದು ? ಅವನ ಕೊಠಡಿಗೆ ಹೋದನೇ ಹೇಗೆ ?

ಒಡನೆ ಉರಿಯುತಿದ್ದ ಕಂದೀಲಿನ ಬತ್ತಿಯನ್ನು ಎತ್ತರಿಸಿ ದೀಪದ ಕುಡಿಯನ್ನು ಪ್ರೋಜ್ವಲಗೊಳಿಸಿ ಮನೆಯನ್ನೆಲ್ಲಾ ಒಂದು ಸುತ್ತು ಹಾಕಿದಳು ತಾರಾಭಗವತಿ. ಎಲ್ಲಿಯೂ ಅವನಿಲ್ಲ. ಮಲಗುವ ಕೊಠಡಿಯಲ್ಲಿ ಹೊಂದಿಸಿಟ್ಟ ಸಾಮಾನುಗಳು ಹಾಗೇ ಇವೆ. ಅವನೆಲ್ಲಿ ಹೋದ ? ಅಯ್ಯೋ, ಸ್ವಲ್ಪ ಹೊತ್ತಿದ್ದಿದ್ದರೆ ? ಒಂದೆರಡು ಮಾತಾಡಿದ್ದರೆ ? ಅಂಥ ಅವಸರವಾದರೂ ಏನಿತ್ತು ? ಅಷ್ಟು ದೂರದಿಂದ ಬಂದ ವ್ಯಕ್ತಿ ಒಂದು ಗಳಿಗೆ ನಿಲ್ಲಬಾರದಿತ್ತೆ ? ವಿಪುಲ ಎಲ್ಲಿ ಹೋದೆ ? ಒಂದೇ ಒಂದು ತಾಸು ನನ್ನೊಡನಿದ್ದು ಹೋಗಪ್ಪಾ !

ಇದೇನು ? ಕನಸೋ ? ಉಹೂ, ಕನಸಲ್ಲವೇ ಅಲ್ಲ. ಜಗ್ಗೂ ಗೊರಕೆ ಹೊಡೆಯುತ್ತಿದ್ದುದು ಸ್ಪಷ್ಟವಾಗಿ ಕೇಳಿಸುತಿತ್ತು. ಬಹುಶಃ ನಿನ್ನೆಯಿಂದಲೂ ಮಕ್ಕಳ ನೆನವರಿಕೆಯಿದ್ದುದರಿಂದಲೋ ಏನೋ ಸ್ಮೃತಿಪಥದಲ್ಲಿ ವಿಪುಲ ಮೂಡಿ ಬಂದ. ಉಹೂ, ಅಲ್ಲವೇ ಅಲ್ಲ. ನಾನು ಸ್ಪಷ್ಟವಾಗಿ ಕಂಡಿದ್ದೇನೆ. ವಿಪುಲನೇ ಹೌದು.

ತಾರಾಭಗವತಿ ಮಲಗದೆ ಹಾಸಿಗೆಯ ಮೇಲೆ ಕುಳಿತುಕೊಂಡಳು. ಅಚ್ಚರಿಯ ಸಮಾಧಿಯಲ್ಲಿ ಕ್ಷಣಕ್ಷಣವೂ ಲೋಕೋತ್ತರವಾಗಿ ಕರಗಿತು.

ರುದ್ರವೆನಿಸಿದರೂ ಮಧುರವಾಗಿ ತೋರಿತು. ಆ ಸುದೀರ್ಘ ರಾತ್ರಿ.

ಇನ್ನೂ ನಸು ಬೆಳಕು ಮೂಡಿಸುವುದರೊಳಗಾಗಿ–ಪಲ್ಲವಿತ ಸುಮ ಸಮುಚ್ಚಯಗಳ ನಲ್ಗಂಪು ಮೂಗಿಗೊಸರುವುದರೊಳಗಾಗಿ ಫೂಲ್‌ಪುರ ದಿಂದ ರಾಕಾಚಂದ್ರ ಪತ್ನೀ ಸಮೇತನಾಗಿ ಆಗಮಿಸಿದ. ದಂಪತಿಗಳ ಮುಖ ಪ್ರೇತಕಳೆಯನ್ನು ತಳೆದಿತ್ತು.

ಹಿಂದೆಯೇ ಯುದ್ಧಭೂಮಿಯಲ್ಲಿ ವಿಪುಲಚಂದ್ರ ಮರಣವನ್ನಪ್ಪಿದ ದುಃಖ ವಾರ್ತೆಯೂ ಕಾದಿತ್ತು.

ಬುದ್ಧಂ ಶರಣಂ ಗಚ್ಛಾಮಿ.
ಸಂಘಂ ಶರಣಂ ಗಚ್ಛಾಮಿ.
ಧರ್ಮಂ ಶರಣಂ ಗಚ್ಛಾಮಿ.

ಇಂದು ಬುದ್ಧ ಪೂರ್ಣಿಮಾ...ಹಾಗೂ...?

# ಮೇಜರ್ ರುದ್ರ

ಹೊತ್ತು ತೆರೆಮರೆಯಾಟ ಆಡುತಿತ್ತು.

ಮನಸ್ಸಾಗರದ ಅಲೆಗಳು ಏರುಪೇರಾಗಿವೆ.

ಆದರೆ .......?

ತಾರುಣ್ಯದ ಮುಂಭಾಗದಲ್ಲಿ ಹಸರು ಹುಲ್ಲಿನ ಮೆತ್ತೆಯ ಮೇಲೆ ಮೇಜರ್ ರುದ್ರ ದೈನಿಕವೊಂದರ ಮೇಲೆ ಕಣ್ಣಾಡಿಸುತ್ತಾ ಚಹಪಾನ ಮಾಡುತಿದ್ದ. ಮೇಜಿನ ಮೇಲಿದ್ದ ಟ್ರೇಯಲ್ಲಿ ಬಸಿ – ಬಟ್ಟಲುಗಳಲ್ಲಿ ಬಿಸ್ಕತ್ತು. ಕರಿದ ಗೇರುಬೀಜಗಳಿದ್ದವು. ದಿನವೂ ತಿಂದದ್ದೆ ತಿಂದು ಮನಸ್ಸು ಅವುಗಳಿಂದ ವಿಮುಖವಾಗಿತ್ತು. ಮೇಜರ್ ರುದ್ರ ಬರೀ ಚಹವನ್ನು ಹೀರತೊಡಗಿದ. ಮಗ್ಗುಲಲ್ಲಿದ್ದ ಸಣ್ಣ ಟೇಪಾಯಿಯ ಮೇಲೆ ಹಲವಾರು ದೈನಿಕ, ಮಾಸಿಕಗಳಿದ್ದುವು. ಯಾಕೋ ಮನಸ್ಸು ಅವುಗಳಿಂದಲೂ ವಿಮುಖವಾಗಿತ್ತು. ಏನೆಂಬುದನ್ನು ಯೋಚಿಸುತ್ತಲೇ ತಲೆಬರಹಗಳ ಮೇಲೆ ಕಣ್ಣಾಡಿಸಿ ಚಹದ ಕೊನೆಯ ಗುಟುಕನ್ನು ಹೀರಿ ಬಸಿಯನ್ನು ಟ್ರೇಯಲ್ಲಿಟ್ಟ. ಇಂದು ಗೊತ್ತು ಗುರಿಯಿಲ್ಲದೆ ಮನಸ್ಸು ಮುಷ್ಕರ ಹೂಡಿದುದಾದರೂ ಏಕೆ ? ಏನಿರಬಹುದು ? ಏನು ಮಾಡಲೂ ಮನಸ್ಸಿಲ್ಲವಲ್ಲಾ ? ಬೆಳಗಿನಿಂದಲೂ ಒಂದೇ ಸಮನೆ ಬೇಸರ ಕೊಡುತ್ತಿದೆ. ಎಷ್ಟು ಪ್ರಯತ್ನಿಸಿದರೂ ಪ್ರಸನ್ನವಾಗದು. ಎಷ್ಟು ಯೋಚಿಸಿದರೂ ಬಗೆಹರಿಯದು. ಹೊಟ್ಟೆಯೊಳಗೆ ಏನೋ ಒಂದು ಬಗೆಯ ಸಂಕಟ–ನುಲಿತ. ಏನೆಂಬುದೂ ಹೊಳೆಯದು. ಏನಾದರೂ ಅಜೀರ್ಣವೇ ? ಅಥವಾ....ಹೋಗಲಿ, ಏನಾದರೂ ಇರಲಿ. ಅಂತೂ ಬಲು ಬೇಸರ.

ಸುತ್ತುಮುತ್ತಿನ ವನ್ಯ ಪ್ರದೇಶಗಳೆಲ್ಲಾ ಹೊಂದಳಿರು ಕೆಂದಳಿರು ಬೆಳ್ದಳಿರು ಹಸುರ್ದಳಿರುಗಳನ್ನು ಹೊತ್ತು ವರ್ಣರಂಜಿತವಾಗಿವೆ. ನೋಡಿದಷ್ಟೂ ಕಣ್ಣಿಗೆ ಹಬ್ಬ. ತನುಮನಗಳು ತಂಪಾಗುವಷ್ಟು

ವಾತಾವರಣ ತಣ್ಣಗಿತ್ತು. ಆದರೂ ಮನಸ್ಸಿಗೆ ನೆಮ್ಮದಿ ಮೂಡಲಿಲ್ಲ. ಪ್ರಕೃತಿ ಸೌಂದರ್ಯಕ್ಕೆ ಮನತೆತ್ತು ಹಾಗೇ ಕುಳಿತ.

ಎಂಟು ಹತ್ತು ಮಂದಿ ಇರಬಹುದಾಗಿದ್ದ ಗಿರಿಮಾ ಠಾಣ್ಯದಲ್ಲಿ ಈಗ ಇದ್ದವನು ಮೇಜರ್ ರುದ್ರ ಒಬ್ಬನೆ. ಉಳಿದವರೆಲ್ಲ ಈಶಾನ್ಯ ಗಡಿಯಲ್ಲಿ ಪರಿಸ್ಥಿತಿಯು ಬಿಗಡಾಯಿಸಿದುದರಿಂದ ಗಡಿ ರಕ್ಷಣೆಗೆ ಹೋಗಿದ್ದು ಅಲ್ಲಿಗೆ ಹತ್ತಿರವಾದ ಕೂಜನ ಠಾಣ್ಯದಲ್ಲಿ ನೆಲೆಸಿದ್ದರು. ಈಗ ಈ ವಲಯದ ಉಸ್ತುವಾರಿ ಮೇಜರ್ ರುದ್ರನಿಗೆ ಸೇರಿತ್ತು.

ಯುದ್ಧ ತಾಣದಿಂದ ಬರುವ ವಯರ್‌ಲೆಸ್ ಮೆಸೇಜ್‌ಗಳಿಗಾಗಿ ಮೈಯೆಲ್ಲಾ ಮನಸ್ಸಾಗಿ ಕಾದಿರುತ್ತಿದ್ದ ಮೇಜರ್ ರುದ್ರ. ಪರಿಸ್ಥಿತಿ ಬಿಗಡಾಯಿಸಿದಾಗಿನಿಂದ ಕಣ್ಣಿಗೆ ಸರಿಯಾಗಿ ನಿದ್ದೆಯೂ ಬಾರದು. ಎರಡನೆಯ ಸರದಿಯ ಸೈನಿಕರನ್ನು ಕರೆದೊಯ್ದು ಬಿಟ್ಟು ಮೊದಲ ಸರದಿಯ ಸೈನಿಕರನ್ನು ಕರೆತರಲು ಹೋದ ಟ್ರಕ್ಕುಗಳಿನ್ನೂ ಹಿಂದಿರುಗಿರಲಿಲ್ಲ. ದೈನಿಕವನ್ನು ಮಡಿಸಿ ಟೀಪಾಯಿಯ ಮೇಲಿಟ್ಟು ಕಣ್ಣುಗಳನ್ನು ಗಡಿಯಾರದ ಮೇಲೆ ಹೊರಳಿಸಿದ. ಹೊತ್ತು ಐದರ ಅಂಚನ್ನು ತಬ್ಬುವುದರಲ್ಲಿತ್ತು. ಕಾಲುಹಾದಿಯ ನೇರಕ್ಕೆ ಪಾದ ಸಪ್ಪಳ ಕೇಳಿ ಬಂತು. ಒಡನೆ ನೋಟ ಸುಮ್ಮನೆ ಸಹಜವಾಗಿ ಅತ್ತ ಹೊರಳಿತು. ವ್ಯಕ್ತಿ ಗೋಚರಿಸುವ ಮುನ್ನ ಪಾದ ಸಪ್ಪಳ ಇನ್ನಷ್ಟು ಸ್ಫುಟವಾಯಿತು. ವ್ಯಕ್ತಿ ಇನ್ನೂ ತಿರುವಿನ ಬಳಿಗೆ ಬಂದಿರದಿದ್ದುದರಿಂದ ನೋಟ ಹಿಮ್ಮರಳಲಿಲ್ಲ. ಒಂದೆರಡು ಗಳಿಗೆಯೊಳಗಾಗಿ ಡಾ|| ಹುಸೇನ್ ಇತ್ತ ಬರುತ್ತಿದ್ದುದು ಗೋಚರಿಸಿತು. ಒಮ್ಮೆಲೇ ಹುಬ್ಬುಗಳು ಏರಿ ಇಳಿದುವು. ಮುಖದಲ್ಲಿ ಎಳೆನಗು ಸೂಸಿ ಸ್ವಾಗತಿಸಿದ ಮೇಜರ್ ರುದ್ರ "ಬಾರಯ್ಯಾ, ಡಾಕ್ಟರ್ ಮಹಾಶಯಾ !"

"ಓ ! ನಿನ್ನ ಖಾಲಿ ಬಸಿ ಎತ್ತಲಿಕ್ಕೋ ?"

"ಬರೀ ಕುಡಿದರೆ ಏನು ಫಲ ? ಖಾಲಿ ಬಸಿ ಎತ್ತಲೂ ಬೇಕು."

"ಮೊದಲು ತುಂಬಿದ ಬಸಿ ಬರಲಿ, ಅನಂತರ ಖಾಲಿ ಬಸಿ ಎತ್ತುವುದು ಇದ್ದೇ ಇದೆ."

"ಬಾಬೂರಾವ್ !"

"………"

"ಬಾಬೂರಾವ್ !"

ಬಾಬೂರಾವ್ ಓಡಿಬಂದ, ಡಾಕ್ಟರಿಗಾಗಿ ಕೈಯಲ್ಲೊಂದು ಮಡಿಸುವ ಕುರ್ಚಿಯೂ ಇತ್ತು. ಮೇಜಿನ ಬಳಿ ಅದನ್ನಿಟ್ಟು ಖಾಲಿ ಬಟ್ಟಲುಗಳನ್ನು ಎತ್ತಿಕೊಳ್ಳುತ್ತಿದ್ದಂತೆ ಮೇಜರ್ ರುದ್ರ –"ಡಾಕ್ಟರಿಗೆ ಚಹ ನೀಡಪ್ಪಾ."

"ಆಗಲಿ, ಸರ್."

ಬಾಬೂರಾವ್ ಸರಸರ ಒಳಹೋದ. ರುದ್ರ ತಟ್ಟೆಯಲ್ಲಿದ ಬಿಸ್ಕತ್ತು ಗೇರುಬೀಜಗಳನ್ನು ಮುಂದಿಟ್ಟು "ಗೇರುಬೀಜ ಸೊಗಸಾಗಿವೆ. ಇವು ನಿನ್ನನ್ನೇ ಕಾಯುತ್ತಿದ್ದುವು."

"ಇದು ಯಾರಿಗೆ ಬೇಕು ? ಕಾಳು ಕಡ್ಡಿ ತಿನ್ನಲಿಕ್ಕೆ ನಾನೇನು ಕುದುರೆಯೆ ? ಮಟನ್‌ಪಪ್ಸ್ ತರಲಿಕ್ಕೆ ಹೇಳು !"

"ನಿನ್ನ ಪಾಕಿಸ್ತಾನಿಗಳನ್ನು ಮಟ್ಟ ಹಾಕಿದಂದು ಮಟನ್‌ಪಪ್ಸ್ ಬಿರಿಯಾನಿ ಎಲ್ಲಾ ಉಂಟು !"

ಮೇಜರ್ ರುದ್ರ ತುಂಟನಗೆ ಬೀರಿದ.

"ಅಂದು ನೀನು ಕೊಡುವುದೇನಿದೆ ? ನಾನೇ ಕೊಡುವೆ ಸೊಗಸಾದ ಪಾರ್ಟಿ !"

ಮೇಜರ್ ರುದ್ರ ನಗುಮುಖದಿಂದ ಸಿಗಾರಿಗೆ ಅಗ್ನಿಸ್ಪರ್ಶ ಮಾಡಿದ. ಡಾ|| ಹುಸೇನ್ ಗೇರುಬೀಜವನ್ನು ಮೆಲ್ಲುತ್ತ "ರುದ್ರ ಸಾಬ್...."

ಸಿಗಾರಿನ ಹೊಗೆಯನ್ನು ಫುಫನೆ ಊದಿ ಕೇಳಿದ ರುದ್ರ "ನಮಗೆ ಪಾರ್ಟಿಯೋ ? ಪಾಕಿಸ್ತಾನಿಗಳಿಗಾಗಿ ಕಂಬನಿಯೋ ?"

"ಅವರಿಗಾಗಿ ನಾವೇಕೆ ಕಂಬನಿ ಮಿಡಿಯಬೇಕು ! ಅವರ ಕರ್ಮಕ್ಕೆ ಅವರು ಹೋಗುತ್ತಾರೆ."

"ಅನಾದಿ ಕಾಲದಿಂದಲೂ ಸೋದರರಾಗಿ ಬಾಳಿದವರೊಂದಿಗೆ ಕದನ ಹೂಡಿ ನಮ್ಮ ಶಕ್ತಿಯನ್ನು ದುರ್ವ್ಯಯಗೊಳಿಸುವುದೆಂದರೆ ಎಂತಹ ಅನ್ಯಾಯ ! ಹುಚ್ಚು...ಮರಳು...ಭ್ರಾಂತಿ !"

"ದೀನ ದಲಿತ ವರ್ಗವೊತ್ತಟ್ಟಿಗಿರಲಿ, ಪ್ರಧಾನತಃ ಕಲಿತ ವರ್ಗದಲ್ಲಿ ಅಂತಃಸುಪ್ತವಾದ ಮೃಗತ್ವವನ್ನು ಕಂಡಾಗ ನಿಜವಾಗಿಯೂ ಹೃದಯ ದಣಿಯುತ್ತದೆ."

"ಮುಖ್ಯವಾಗಿ ಮನುಷ್ಯತ್ವವಿಲ್ಲ."

"ಶಕ್ತಿಕ್ಷಯ ರಾಷ್ಟ್ರಕ್ಷಯಕ್ಕೆ ನಾಂದಿ ಎಂಬುದನ್ನು ರಾಷ್ಟ್ರ ಮಟ್ಟದಲ್ಲಿ ಅರಿತುಕೊಂಡರೆ...."

ಮೇಜರ್ ರುದ್ರ ನಡುವೆ ಬಾಯಿ ಹಾಕಿದ "ರಾಷ್ಟ್ರಮಟ್ಟದಲ್ಲಿ ಮಾತ್ರವೇನು ? ಜನಮಟ್ಟದಲ್ಲೂ ಅರಿತುಕೊಳ್ಳಬೇಕು. ಅಷ್ಟಾಗುವುದು ಇನ್ನೆಷ್ಟು ಕಾಲಕ್ಕೋ ? ಅಷ್ಟರೊಳಗಾಗಿ ಕಾಲಚಕ್ರಕ್ಕೆ ಸಿಕ್ಕಿ, ಕಾಲ ಧರ್ಮಕ್ಕೆ ತಲೆಗೊಟ್ಟು ಇನ್ನೆಷ್ಟು ಮಂದಿ ದುರ್ದೈವಿಗಳು ಬಲಿಯಾಗಲಿರು ವರೋ ದೇವರಿಗೇ ಗೊತ್ತು." ಮುಖದ ಮೇಲೆ ವ್ಯಸನದ ಛಾಯೆ ಸುಳಿದು ಮಾಯವಾಯಿತು.

"ಹಾ...! ನಿಜ" ಹುಸೇನ್ ತಲೆದೂಗಿದ.

ಒಂದು ಗಳಿಗೆ ಮೌನವಾವರಿಸಿತು. ರುದ್ರ ಸಿಗಾರಿನಲ್ಲಿ ತಲ್ಲೀನ ನಾದ.

ಬಿಸಿ ಬಿಸಿ ಚಹ ಆಗಮಿಸಿತು.

ಮೇಜರ್ ರುದ್ರ ಸಿಗಾರಿನ ಕೊನೆಯ ತುಣುಕನ್ನು ಅತ್ತ ಎಸೆದು ಹೊಗೆಯನ್ನು ಮೇಲಕ್ಕೆ ಊದಿ ತಿದ್ದಿದ ಮೀಸೆಯ ಮೇಲೆ ಕೈಯಾಡಿ ಸುತ್ತಾ-"ನೀವೆಲ್ಲಾ ಅಯೂಬನ ಮರಿಗಳೇ. ಈಗ ನೀನು ಹಿಂದೂ ಠಾಣ್ಯ ದಲ್ಲಿದ್ದಿ. ನಮ್ಮ ನೇರಕ್ಕೆ ಮಾತಾಡುತಿದ್ದಿ. ಇಲ್ಲದಿದ್ದರೆ...?"

"ಓ....ಹೋ...ಹೋ !"

"ನೀನೇನಾದರೂ ಒಂದು ಹೆಜ್ಜೆ ಮೀರಿದರೆ ಒಂದೇ ಒಂದು ಬುಲೆಟ್ ಖರ್ಚುಮಾಡಿ ದೇಶದ ಋಣ ತೀರಿಸಿಕೊಳ್ಳುವೆ !" ಕಿಲಕಿಲ ನಕ್ಕು ನುಡಿದ ರುದ್ರ.

"ಓ !" ತನ್ನ ಹಿರಿಯ ದನಿಯನ್ನು ಹರಿಯಬಿಟ್ಟ ಹುಸೇನ್, ನಗುವಿ ನಲೆಯುಡಗುತ್ತಲೂ ಹುಸೇನ್ ತುಂಟ ನೋಟ ಬೀರಿ "ತಿಳಿದುಕೊಂಡಿರಪ್ಪಾ, ರುದ್ರ ಮಹಾಶಯಾ ! ಯುದ್ಧರಂಗದಿಂದ ಹಿಂದಿರುಗಿದಾಗ ನಿನ್ನ ಕೊಯ್ಯು ವವನು ಚುಚ್ಚುವವನು ನಾನೆ !"

ಎರಡೂ ಕಡೆಯಿಂದ ನಗುವಿನಲೆಯೆದ್ದಿತು.

ಭಗವಾನ್ ಭಾನುದೇವ ಪಡುವಣ ಮಟ್ಟೆಗೆ ಇಳಿದಿದ್ದ. ಬಾನ್ ಬಯಲ ಹೊಂಗಾಂತಿ ಮುಖಕ್ಕೆ ಹೊನ್ನಿನ ರಂಗೊರೆದಿತ್ತು. ಭೂವಲಯದ ಸೀಮಾ ರೇಖೆಯನ್ನು ಹರಿಹಾಯ್ದು ಬಂದ ಕುಳಿರ್ಗಾಳಿ ಹಸಿರು ವಲಯದ ಎಲೆ ಎಲೆಯಲ್ಲೂ ಸರಸವಾಡಿ ಮುಖ ನೈಗಳನ್ನು ಮುದ್ದುಗೈದು ತನುಮನಗಳಿಗೆ ಹಸುರೊತ್ತಿ ಹರ್ಷವನ್ನೂಡಿಸಿತು. ಸಿಹಿ ಗಾಳಿಯನ್ನು ಸವಿಯುತ್ತಾ ಮೇಜರ್ ರುದ್ರ,

"ಹರಿದ್ರಾಪುರಕ್ಕೆ ಹೋಗಿ ಬರುವ ಇಚ್ಛೆ ಇತ್ತು. ಈ ಗಡಿ ಪರಿಸ್ಥಿತಿ ನೋಡಿದರೆ ಬಿಟ್ಟು ಹೋಗಲು ಮನಸ್ಸು ಬರುವುದಿಲ್ಲ." ಒಂದು ಗಳಿಗೆ ಯೋಚಿಸಿ "ನೀನೇ ಪರವಾಯಿಲ್ಲ. ಹೋಗಿ ನೋಡಿಕೊಂಡು ಬಂದೆ. ನನಗೆ ಹೋಗುವಂತಿಲ್ಲವಾಯಿತು."

ಡಾ॥ ಹುಸೇನ್ ಮುಗುಳು ನಗೆ ಬೀರಿದ.

ಮೇಜರ್ ರುದ್ರ ಮುಂದುವರಿದ "ನಾನು ಹೋದರೆ ಈ ಸಲ ಖಂಡಿತವಾಗಿಯೂ ನಿವೃತ್ತಿ ಹೊಂದಲು ತಗಾದೆಯೇಳುತ್ತದೆ. ಮುಖ್ಯವಾಗಿ ಮಕ್ಕಳು ಹೊರಡಲಿಕ್ಕೆ ಬಿಡುವುದೇ ಇಲ್ಲ. ಈಗಿನ ಪರಿಸ್ಥಿತಿಯಲ್ಲಿ ಬಿಟ್ಟು ಹೋಗಲು ಖಂಡಿತವಾಗಿಯೂ ಮನಸ್ಸು ಬರುವುದಿಲ್ಲ."

"ಪಾಪ, ನಿಮ್ಮಲ್ಲಿಗೆ ನಾನು ಹೋದಾಗ ಮೂವರು ಹುಡುಗಿಯರೂ ಕೊನೆಯ ಪಕ್ಷ ಹತ್ತು ಬಾರಿ 'ಅಪ್ಪನಿಗೆ ಹೇಳಿ ದಾದಾ' ಎಂದಿರಬಹುದು. ಮನೆಯಲ್ಲಿ ಇನ್ನಾರೂ ಇಲ್ಲ, ಅಂದ ಮೇಲೆ ಯಾರಿಗಾದರೂ ಹಾಗೆನಿಸೀತು ಅವರು ಕೇಳುವುದರಲ್ಲೂ ಅರ್ಥವಿದೆ ರುದ್ರ."

ಮೇಜರ್ ರುದ್ರನ ಚಿತ್ತ ಒಡನೆ ತನ್ನವರ ಬಳಿಗೆ ಹಕ್ಕಿಯಂತೆ ಹಾರಿತು.

ಟೊಂಗೆಯಿಂದ ಟೊಂಗೆಗೆ ಹಾರುವ ವಾನರ ಹಿಂಡು ಮರದ ಮೇಲೆ ಕಿರುಚಾಡುತ್ತಿವೆ. ಅವು ಹಾರಿದ ಭರಕ್ಕೆ ಟೊಂಗೆಯಲುಗಿ ಹಣ್ಣೆಲೆಗಳ ವೃಷ್ಟಿಯು ನಡೆಯಿತು.

ಸೂರ್ಯ ತಂಗಿದ. ತಂಗಾಳಿ ತಣ್ಣಗೆ ಬೀಸಿತು. ಕತ್ತಲೆಯ ತೆರೆ ಇಳೆಯನ್ನು ತೆರೆತೆರೆಯಾಗಿ ಆವರಿಸಹತ್ತಿತು. ಹೊರಗಡೆ ಸ್ವಲ್ಪ ಹೊತ್ತು

ಇಬ್ಬರೂ ಕುಳಿತಿದ್ದು ಅನಂತರ ಎದ್ದು ಒಳಗಡೆ ಹೋದರು. ದೀಪ ಉರಿಯುತ್ತಿತ್ತು. ತಂಡಿ ಗಾಳಿಯನ್ನು ತಡೆಗಟ್ಟಲು ಮುಂಬಾಗಿಲನ್ನು ಹಾಕಿದ ಅಜಿಲ. ಬೀರುವಿನಲ್ಲಿದ್ದ 'ಚೆಸ್' ಕಾಯಿಗಳನ್ನು ಮೇಜಿನ ಮೇಲಿಟ್ಟು "ಕೂತುಕೊಳ್ಳಪ್ಪಾ, ಒಂದು ಆಟ ಆಡೋಣ."

ಡಾ|| ಹುಸೇನ್ ಕುಳಿತ. ಬೀರುವಿನಲ್ಲಿದ್ದ ವಿಸ್ಕಿ ಸೀಸೆಗಳೂ ಹೊರಬಂದುವು. ಅಜಿಲ ಲೋಟೆಗಳನ್ನು ತಂದು ಮುಂದಿಟ್ಟ. ಒಳಗಡೆ ಯಿಂದ ಖಾದ್ಯವೂ ಆಗಮಿಸಿತು. ಇಬ್ಬರೂ ಸಾನಂದದಿಂದ ಕೈಹಚ್ಚಿದರು. ಬಳಿಯಲ್ಲಿದ್ದ ಪರಿಕರಣ ಯುದ್ಧರಂಗದ ವಿಷಯಗಳನ್ನು ಬಿತ್ತರಿಸುತ್ತಿತ್ತು. ಮೈ ಮನಸ್ಸುಗಳೆರಡೂ ಚಕಮಕಿಯಾದುವು.

ಮೇಜರ್ ರುದ್ರನ ಬೇಸರ ಗಾವುದ ದೂರ ಹಾರಿತು.

o o o o

"ಏ...! ಸೆಂಟ್ರೀ !" ದನಿ ಅಲ್ಲಿಂದಲೇ ಮೊಳಗಿತು.

ಕತ್ತಲೆಯ ತೆರೆಯನ್ನು ಭೇದಿಸಿ ಪ್ರಕಾಶಮಾನವಾದ ಬೆಳಕು ಹರಿದು ಬರುತ್ತಲೂ ಹಾದಿಯ ನೇರಕ್ಕೆ ಬೆಳಕಿನ ನೆಲೆಯಲ್ಲಿ ಮೂರು ಮಂದಿ ನಡೆದು ಬರುವುದನ್ನು ಸೆಂಟ್ರಿಯ ಗಮನ ಗ್ರಹಿಸಿತು. ಅವರಿನ್ನೂ ತಿರುವಿನ ಆಚೆಯೇ ಗ್ಯಾಸ್ ಲೈಟ್ ಟಾರ್ಚುಗಳ ಸಹಾಯದಿಂದ ಬಿರು ಬಿರನೆ ನಡೆದು ಬರುತ್ತಿದ್ದಾರೆ. ಯಾರಿಗಾದರೂ ಕಾಹಿಲೆಯೋ ಅಥವಾ ಗುಂಡೇಟು ತಿಂದವರೋ ಯಾರೋ ಗಡದ್ದಾಗಿ ಮಲಗಿರಬಹುದು ಎಂದ ಕೊಂಡ–ಸೆಂಟ್ರಿ. ಕೇಳಿಬಂದ ದನಿಯನ್ನು ಪುನಃ ಪುನಃ ಭಾವಿಸಿತು ಮನಸ್ಸು....ಯಾರಿರಬಹುದು ! ಕೂಜನ ಠಾಣ್ಯದವರೇ ! ಅಥವಾ ಗಿರಿಮಾ ಠಾಣ್ಯದವರೇ !

ಬೌವ್ ವಾ ವಾ ವಾ !

"ಛೀ ! ಜೂಲಿ ! ನಿನಗೇನಾಗಿದೆ !"

ಜೂಲಿ ದೊಡ್ಡ ದನಿಯಲ್ಲಿ ಎಡಬಿಡದೆ ಬೊಗಳತೊಡಗಿತು.

"ಏ...ಸೆಂಟ್ರೀ ಹಿಡಿಯಬಾರದೇನೋ ಇದನ್ನ !"

"ಜೂಲಿ !.. ಜೂಲಿ !"

ಬೌವಾ ವಾ ವಾ ವಾ.

ನಾಯಿ ತಡೆಗಟ್ಟಿದರೂ ನಿಲ್ಲದೆ ಪ್ರಕಾಶಮಾನವಾದ ಬೆಳಕು ನುಗ್ಗಿ ಬಂತು. ಹಿಂದೆಯೇ ಮೂವರು ಆಗಮಿಸಿದರು. ಸೆಂಟ್ರಿ ಅಲ್ಲಿಂದಲೇ ಕೇಳಿದ "ಯಾರಪ್ಪಾ ಅದು ?"

"ಇಷ್ಟೊತ್ತು ನಿದ್ದೆ ಮಾಡಿದ್ದೆಯೇನು ?" ಅಜಿಲ ಚೀರಿದ.

"ಈ ನಾಯಿ ಬೊಗಳಾಟದಿಂದ ಕೇಳಿಸುವುದಿಲ್ಲ."

"ನಿನಗೆ ಕೇಳಿ ಏನಾಗಬೇಕಾಗಿದೆ? ನಾಯಿ ಹಿಡಿದುಕೋ ಮೊದಲು."

ನಾಯಿ ಅಲ್ಲಿಂದಲೇ ಅಡ್ಡಗಟ್ಟಿ ಬೊಗಳಿ ಅವರು ಮುಂಬರಿಯದಂತೆ ತಡೆ ಹಾಕುತ್ತಿತ್ತು. ಅದನ್ನು ಹೆದರಿಸಿಕೊಂಡು ಅಜಿಲ ಮುಂದುವರಿದ. ಇನ್ನಿಬ್ಬರೂ ಸೆಂಟ್ರಿಗಳೂ ಜಗಲಿ ಹತ್ತಿದರು. ಅಜಿಲ ಅಸಮಾಧಾನದಿಂದ ನುಡಿದ. "ನೀನೆಂಥ ಸೆಂಟ್ರಿನೋ ? ನಿನ್ನಿಂದ ಒಂದು ನಾಯಿ ಹಿಡಿಯ ಲಿಕ್ಕೂ ಆಗುವುದಿಲ್ಲವೇ ?"

"ಕತ್ತಿನಲ್ಲಿ ಬೆಲ್ಟಿದ್ದರೆ ಹಿಡಿಯಬಹುದು. ಇಲ್ಲದಿದ್ದರೆ ಹಿಡಿಯುವುದು ಹೇಗೆ ?"

"ಕೋವಿಯ ಹಿಡಿಯಿಂದ ಇರಿಯಲಿಕ್ಕಾಗಲಿಲ್ಲವೇನು ?"

ಒಡನೆ ಸೆಂಟ್ರಿಗಳ ಮುಖದಲ್ಲಿ ಎಳೆನಗು ಮೂಡಿತು.

"ಹಿಡಿಯಲ್ಲಿ ಇರಿಯುವುದಾದರೆ ನಾಯಿಯೇಕಿರಬೇಕು ?"

ನಾಯಿ ದೊಡ್ಡ ದನಿ ತೆಗೆದು ಕರ್ಕಶವಾಗಿ ಒಂದೇ ಸಮನೆ ಬೊಗಳು ತ್ತಿರುವುದರಿಂದ ಒಬ್ಬರ ಮಾತು ಒಬ್ಬರಿಗೆ ಕೇಳಿಸದಷ್ಟು ಗದ್ದಲ.

"ಡಾಕ್ಟರನ್ನು ಎಬ್ಬಿಸು ಬೇಗ."

"ನಿನ್ನ ಜೀವ ಹಾರಲಿಕ್ಕುಂಟೇನು ? "

ಸರಸವಾಣಿ ಸಿಡಿದು ಬಿದ್ದಾಗ ಮನಸ್ಸು ಬಿಗಿದುಕೊಂಡಿತು.

"......."

ಈ ದರಿದ್ರ ನಾಯಿ ಮೊದಲು ಹಿಡಿ ಮೈಮೇಲೆ ಹಾರುತ್ತೆ. ಹಾಳು...ನಾಯಿ ! ನೂರು ಬಾರಿ ನೋಡಿದ್ದರೂ ಒಂದೇ, ನಾಯಿ ಬುದ್ಧಿ ಬಿಡುವಂತಿಲ್ಲ !"

"ಇಸ್ಸಿಸ್ಸೀ ! ಮೊದಲು ಹಿಡಿ !" ಅಜಿಲ ಸಿಡುಕಿದ.

ಸೆಂಟ್ರಿ ನಾಯಿಯನ್ನು ಗದರಿಸುತ್ತಲೇ ಕೇಳಿದ. "ಯಾರಿಗೆ ಏನಾಗಿದೆ ? ಏತಕ್ಕಾಗಿ ಬಂದದ್ದು ? ಈ ಸರಿ ರಾತ್ರಿಯಲ್ಲಿ ಬಂದಿದ್ದೀರಲ್ಲಾ ?"

"ರುದ್ರ ಸಾಹೇಬರಿಗೆ ಮೈ ಚೆನ್ನಾಗಿಲ್ಲ. ಡಾಕ್ಟರನ್ನು ಬೇಗ ಎಬ್ಬಿಸು."

ಸೆಂಟ್ರಿ ಠಾಣ್ಯದ ಬಲಮಗ್ಗುಲಿಗೆ ಹೋಗಿ ಕಿಟಕಿಯಲ್ಲಿ ಕರೆದ.

"ಜನಾಬ್ !"

"......."

"ಜನಾಬ್ !"

"......."

"ಜನಾಬ್ !"

ಡಾ|| ಹುಸೇನ್ ಹಾಸಿಗೆಯಿಂದಲೇ ಕೇಳಿದ "ಯಾರದು ?"

"ನಾನು ಸರ್ ಸೆಂಟ್ರಿ. ರುದ್ರ ಸಾಹೇಬರಿಗೆ ಮೈ ಚೆನ್ನಾಗಿಲ್ಲವಂತೆ. ಅಜಿಲ ಕರೆಯಲಿಕ್ಕೆ ಬಂದಿದ್ದಾನೆ."

"ರುದ್ರ ಸಾಹೇಬರಿಗೆ...?"

"ಹೌದು ಸರ್."

....ಅರೆ ! ಆಶ್ಚರ್ಯ ! ಅವನಿಗೇನಾಗಿರಬಹುದು ? ನಾನು ಅವನ ಠಾಣ್ಯ ಬಿಟ್ಟಾಗ ಹತ್ತುಗಂಟೆ. ಅದುವರೆವಿಗೂ ಚೆನ್ನಾಗಿದ್ದ. ಇಷ್ಟರೊಳಗಾಗಿ ಇನ್ನೇನಾಗಿರಬಹುದು ?

ಕಣ್ಣುಗಳಲ್ಲಿ ನಿದ್ದೆ ತುಂಬಿತ್ತು. ಏಳಲಾರದೆ ಎದ್ದು ಸ್ವಿಚ್ ಹಾಕಿ ಗಡಿಯಾರದ ಕಡೆ ನೋಟ ಹೊರಳಿಸಿದ. ನಿದ್ದೆಯ ಮಂಪರದಲ್ಲಿ ಅಂಕಿಗಳೂ ಸರಿಯಾಗಿ ಕಾಣವು. ಕಣ್ಣುಗಳನ್ನುಜ್ಜಿಕೊಂಡು ನೋಡಿದ. ಮುಳ್ಳು ಹನ್ನೆರಡರ ಸಂಖ್ಯೆಯನ್ನು ದಾಟಿತ್ತು. ಅಷ್ಟರೊಳಗಾಗಿ ಏನಾಗಿರಬಹುದು? ಹೃದಯಾಘಾತ....ಛೆಃ ! ಛೆಃ ಆಗಿದ್ದಿರಲಾರದು.

ಡಾ|| ಹುಸೇನ್ ರಾತ್ರಿಯುಡುಪಿನಲ್ಲೇ ಹೊರಬಂದ.

ಅಜಿಲ ಕೈ ಮುಗಿದ.

"ಮೇಜರ್ ಸಾಹೇಬರಿಗೆ ಮೈ ಚೆನ್ನಾಗಿಲ್ಲ."

"ಮೇಜರ್ ರುದ್ರ ಅವರಿಗೆ ?"

"ಹೌದು." ಒಣಗಿದ ತುಟಿಯನ್ನು ನಾಲಿಗೆಯಿಂದ ಸವರಿಕೊಂಡು ಅಜಿಲ ಅಂದ "ತ್ವರೆ ಮಾಡಿ ಡಾಕ್ಟರ್....ಅವರು .." ನಾಲಿಗೆ ತೊದಲಿತು.

"ಏನಾಗಿದೆ ? ಏನಾದರೂ ಹೇಳಿದ್ದಾರೆಯೇ ? ಅಥವಾ ಚೀಟಿ...?"

"ಏನೂ ಇಲ್ಲ ಸರ್" ದನಿ ವಿಜಾತೀಯವಾಗಿತ್ತು.

ಡಾಕ್ಟರ್ ಹುಸೇನ್ ಒಂದು ಕ್ಷಣ ಯೋಚಿಸಿ ಒಳಹೋದ. ಮೈಯೆಲ್ಲ ಅಚ್ಚರಿಯ ಬೀಡಾಗುವುದರೊಂದಿಗೆ ವಿಷಯ ಒಗಟಾಗಿ ತೋರಿತು. ಹಿಂದಿನ ದಿನ ಕುಡಿದುದೂ ಸ್ವಲ್ಪ ಹೆಚ್ಚಾಗಿತ್ತೇನೋ. ತಲೆಯಂತೂ ಭಾರ. ಇನ್ನಿಷ್ಟು ಹಾಯಾಗಿ ನಿದ್ದೆ ಮಾಡೋಣವೇ ಎಂಬಷ್ಟು ತೂಕಡಿಕೆ. ಆದರೂ ಹೋಗದೇ ಉಳಿಯುವಂತಿಲ್ಲ. ಶೌಚದ ಮನೆಗೆ ಹೋಗಿ ತಲೆ ಭಾರ ಇಳಿಯುವಷ್ಟು ತಣ್ಣೀರು ಸುರಿದು ಮುಖ ಮಜ್ಜನ ಮಾಡಿ ಪ್ಯಾಂಟು ತೊಟ್ಟು ತನ್ನ ಔಷಧಿಯ ಪೆಟ್ಟಿಗೆಯ ಸಹಿತ ಗಡಬಡ ಹೊರಟ. ಅಜಿಲನೊಡನೆ ಬಂದ ಸೆಂಟ್ರಿ ಪೆಟ್ಟಿಗೆಯನ್ನು ತೆಗೆದು ಕೊಂಡ. ಮಗದೊಬ್ಬ ಸೆಂಟ್ರಿ ಗ್ಯಾಸ್ ಲೈಟ್ ಹಿಡಿದು ಮುಂದೆ ಹೊರಟ. ಅಜಿಲನ ಕೈಯಲ್ಲಿದ್ದ ಟಾರ್ಚು ಸಮಯ ಸಂದರ್ಭಗಳಲ್ಲಿ ಬೆಳಕು ಬೀರುತ್ತಿತು. ಹಾದಿ ರಿಪೇರಿಯಲ್ಲಿದ್ದುದರಿಂದ ಕಳೆದ ಮೂರು ನಾಲ್ಕು ದಿನಗಳಿಂದ ಕಾಲು ನಡಿಗೆಯಲ್ಲಿಯೇ ಪಯಣ. ಹೆಮ್ಮರಗಳ ದಟ್ಟಡವಿಯಲ್ಲಿ ಹಾದಿ ಹರಿದಿದೆ. ರಸ್ತೆ ರಿಪೇರಿಯ ಸಾಧನೆಗಳೆಲ್ಲವೂ ಅಲ್ಲಲ್ಲಿ ಅಡ್ಡಾದಿಡ್ಡಿ ಬಿದ್ದಿದ್ದುವು. ಕಲ್ಲು ಜಲ್ಲಿಗಳಲ್ಲಿ ಹರಿಹಾಯುತ್ತ ನಾಲ್ವರೂ ಹಾದಿ ನಡೆದರು.

"ನಾನು ಅಲ್ಲಿಂದ ಹೊರಟ ನಂತರ ಏನಾಯಿತು ? ಮೇಜರ್ ಸಾಹೇಬರು ನಿದ್ದೆ ಮಾಡಲಿಲ್ಲವೇ ?" ಅದೇ ಚಿಂತನೆಯಲ್ಲೇ ಕೇಳಿದ ಹುಸೇನ್.

"ನೀವು ಹೋದ ನಂತರ ಅವರು ಸ್ವಲ್ಪ ಹೊತ್ತು ಅಂಗಳದಲ್ಲಿ ಅಡ್ಡಾಡುತಿದ್ದರು. ಆಗ ಅವರು ಸುಖವಾಗಿದ್ದರು." ದನಿ ಭಾರ ವಾಗಿತ್ತು.

"ಅನಂತರ...?"

"ಅಂಗಳದಲ್ಲಿ ಅಡ್ಡಾಡುತ್ತಿರುವಾಗ ಟಪ್ಪಾಲು ಬಂದಿತಂತೆ. ನಾನು ಒಳಗಡೆ ಇದ್ದೆ, ನನಗದು ತಿಳಿಯದು."

ಸೆಂಟ್ರಿ ನಡುವೆ ಬಾಯಿ ಹಾಕಿದ. "ಪತಾನ್‌ಕೋಟ್‌ಗೆ ಹೋಗಿದ್ದ ಟ್ರಕ್ ಬಂದು ಹೋಯಿತು. ಆಗ ಹೊರಗಡೆ ಇದ್ದ ಮೇಜರ್ ಸಾಹೇಬರು ಟಪ್ಪಾಲು ತೆಗೆದುಕೊಂಡಿರಬಹುದೆಂದು ನಮ್ಮ ಊಹೆ. ನಾವೂ ಸಹ ನೋಡಲಿಲ್ಲ. ಅವರು ಕೊಠಡಿಗೆ ಹೋಗಿ ಕದ ಮುಚ್ಚಿ ಕೊಳ್ಳುವವರೆಗೆ ಚೆನ್ನಾಗಿದ್ದರು."

ಮೇಜರ್ ರುದ್ರ ಚೆಸ್ ಆಡುವಾಗ ಅಂದಿದ್ದ "ಒಂದು ವಾರದಿಂದ ಟಪ್ಪಾಲೇ ಬಂದಿಲ್ಲ."

ಆದರೂ ಟಪ್ಪಾಲಿಗೂ ಅವನ ಕಾಹಿಲೆಗೂ ಏನು ಸಂಬಂಧ ?

"ಟ್ರಕ್ ಬಂದು ಹೋದನಂತರ ಅವರು ಒಳಗಡೆ ಹೋದರು. ಮಲಗಲು ಹೋದರೆಂದು ನಾವು ಮುಂದಿನ ಕದ ಮುಚ್ಚಿದೆವು. ಒಳಗಡೆ ಇದ್ದಕ್ಕಿದ್ದಂತೆ ಅವರು ಹುಚ್ಚಾಗಿ ಭಯಂಕರವಾಗಿ ಚೀರಟ್ಟು ಗಲಾಟೆ ಮಾಡತೊಡಗಿದರು. ಅವರು ಕೊಠಡಿಯ ಅಗಣಿ ಹಾಕಿರುವುದರಿಂದ ನಾವು ಒಳಗಡೆ ಹೋಗುವಂತೆಯೂ ಇಲ್ಲ."

ಅರೆ ! ಏನಿದ್ದಿರಬಹುದು ? ಇದೆಂಥ ಆಶ್ಚರ್ಯ ?

ಅರ್ಧ ಮೈಲಿಯ ಹಾದಿ ಸರ ಸರ ಸಾಗಿತು. ಡಾ|| ಹುಸೇನ್ ಮೇಜರ್ ರುದ್ರನ ಠಾಣ್ಯದ ಜಗಲಿಯೇರಿದ. ಮರದ ಟೊಂಗೆಯ ಮೇಲೆ ವಿಕೃತ ಸ್ವರದಲ್ಲಿ ಗೂಗೆ ಗೂಳಿಟ್ಟಿತು. ಗೂಾಾ ! ಗೂಾಾ !

"ತ್ಚ್ಚಾ......!" ಎಂದ ಅಜಿಲ. ದನಿಯಲ್ಲಿ ಸಿಡುಕಿತ್ತು.

ವಿಕೃತ ಸ್ವರ ಪುನಃ ಹೊರ ಹೊಮ್ಮಿತು ಗೂಾಾ ! ಗೂಾಾ !

ಡಾ|| ಹುಸೇನ್ ನೋಟವನ್ನು ಗಡಿಯಾರದ ಮೇಲೆ ಹೊರಳಿಸಿದ. ಹೊತ್ತು ಅದೇ ತಾನೆ ಒಂದರ ಗಡಿಯನ್ನು ದಾಟಿತ್ತು. ಬಾಬೂರಾವ್ ಸೆಂಟ್ರಿಯರು ಉದ್ವಿಗ್ನತೆಯಿಂದ ಜಗಲಿಯಲ್ಲಿ ಕಾದಿದ್ದನ್ನು ಡಾ|| ಹುಸೇನ್ ಗ್ರಹಿಸಿದ. ಸೆಂಟ್ರಿ ಗ್ಯಾಸ್ ಲೈಟಿನ ಬೆಳಕನ್ನು ನಂದಿಸಿದ.

ದೋಲಿ ಬಾಲ ಆಡಿಸಿದರೂ ಬೊಗಳಿತು.

ಡಾ|| ಹುಸೇನ್ ಬಾಬೂರಾವ್‌ನನ್ನು ಪಿಸು ದನಿಯಲ್ಲಿ ಕೇಳಿದ "ಹೇಗಿದ್ದಾರೆ ಮೇಜರ್ ? ಏನಾದರೂ ಹೇಳಿದರೆ ?"

"ಇಲ್ಲ....ಬಾಗಿಲು ತೆರೆಯಲಿಲ್ಲ."

ಡಾ|| ಹುಸೇನ್ ಬಾಗಿಲನ್ನು ಮೆಲ್ಲನೆ ಅದುಮಿ ನೋಡಿದ. ಒಳಗಡೆಯಿಂದ ಅಗಣಿ ಹಾಕಲ್ಪಟ್ಟಿತ್ತು. ಕಿಟಕಿಯಲ್ಲೂ ಬಾಗಿಲ ಸಂದಿಯಲ್ಲೂ ಬೆಳಕು ಬೆಳ್ಳನೆ ಹರಿದಿತ್ತು. ಕಿಟಕಿಯ ಕದಗಳು ಮುಚ್ಚಿದ್ದುವು. ಒಳಗಡೆ ಸದ್ದಿಲ್ಲ. ಹುಸೇನ್ ಸ್ವಲ್ಪ ಹೊತ್ತು ಬಾಗಿಲ ಬಳಿ ನಿಂತ.

"ಅಯ್ಯೋ... ! ಕಾಲಿಮಾ...ನೀನೆಲ್ಲಿದ್ದಿ ?" ಆರ್ತತೆಯಿಂದ ಕೂಗಿದ ರುದ್ರ.

ಡಾ|| ಹುಸೇನ್ ಮೆಲ್ಲನೆ ಕದ ತಟ್ಟಿದ.

"......"

ಹುಸೇನನ ಪ್ರಯತ್ನ ಮತ್ತೆ ಸಾಗಿತು.

"ಮೇಜರ್ ಸಾಬ್ !"

"ಯಾರದು ?"

"ನಾನಪ್ಪಾ ...ಹುಸೇನ್."

"ಹುಸೇನ್....? ಯಾರು ಕರೆದರು ನಿನ್ನ ?"

"ನಾನೇ ಬಂದೆ."

"ಹೋಗು ! ಈಗಲೇ ಹೊರಟು ಹೋಗು !!" ದನಿಯಲ್ಲಿ ಆವೇಶವಿತ್ತು, ಚೀತ್ಕಾರವಿತ್ತು.

"ಒಂದಿಷ್ಟು ಬಾಗಿಲು ತೆಗೆ. ಅನಂತರ ಹೋಗುವೆ."

"ಹೋಗು !!"

"ಮೇಜರ್...."

"ಹೋಗು !!"

"ಈ ಸರಿ ರಾತ್ರಿಯಲ್ಲಿ ನಿನಗಾಗಿ ಬಂದೆ. ಒಂದಿಷ್ಟು ನೋಡಿ ಹೋಗುವೆ."

"......"

"ರುದ್ರ ...ರುದ್ರ ಸಾಬ್ !"

"......"

"Please"

"......"

"ದಯವಿಟ್ಟು ಕ್ಷಮಿಸು....ಪ್ಲೀಸ್ !"

ಧಡೀರನೆ ಬಾಗಿಲು ತೆರೆದು ಮೈಮೇಲೆ ಹಾರಲಿರುವ ಹೆಬ್ಬುಲಿಯಂತೆ ಬಣ್ಣಗೆದರಿ ಕೆಂಗಣ್ಣಾಗಿ ನಿಂತ ಮೇಜರ್ ರುದ್ರ. ಅಬ್ಬಾ ! ಭಯಾನಕ ! ಮೊದಲೇ ಉದ್ದಂಡ ದೇಹ. ಆಜಾನುಬಾಹು. ದಾಳಿಂಬೆಯ ಬಣ್ಣ. ತಿದ್ದಿದ ಮೀಸೆ. ತೀಕ್ಷ್ಣವಾದ ಕಣ್ಣುಗಳು...

ಡಾ|| ಹುಸೇನನ ಎದೆ ಮೊದಲ ನೋಟಕ್ಕೆ 'ಜಲ್' ಎಂದಿತು. ಒಂದು ಹೆಜ್ಜೆ ಹಿಮ್ಮೆಟ್ಟಿ ನಿಂತ. ಏನಿರಬಹುದೆಂಬುದನ್ನು ಊಹಿಸಲಿಕ್ಕೂ ಅವನಿಂದ ಸಾಧ್ಯವಾಗಲಿಲ್ಲ. ಏನೆನ್ನಬೇಕೋ ಅದೂ ಹೊಳೆಯಲಿಲ್ಲ. ಒಂದು ಗಳಿಗೆ ದಂಗು ಬಡಿದು ನಿಂತ. ಹೃದಯ ವ್ಯಾಪ್ತಿಗೆ ಮೀರಿ ಮಿಡಿಯಿತು. ತಲೆಯಲ್ಲಿ ಕೆರಳಿದ್ದ ನೂರು ಭಾವಗಳು ಒಮ್ಮೆಲೆ ತಟಸ್ಥವಾದುವು. ಮೇಜರ್ ರುದ್ರ ಮಾತಾಡಲಿಲ್ಲ. ಹಿಂದಿರುಗಿ ಹೋಗಿ ಹಾಸಿಗೆಯ ಮೇಲೆ ಬೋರಲಾಗಿ ಬಿದ್ದ—ತುಂಡುಗಡಿದ ಹೆಮ್ಮರದಂತೆ.

ಏನಿರಬಹುದು ?

ಬಾಲ್ಯದಿಂದಲೂ ತಾನು ಕಂಡ ರುದ್ರ. ಶಾಲಾ ಕಾಲೇಜುಗಳಲ್ಲಿ ಒಡನಾಡಿದ ರುದ್ರ, ಮಿಲಿಟರಿ ಕ್ಷೇತ್ರಕ್ಕೂ ಒಂದಿಗೆ ಕಾಲಿಟ್ಟ ರುದ್ರ. ಅಂದಿನಿಂದ ಇಂದಿನವರೆಗೆ ಅವನು ಇಷ್ಟು ಭಯಂಕರನಾದುದನ್ನು ಕಂಡಿರಲಿಲ್ಲ. ಕೇಳಿರಲಿಲ್ಲ. ಬಹುಶಃ ಯುದ್ಧಭೂಮಿಯಲ್ಲೂ ರುದ್ರ ಇಷ್ಟು ಉಗ್ರನಾಗಿದ್ದಿರಲಾರ. ಆಶ್ಚರ್ಯ...ಪರಮಾಶ್ಚರ್ಯ !

ಏನು ಹೇಳಲಿಕ್ಕೂ ತಿಳಿಯಲಿಲ್ಲ. ಏನು ಮಾಡಲಿಕ್ಕೂ ತೋರಲಿಲ್ಲ. ಒಂದು ಗಳಿಗೆ ಮರವಟ್ಟು ನಿಂತ. ಅಂದಿನ ಟಪ್ಪಾಲು ಮೊದಲು ಸ್ಮೃತಿ ಪಥದಲ್ಲಿ ಸುಳಿಯಿತು. ಅದೇನಾದರೂ ಮೇಜಿನ ಮೇಲೆ ಟೀಪಾಯಿಯ ಮೇಲೆ ಬಿದ್ದಿರಬಹುದೇ ಎಂದು ಕಣ್ಣುಗಳು ಎಲ್ಲೆಡೆಯೂ ತಡುಕಿದುವು. ಮೇಜಿನ ಮೇಲೆ ಒಂದೆರಡು ದೊಡ್ಡ ಪುಸ್ತಕಗಳು ಹೊರತು ಇನ್ನೇನೂ ಕಾಣಲಿಲ್ಲ. ನೋಟ ಕಸದ ಬುಟ್ಟಿಯನ್ನೂ ತಡುಕಿತು. ಎಲ್ಲಿಯೂ

ಕಾಣಸಿಗಲಿಲ್ಲ. ನೇರವಾಗಿ ಅವನ ಮಂಚದ ಬಳಿಗೆ ಹೋದ. ಪಕ್ಕಲು ಎದೆ ದಡದಡ ಮಿಡಿಯಿತು. ಅವನು ಅತ್ತ ತಿರುಗಿ ಮಲಗಿದುದರಿಂದ ಹುಸೇನ್ ಬಳಿಗೆ ಬಂದುದನ್ನು ಗಮನಿಸಲಿಲ್ಲ. ಬೆನ್ನಿನ ಮೇಲೆ ಕೈಯಿಟ್ಟು ಡಾ|| ಹುಸೇನ್ ಮೆಲುದನಿಯಲ್ಲಿ ಕರೆದ "ಮೇಜರ್ ಸಾಬ್ !"

"......"

"ರುದ್ರ ಸಾಬ್ !"

ರೋಷಾವೇಷದಿಂದ ಒಂದೇ ಬಾರಿಗೆ ರಪ್ಪನೆ ಅಪ್ಪಳಿಸಿ ಮುಗಿಸಿ ಬಿಡುವವನಂತೆ ಧಡಕ್ಕನೆ ಇತ್ತ ತಿರುಗಿದ ಮೇಜರ್ ರುದ್ರ. ಕೆಂಗಣ್ಣು ಗಳಲ್ಲಿ ನೀರಾಡುತ್ತಿದೆ. ಮುಖ ಮೈಗಳು ಬೆವರಿನಿಂದ ತೊಯ್ದಿವೆ. ಸಿಡಿ ದೊಡೆಯಲಿರುವ ದಡಾಕಿಯಂತೆ ಬುಸುಗುಟ್ಟುತ್ತಿದ್ದಾನೆ....!

ಅಬ್ಬಾ ! ರುದ್ರ ಭಯಂಕರ !

ಅವನ ರೀತಿ ಎದೆಯನ್ನು ತಲ್ಲಣಿಸಿತು. ಆಸಾದ ಪುಸ್ತಕವೂ ನಸು ಕಂಪನದ ಅಲೆ ಹರಿದಾಡಿ ಹೋಯಿತು. ತನು ತತ್ತರಿಸಿದರೂ ಆತ್ಮ ರಕ್ಷಣೆಗೆ ಸಿದ್ಧನಾಗಿಯೇ ಇದ್ದ ಡಾ|| ಹುಸೇನ್. ಬಾಬೂರಾವ್, ಅಜಿಲ ಸೆಂಟ್ರಿ ಮೊದಲಾದವರು ಬಾಗಿಲ ಬಳಿ ಮೇಜಿನ ಬಳಿ ಬೆಕ್ಕಸಬೆರಗಾಗಿ ನಿಂತಿದ್ದರು. ಮರುಕ್ಷಣದಲ್ಲಿ ಮೇಜರ್ ರುದ್ರ ಚಂಗನೆ ಹುಸೇನನ ಮೇಲೆ ಹೆಬ್ಬುಲಿಯಂತೆ ಹಾರಿದ. ಹಿಂದಿದ್ದ ಬಾಬೂರಾವ್ ಅಜಿಲರು ಧಾವಿಸಿ ಬಂದರು. ಎಲ್ಲರೂ ಕೂಡಿ ಸಾಹಸಪಟ್ಟು ಮದಿಸಿದ ಮರಿಯಾನೆಯನ್ನು ಅದುಮಿ ಹಿಡಿಯುವಂತೆ ಹಿಡಿದರು. ಹಲ್ಲುಗಳನ್ನು ಕಟಕಟನೆ ಕಡಿ ಯುತ್ತಾ ಹೂಂಕರಿಸಿದ–ರುದ್ರ. ಕೆಂಗಣ್ಣುಗಳಲ್ಲಿ ಕಿಡಿಗಳುದುರುವಷ್ಟು ಹರಿತವಾಗಿತ್ತು ಅರಳಿದ ತೀಕ್ಷ್ಣ ದೃಷ್ಟಿ. ಸಿಟ್ಟು ರೋಷಗಳ ಭರದಲ್ಲಿ ಮೈ ಗಡಗಡ ನಡಗುತಿತ್ತು, ರುದ್ರ ಮತ್ತೆ ಹೂಂಕರಿಸಿದ. ಹಣೆ ನಿರಿಗಟ್ಟಿತ್ತು. ಮೇರೆ ಮೀರಿದ ಸಂತಾಪದಿಂದ ಎದೆ ಏರಿಳಿಯುತಿತ್ತು, ಆವನನ್ನು ಹೆಡೆ ಮುಡಿಗಟ್ಟಿದಂತೆ ಅಲುಗಗೊಡದೆ ಎಲ್ಲರೂ ಅದುಮಿ ಹಿಡಿದೇ ಇದ್ದಾರೆ.

"ರುದ್ರ....! ರುದ್ರಸಾಬ್ ! ಏನಿದು ? ಏಕೆ ಹೀಗೆ...?"

ರುದ್ರ ಮಾತಾಡಲಿಲ್ಲ, ಹುಲ್ಲುಗಳು ಕಟಕಟ ಸದ್ದುಗೈದುವು.

"ರುದ್ರ ಮಹಾಶಯಾ !"

ಅಜಿಲ ಸೆಂಟ್ರಿಯರು ಅವನನ್ನು ಹಿಂದೆ ಹಿಂದೆ ನಡೆಸಿ ಪಲ್ಲಂಕದ ಮೇಲೆ ಕೂಡಿಸಿ ಏಳದಂತೆ ಅದುಮಿ ಹಿಡಿದರು. ಹುಸೇನ್ ಎದುರಾಗಿ ನಿಂತ.

"ಮೇಜರ್ ಸಾಬ್ !"

"ಹು...ಸ್ಸೇನ್ !" ದನಿ ರೋಷಪೂರ್ಣವಾಗಿತ್ತು. ಹುಬ್ಬುಗಳು ಗಂಟಿಕ್ಕಿದುವು. ಬೆವರು ಹುಚ್ಚೆದ್ದು ಹರಿಯಿತು. ಮುಖ ರಕ್ತವರ್ಣ ರಂಜಿತವಾಯಿತು.

"ಸ್ವಲ್ಪ ಸಮಾಧಾನ...ಹೊಂದು ರುದ್ರ."

"ಸ್ಸಮಾಧಾನ...ಸ್ಸಮಾಧಾನ !"

ಮೇಜರ್ ರುದ್ರ ಮೈಯೊದರಿದೊಡನೆ ಹಿಡಿದ ಮೂವರ ಹಿಡಿತವೂ ಸಡಿಲಗೊಂಡಿತು. ಎದ್ದು ಮುನ್ನುಗ್ಗುವುದರೊಳಗಾಗಿ ಮೂವರೂ ಮತ್ತೆ ಅದುಮಿ ಹಿಡಿದರು.

"ರೊಚ್ಚಿಗೇಳುವುದರಿಂದ ಏನಾದೀತು ಹೇಳು ರುದ್ರ ?"

"ಹುಸೇನ್ ! ನಾವಿಲ್ಲಿ ದೇಶರಕ್ಷಣೆಗಾಗಿ—ದೇಶದ ಒಂದೊಂದು ಇಂಚು ನೆಲಕ್ಕಾಗಿ ನಮ್ಮ ನೆತ್ತರನ್ನು ಬಸಿಯುತ್ತೇವೆ...!" ಉಬ್ಬಿದ ತಿದಿಯಂತೆ ಎದೆ ಏರಿ ಇಳಿಯಿತು. ಕಣ್ಣುಗಳಂಚಿನಲ್ಲಿ ಹರಿದಾಡುತ್ತಿದ್ದ ಕಂಬನಿ ಕೆನ್ನೆಯ ಮೇಲೆ ಧಾರಾಕಾರವಾಗಿ ಹರಿಯಿತು. ಹುಚ್ಚೆದ್ದು ಹರಿದ ಬೆವರು ಮುಖ ಮೈಗಳನ್ನು ತೊಯ್ಸಿತು. ಅಜಿಲ ಟವಲ್ಲನ್ನು ತಂದು ಮುಖ ಮೈಗಳನ್ನು ಮೆಲ್ಲನೆ ಒರಿಸಿದ.

"ಹೌದು ..."

"ಹಿಂದೂ ರಾಜ್ಯದಲ್ಲಿ ಶಾಂತಿ ರಕ್ಷಣೆಗಾಗಿ ಮುಸ್ಲಿಮರಿಗೆ ಹಾಲೆರೆಯು ತಿದ್ದೇವೆ."

"ನಿಜ..."

"ಈ ನೀಚ ಜನಾಂಗವನ್ನು ಸಿಗಿದು ತೋರಣ ಕಟ್ಟದ ಹೊರತು ನನ್ನ ಎದೆಯ ದಾಹ ಇಂಗುವುದಿಲ್ಲ!" ಹಿಡಿದಿಟ್ಟಿದ್ದ ಎಲ್ಲಾ ಉಸಿರಿನೊಡನೆ ಘರ್ಜನೆ ಹೊರಬಿತ್ತು.

"ಆಗಲಿ, ಏನು ವಿಷಯ ಎಂಬುದನ್ನಾದರೂ ಹೇಳು ರುದ್ರ ?"

"ಏನೆಂದು ಹೇಳಲಿ ? ನೀನೆಲ್ಲಾದರೂ ಸಾಯಿ ! ಹೋಗು ಬದುಕಿಕೊ ನನ್ನ ಕಣ್ಣೆದುರಿಗೆ ನಿಲ್ಲಬೇಡ !"

"ಸಮಾಧಾನ ಹೊಂದು ರುದ್ರ."

"ಸಮಾಧಾನ !!" ರೋಷದಿಂದ ಕಚ್ಚಿದ ಭರಕ್ಕೆ ತುಟಿ ಹರಿದು ನೆತ್ತರು ಚಿಮ್ಮಿತು.

ಆ ಭೀಕರ ಸ್ಥಿತಿಯನ್ನು ನೋಡಲಾರದೆ ಐದು ಕ್ಷಣ ಕಣ್ಣು ಮುಚ್ಚಿ ನಿಂತ ಹುಸೇನ್.

"ಹೋಗು !" ರುದ್ರ ಘರ್ಜನೆ ಮಾಡು ಮುಟ್ಟುವಂತೆ ಮೊಳಗಿತು. ಅದುಮಿ ಹಿಡಿದ ಮೂವರೂ ಕಲ್ಲಿಗಿಂತ ಕಲ್ಲಾಗಿ ನಿಂತರು.

"ರುದ್ರ...."

"ಹೂಂ ! ಹೊರಡು !!" ಮಾಡು ಮೊಳಗಿತು "ಹೂಂ ! ಹೊರಡು !!"

ಕೋಪದ ಭರದಲ್ಲಿ ಮೈ ಒಂದೇ ಸಮನೆ ಅದುರುತಿತ್ತು.

ಡಾ॥ ಹುಸೇನ್ ಮರವಟ್ಟು ನಿಂತ. ಐದು ನಿಮಿಷಗಳು ಮೌನ ವಾಗಿ ಉರುಳಿದುವು. ಹಿಡಿದವರು ಹಿಡಿದೇ ಇದ್ದಾರೆ. ಮೈಸೋತು ಬವಳಿ ಬಂದಂತೆ ಹಿಂದಕ್ಕೆ ಉರುಳಿದ ರುದ್ರ. ಮೂವರೂ ಅವನನ್ನು ನೇರವಾಗಿ ಮಲಗಿಸಿದರು. ರುದ್ರ ಸೋತು ಹಣ್ಣಾಗಿ ವಿಜಾತೀಯವಾದ ದನಿಯಲ್ಲಿ ಅಂದ. "ಹುಸೇನ್ ! ಪುಸ್ತಕದಡಿಯಲ್ಲಿ ಟೆಲಿಗ್ರಾಮ್ ಇದೆ ನೋಡು !"

ಹುಸೇನ್ ತಟ್ಟನೆ ಮೇಜಿನೆಡೆಗೆ ಹೋದ. ಪುಸ್ತಕದಡಿಯಲ್ಲಿ ತಂತಿ ವರ್ತಮಾನವಿತ್ತು. ಕೈಗೆ ತೆಗೆದುಕೊಂಡ. ಬರೀ ಹೆಂಗಳೆಯರಿದ್ದ ರುದ್ರನ ಐದು ಮಂದಿಯ ಸಂಸಾರವನ್ನು ಮುಸ್ಲಿಮರು ಅಮಾನುಷವಾಗಿ ಮುಗಿಸಿದ್ದ ವಿಷಯವನ್ನು ತಂದಿತ್ತು – ಅದು. ಕೈಗಳು ನಡುಗಿ ಟೆಲಿಗ್ರಾಂ ಜಾರಿತು.

ಅಬ್ಬಾ....ಭಯಂಕರ !

ಬರಿಯ ಹೆಂಗಳೆಯರೇ ಇದ್ದ ಸಂಸಾರದ ಮೇಲೆ ಮುಸ್ಲಿಮರು ಧಾಳಿ ಮಾಡಿಯಾರೆಂಬುದನ್ನು ಡಾ|| ಹುಸೇನನಿಗೆ ಊಹಿಸುವುದೂ ಕಷ್ಟ ವಾಯಿತು.

ಅಯ್ಯೋ, ದೇವರೇ !

o o o o

ಡಾ|| ಹುಸೇನನಿಗೆ ಒಮ್ಮೆಲೆ ಎದೆಯ ನೆತ್ತರು ಹೆಪ್ಪುಗಟ್ಟಿದಂತೆ ಭಾಸವಾಯಿತು. ಕಾಣದ ಕೈಗಳು ಹೃದಯವನ್ನು ಸಾಸಿರ ಸಾಸಿರ ಪರಿಯಲ್ಲಿ ಹಿಸುಕಿದುವು. ಹುಸೇನ್ ನಿಂತಲ್ಲೆ ಮರವಟ್ಟು ನಿಂತ. ಏನು ಹೇಳಬೇಕೋ ತಿಳಿಯುಲಿಲ್ಲ. ವಿಷಯ ಹೌದೋ ಅಲ್ಲವೋ ಯೋಚಿಸಲು ಬರುವಂತಿಲ್ಲ. ನರನಾಡಿಗಳಲ್ಲಿ ಸಂತಾಪದ ಝರಿ ಹರಿದಾಡಿತು.

ಡಾ|| ಹುಸೇನನಿಗೆ ಮೇಜರ್ ರುದ್ರನ ಕುಟುಂಬದ ಪರಿಚಯ ಚೆನ್ನಾಗಿತ್ತು. ಮೇಜರ್ ರುದ್ರ ಹರಿದ್ರಾಪುರದ ನಿವಾಸಿ. ನೆರೆಯ ಊರಾದ ಕಾಂಚೀಪುರ ಹುಸೇನನ ಹುಟ್ಟೂರು. ಹುಸೇನನ ವಿದ್ಯಾಭ್ಯಾಸ ಹರಿದ್ರಾಪುರದಲ್ಲೇ. ಶಾಲಾ ಕಾಲೇಜುಗಳ ಸ್ನೇಹಬಳ್ಳಿ ರುದ್ರನ ಮನೆತನಕವೂ ಕುಡಿ ಚಾಚಿತ್ತು. ಇತ್ತೀಚೆಗೆ ಒಂದು ತಿಂಗಳು ರಜ ತೆಗೆದುಕೊಂಡು ಹರಿದ್ರಾಪುರ ಕಾಂಚೀಪುರಗಳಿಗೆ ಹೋಗಿ ಬಂದಿದ್ದ ಹುಸೇನ್ ಹರಿದ್ರಾಪುರದಲ್ಲಿ ಮೇಜರ್ ರುದ್ರನ ಮನೆಗೂ ಹೋಗಿ ಅವರ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಬಂದು ರುದ್ರನಿಗೆ ವರದಿ ಮಾಡಿದ್ದ. ರುದ್ರನ ತಾಯಿಯೊಂದಿಗೆ ಸತಿ ಅಮೃತಳೂ ಚಿಕ್ಕ ಮೂವರು ಹುಡುಗಿಯರೂ ಆಗಾಗ್ಗೆ ರಜ ದಿನಗಳಲ್ಲಿ ಗಿರಿಮಾ ಠಾಣ್ಯಕ್ಕೆ ಬಂದು ಹೋಗುತ್ತಿದ್ದುದುಂಟು. ಹಾಗೆ ಬಂದಾಗಲೆಲ್ಲ ಮೂರು ಮುದ್ದು ಹುಡುಗಿಯರು ಡಾ|| ಹುಸೇನ್ ದಾದನ ಮಠಾರಕ್ಕೆ ಧಾಳಿ ಇಡದೆ ಬಿಡುತ್ತಿರಲಿಲ್ಲ. ನೆಗಡಿ ಇಲ್ಲದಿದ್ದರೂ ನೆಗಡಿಯಾಗಿದೆ. ದಾದಾ ! ಕೆಮ್ಮಲು ಇಲ್ಲವಾದರೂ ಬಲು ಕೆಮ್ಮಲು ದಾದಾ ! ಎಂದೆಲ್ಲಾ ದಾದನಿಗೆ ಕಾಟ ಕೊಟ್ಟುದುಂಟು. ಅದಕ್ಕೆಲ್ಲಾ ಈ ದಾದಾ ಕೊಡುತ್ತಿದ್ದ ಔಷಧ ಚಾಕಲೆಟ್, ಪೆಪ್ಪರ್‌ಮೆಂಟ್ !

ಅಷ್ಟಕ್ಕೂ ಅವರು ಸುಮ್ಮನಿರಬೇಕಲ್ಲ, ಈ ದಾದನ ಮನೆಗೆ ಏಕೆ ಬರಬೇಕೋ ? ಒಂದು ತಿಂಡಿಯಿಲ್ಲ – ತೀರ್ಥವಿಲ್ಲ. ಚಾಕಲೆಟ್, ಪೆಪ್ಪರ್‌ಮೆಂಟ್ ಅಂಗಡಿಯಲ್ಲಿ ದೊರೆಯುದೇ ? ಇಷ್ಟಕ್ಕೆ ಇಲ್ಲಿಗೆ ಬರಬೇಕೇ ? ಎಂದು ಕುಚೋದ್ಯಗೈಯುತ್ತಿದ್ದುದೂ ಉಂಟು. ಅಂತಹ ಹಾಲ್ಗೆನ್ನೆಯ ಹಸುಮಕ್ಕಳನ್ನು ಕೊಲೆಗೈದುದಾದರೂ ಹೇಗೆ ? ಛೀ ! ಛೀ ! ಎಂತಹ ಅನ್ಯಾಯ ?

"ಏನು ..ಹೇಳುತ್ತಿ ....... ಹುಸೇನ್ ?" ಘರ್ಜನೆ ತಡೆ ತಡೆದು ಹೊರಬಿತ್ತು.

ಹುಸೇನ್ ಒಂದು ಗಳಿಗೆ ಮರವಟ್ಟು ನಿಂತ. ತನುಮನಗಳು ಕಲ್ಲಾದುವು.

"ನಾನೇನು ಹೇಳಬಲ್ಲೆ ರುದ್ರ ?" ದನಿ ಕಂಪಿಸಿತು. ಒಂದು ಗಳಿಗೆ ತಡೆದು ಡಾ|| ಹುಸೇನ್ ಮುಂದುವರಿದ "ಸುಮ್ಮನೆ ಚೀರುವುದರಿಂದ ರೊಚ್ಚಿಗೇಳುವುದರಿಂದ ತಲೆ ಕೆಡಿಸಿಕೊಳ್ಳುವುದರಿಂದ ಪ್ರಯೋಜನವಿಲ್ಲ. ನಿನ್ನವರ ಆತ್ಮಶಾಂತಿಗಾಗಿ ದೇವರನ್ನು ಪ್ರಾರ್ಥಿಸು ರುದ್ರ. ನೀನು ಪ್ರಾರ್ಥಿಸಲಾರೆಯಾದರೆ ಅವರಿಗೆ ನಿಜವಾಗಿಯೂ ಶಾಂತಿಯು ಲಭಿಸಲಾರದು."

"ಓ ...ನಾನು ತಾಳಲಾರೆ. ನನಗೆ ಈ ಬದುಕು ಬೇಡವೇ ಬೇಡ. ಒಂದೇ ಒಂದು ಹನಿ ಫಾಲಿಡಾಲ್ ! ಎಲ್ಲಿದ್ದಿ ಹುಸೇನ್ ? ನಿನ್ನ ಔಷಧಿ ಮಾತ್ರೆಗಳನ್ನು ಬೆಂಕಿಗೆ ಹಾಕು. ಒಂದು ಹನಿ ಫಾಲಿಡಾಲ್ ತಾ !"

"ರುದ್ರ...."

"ಸೋಗು ಸಾಕು ! ತಗೋ, ಒಂದು ಬುಲೆಟ್ಟಾದರೂ ಖರ್ಚು ಮಾಡು ಅಥವಾ ಈ ಬಟ್ಟೆಯಿಂದ ನೇಣಾದರೂ ಬಿಗಿ !"

"ಶಾಂತನಾಗು ರುದ್ರ ...ನನಗೆ ಏನು ಹೇಳಲಿಕ್ಕೂ ಬಾಯಿ ಬರುವುದಿಲ್ಲ. ಆದರೂ ಹೇಳುವೆ. ಸಮಾಧಾನ ಹೊಂದು ರುದ್ರ."

"ಛೀ ! ನೀನೇಕೆ ಸಾಯಬಾರದು ? ಯಾವ ಹಿಂದುವಿಗೂ ನಿನ್ನನ್ನು ಕೊಲ್ಲುವ ಎದೆಗಾರಿಕೆ ಇಲ್ಲವೇ ?"

"ಉಂಟು ! ಒಂದಲ್ಲ ಒಂದು ದಿನ ಯಾರಿಂದಲಾದರೂ ನಾನು ಕೊಲ್ಲಲ್ಪಡುವೆ. ಈ ಭೂಮಿ ಎಂದಿಗೂ ಯಾರಿಗೂ ಶಾಶ್ವತವಲ್ಲ. ಅದರ ಮೊದಲು ನಾವು ನಮ್ಮ ಕರ್ತವ್ಯವನ್ನು ಮುಗಿಸಿಕೊಳ್ಳುವ ನಿಮ್ಮವರಿಗಾಗಿ ನಾನು ಪ್ರಾರ್ಥಿಸುವೆ, ನೀನೂ ಮನವಮುಟ್ಟಿ ಪ್ರಾರ್ಥಿಸು."

"ಹುಸೇನ್ ! ಇಲ್ಲಿಂದ ತೊಲಗು !"

"ರುದ್ರ ...ಇತರರ ಮೇಲೆ ಸೇಡು ತೀರಿಸಿಕೊಳ್ಳುವುದರಿಂದ ನಿಮ್ಮವರಿಗೆ ನಿಜವಾಗಿಯೂ ಆತ್ಮ ಶಾಂತಿ ಬರುವುದಿಲ್ಲ. ಯೋಚಿಸಿ ನೋಡು, ಮೊದಲು ಮನಸ್ಸನ್ನು ತಿಳಿಯಾಗಿಸಿಕೊ."

"ತೊಲಗು....!"

"ನೀನು ಇದುವರೆವಿಗೂ ಎಷ್ಟು ಮಂದಿಯನ್ನು ರಣರಂಗದಲ್ಲಿ ಕೊಲ್ಲಲಿಲ್ಲ ? ನಿಮ್ಮವರಿಗಾಗಿ ಹುಚ್ಚಾದ ನೀನು ಪರರಿಗಾಗಿ ಏಕೆ ಹುಚ್ಚಾಗಲಿಲ್ಲ ?"

"........"

"ರುದ್ರ ಮಹಾಶಯಾ !"

"ಶ್ ! ಎಷ್ಟೊಂದು ಮಾತಾಡುತ್ತಿ ನಿನ್ನ ಬಾಯಿಗೆ ಮಣ್ಣು ಹಾಕುವವರು ಯಾರೂ ಇಲ್ಲವೇ ?"

"ಸರ್ .... ಮಣ್ಣಿಗೇನು ಕೊರತೆ. ಮಣ್ಣು ಇಂದೋ ನಾಳೆಯೋ ಬಿದ್ದೇ ಬೀಳುತ್ತೆ. ಹುಸೇನ್ ಸತ್ತರೆ ರಾಷ್ಟ್ರಕ್ಕೆ ಒಂದು ಹುಲ್ಲು ಕಡ್ಡಿಯಷ್ಟೂ ನಷ್ಟವಾಗದು. ...ಮೇಜರ್ ರುದ್ರ ಸತ್ತರೆ ರಾಷ್ಟ್ರಕ್ಕೆ ನಿಜವಾಗಿಯೂ ಅಗಾಧವಾದ ಹಾನಿ. ಮುಖ್ಯವಾಗಿ ನೀನು ಸುಧಾರಿಸಿಕೊಳ್ಳಲೇಬೇಕು. ನಿನ್ನ ಆತ್ಮೋದ್ಧಾರಕ್ಕಾಗಿ ರಾಷ್ಟ್ರೋತ್ಥಾನಕ್ಕಾಗಿ ನಿನ್ನನ್ನು ನೀನು ಸುಧಾರಿಸಿಕೋ ರುದ್ರ !"

ರುದ್ರ ಮಾತಾಡಲಿಲ್ಲ. ಕಂಬನಿಯ ಕಟ್ಟೆಯೊಡೆಯಿತು. ಎರಡೂ ಕೈಗಳಿಂದ ಮುಖವನ್ನು ಮುಚ್ಚಿಕೊಂಡು ಬಸಬಸನೆ ಅತ್ತ.

"ರುದ್ರ...."

ಡಾ॥ ಹುಸೇನ್ ಹಾರ್ದಿಕವಾಗಿ ಅವನ ತಲೆಯನ್ನು ಅದುಮಿ ಹಿಡಿದುಕೊಂಡ.

"ಡಾಕ್ಟರ್ ನನಗಾಗಿ ಪ್ರಾರ್ಥಿಸು."

"ನಿಜವಾಗಿಯೂ ಖಂಡಿತವಾಗಿಯೂ ಪ್ರಾರ್ಥಿಸುವೆ."

ಈಗಿಂದೀಗಲೇ ನನಗೆ ಹೃದಯ ಸ್ಥಂಭನವಾಗಲಿ ಎಂದು ಪ್ರಾರ್ಥಿಸು."

ಎಲ್ಲರ ಎದೆಗಳೂ ಸಂತಾಪದಿಂದ ಮಿಡಿದವು.

"ಛಿ ! ಛಿ ! ಹಾಗಲ್ಲವೇ ಅಲ್ಲ..."ಇನ್ನೂ ಏನೋ ಹೇಳುವುದಿತ್ತು. ನಾಲಿಗೆ ತೊದಲಿದುದರಿಂದ ಮಾತು ಅಷ್ಟಕ್ಕೆ ತುಂಡುಗಡಿಯಿತು. ಡಾ॥ ಹುಸೇನ್ ಒಂದು ಗಳಿಗೆ ಸುಮ್ಮನಾದ.

ಮೇಜರ್ ರುದ್ರ ಮಾತಾಡಲಿಲ್ಲ. ಎದೆಯಾಳದಲ್ಲಿ ಸಂತಾಪದ ಉಸಿರು ಎಣೆಯಿಲ್ಲದೆ ಹರಿದಾಡಿತು. ಮುಖದ ಮೇಲೆ ಮೂಡಿದ ಬೆವರಿನ ಹನಿಗಳನ್ನು ಅಜಿಲ ಟವಲ್ಲಸಿಂದ ಒತ್ತಿ ಒತ್ತಿ ತೆಗೆದ. ಹುಸೇನ್ ನಾಡಿ ಹೃದಯಗಳನ್ನು ಪರೀಕ್ಷಿಸಿದ. ಸ್ಥಿತಿಗತಿ ಏರುಪೇರಾಗಿತ್ತು. ಕೈಯನ್ನು ಆತ್ಮೀಯತೆಯಿಂದ ಅದುಮಿ ಹಿಡಿದುಕೊಂಡು ನುಡಿದ. ದನಿ ಹೃದಯ ದಾಳದಿಂದ ಹರಿದು ಬಂತು.

"ಮೇಜರ್ ಸಾಬ್ ! ಯೋಚಿಸಿನೋಡು. ಸಿಟ್ಟು ರೋಷ ದುಃಖ ದುಗುಡಗಳನ್ನು ಬದಿಗಿಟ್ಟು ಯೋಚಿಸಿ ನೋಡು. ಈ ಸ್ಥಿತಿಯಲ್ಲಿ ನೀನು ಸತ್ತರೆ ನಿಜವಾಗಿಯೂ ನಿನ್ನ ಆತ್ಮಕ್ಕೆ ಶಾಂತಿಯು ದೊರೆಯಲಾರದು."

"ಶಾಂತಿ....ಶಾಂತಿ ! ನನ್ನವರಿಗಿಲ್ಲದ ಶಾಂತಿ ನನಗೇಕೆ ?"

"ನಿನ್ನ ಮೂಲಕ ನಿನ್ನವರ ಆತ್ಮಕ್ಕೆ ಶಾಂತಿ ಬರುವುದಿದೆ. ನೀನೂ ಅವರಿಗೆ ಎರವಾಗಬೇಡ ರುದ್ರ. ನಿನ್ನ ಆತ್ಮಪೂರ್ವಕವಾಗಿ ಅವರ ಆತ್ಮ ಗಳಿಗೆ ಶಾಂತಿ ಕೋರು..."

"ನನ್ನ ಶಾಣ್ಯಕ್ಕೆ ಕಿಚ್ಚು ಹಚ್ಚು. ನಿಜವಾಗಿಯೂ ನಾನು ಆತ್ಮ ಸಂತೋಷದಿಂದ ಪ್ರಾಣ ಬಿಡುವೆ. ನನ್ನವರ ಆತ್ಮಶಾಂತಿಗಾಗಿ ಪ್ರಾರ್ಥಿಸು ತ್ತಲೇ ಪ್ರಾಣಬಿಡುವೆ."

"......."

"ಅಷ್ಟು ಉಪಕಾರ ಮಾಡು ಹುಸೇನ್ !"

ಮೇಜರ್ ರುದ್ರ ತುಂಡುಗಡಿದ ಮರದಂತೆ ಹಾಸಿಗೆಯ ಮೇಲೆ ದಿಡ್ಡನೆ ಉರುಳಿದ. ಒಮ್ಮಿಂದೊಮ್ಮೆಲೇ ಕೃಷ್ಣಪಕ್ಷದ ಕಾಳಗಪ್ಪು

ಕಣ್ಣುಗಳಿಗೆ ಇರಿದಂತಾಯಿತು. ಬಳಲಿಕೆಯಿಂದ ಒಂದು ಗಳಿಗೆ ಕಣ್ಣು ಮುಚ್ಚಿದ. ಚಿತ್ತ ಸಮಸ್ತವೂ ತನ್ನವರ ನೆನಪಿನ ಮಡಲಲ್ಲಿ ಮುಳುಗಿತು. ಉದ್ವೇಗಭರಿತ ಹೃದಯ ವ್ಯಾಪ್ತಿಗೆ ಮೀರಿ ಮಿಡಿಯುತಿತ್ತು.

ಡಾ|| ಹುಸೇನ್ ಮೇಜಿನ ಬಳಿಗೈದು ಅಂದಿನ ಟಪ್ಪಾಲಿನ ಮೇಲೆ ಮತ್ತೆ ಕಣ್ಣಾಡಿಸಿದ. ಅದರಲ್ಲಿ ಅಂದೇ ಬರೆದ ಅಮೃತಳ ಪತ್ರವೂ ಇದೆ! ಅಕ್ಷರ ಒಕ್ಕಣೆ ಪಂಕ್ತಿಗಳು ಅವಳ ಮನಸ್ಸಿನ ಪ್ರಕ್ಷುಬ್ಧ ಸ್ಥಿತಿಯನ್ನು ಸಾರಿ ಹೇಳುತ್ತಿದ್ದುವು. ಹರಿದ್ರಾಪುರದಲ್ಲಿ ಕೇವಲ ಮೂರು ದಿನಗಳಲ್ಲಿ ಕಾಡ್ಗಿಚ್ಚಿ ನಂತೆ ಹಬ್ಬಿದ ಹಿಂದೂ ಮುಸ್ಲಿಂ ದೊಂಬಿಯನ್ನು ಬಣ್ಣಿಸಿ ಈ ಪರಿಸ್ಥಿತಿಯಲ್ಲಿ ಇರುವುದು ಸಾಧ್ಯವೇ ಇಲ್ಲ. ನಾವು ಇಂದೇ ರಾತ್ರಿಯ ರೈಲಿಗೆ ಮೈಸೂರಿಗೆ ಹೊರಡುತ್ತೇವೆ. ನೀವು ಕಾಗದವನ್ನು ಅಲ್ಲಿಗೆ ಬರೆಯಿರಿ ಎಂಬುದು ಅವಳು ಬರೆದ ಕಾಗದದ ಸಾರಾಂಶ.

ಬಹುಶಃ ಬೆಳಿಗ್ಗೆ ಬರೆದಿದ್ದಳೇನೋ...ಪಾಪ!

ಡಾ|| ಹುಸೇನ್ ವಿಷಯಗಳನ್ನು ಪುನರ್ ಪರಿಶೀಲನೆ ನಡೆಸಿದ. ಟೆಲಿಗ್ರಾಮ್ ಕೊಲೆಯಾದ ನಿರೂಪವನ್ನು ತಂದಿತ್ತು. ದೈನಿಕಗಳು ವಿಷಯವನ್ನು ಮುಖಪುಟಗಳಲ್ಲಿ ಪ್ರಕಟಿಸಿದ್ದುವು. ಸುದ್ದಿ ವಿವರ ಪೂರ್ಣ ವಾಗಿ ಹೊರಬಿದ್ದಿದೆ. ಮೂರು ದಿನಗಳಲ್ಲಿ—ಮೂರೇ ಮೂರು ದಿನಗಳಲ್ಲಿ ಹರಿದ್ರಾಪುರದಾದ್ಯಂತ ಹಿಂದೂ ಮುಸ್ಲಿಂ ಮಾರಾಮಾರಿ ವಿಷವಾಯು ಹರಡಿದಂತೆ ಹರಡಿತ್ತು. ಎರಡೂ ಬಣಗಳಲ್ಲಿ ಸರಾಸರಿ ಹತರಾಗಿದ್ದಾರೆ.

ಛೀ! ಛೀ! ಏನುಗತಿ?

ಡಾ|| ಹುಸೇನ್ ಒಂದೆರಡು ಗಳಿಗೆಯೊಳಗಾಗಿ ವಿಷಯವೆಲ್ಲವನ್ನೂ ಹೀರಿಕೊಂಡ. ಮೈ ಗಡಗಡ ನಡುಗಿತು. ಒಂದು ಗಳಿಗೆ ಕಣ್ಣುಗಳಿಗೆ ಮಂಜು ಕವಿದು ಬಂದಂತಾಗಿ ಚಿತ್ತ ಎಲ್ಲೋ ಹಾರಿ ಎಲ್ಲೋ ಸುಳಿದು ತನಗರಿಯುವಂತೆಯೇ ಲೋಕಾಂತರವನ್ನೈದಿತು. ಸುತ್ತುಮುತ್ತಿನ ವಸ್ತು ಗಳೆಲ್ಲಾ ಗಿರಗಿರ ಸುತ್ತಿದಂತಾದುವು. ಕುರ್ಚಿಯ ಮೇಲೆ ಕುಸಿದ್ದು ಕುಳಿತ. ಬಲೆಯಲ್ಲಿ ಸಿಕ್ಕಿದ ನೊಣದಂತಾಯಿತು ಚಿತ್ತ.

ಭೀಕರ ರಾತ್ರಿ ದೀರ್ಘವಾಗಿ ಉರುಳಿತು.

ಮೂಡಣ ದಿಶೆಯಲ್ಲಿ ಎಂದಿನಂತೆ ಇಂದೂ ಬಾಲರವಿ ಮೂಡಿಬಂದ. ಚಿಲಿಪಿಲಿ ಹಕ್ಕಿಗಳು ಕೊರಳೆತ್ತಿ ಸಾನಂದದಿಂದ ಸುಪ್ರಭಾತವನ್ನು ಹಾಡಿದುವು. ಸೈನಿಕರ ಶಿಬಿರಗಳಲ್ಲಿ ಎಂದಿನಂತೆಯೇ ಇಂದೂ ದಿನಚರಿ ಆರಂಭವಾಯಿತು. ಯುದ್ಧ ಚಟುವಟಿಕೆಗಳು ಯಥಾ ರೀತಿ ನಡೆದಿವೆ. ಜಗ ಸಮಸ್ತವೂ ತನ್ನ ಹಾದಿಯಲ್ಲಿ ದಿಟ್ಟತನದಿಂದ ಹೆಜ್ಜೆ ಹಾಕಿದೆ. ಆದರೆ....

ಮೇಜರ್ ರುದ್ರ ಹೈದ್ರಾಪುರಕ್ಕೆ ಹೋಗಲು ಬಯಸಲೂ ಇಲ್ಲ. ಯಾರಿಗಾದರೂ ಅವನನ್ನು ' ಹೋಗು ' ಎನ್ನುವ ಎದೆಗಾರಿಕೆಯೂ ಇರಲಿಲ್ಲ. ಅಜಿಲ ಬಾಬೂರಾವ್‌ರವರು ಕ್ರಮಶಃ ಕಾದಿರುತ್ತಿದ್ದರು. ಡಾ॥ ಹುಸೇನ್ ಭಾಗಶಃ ಕಾದಿದ್ದ. ನಿದ್ದೆ ಗುಳಿಗೆಯ ಆಧಾರದ ಮೇಲೆ ಹೊತ್ತು ಉರುಳುತಿತ್ತು. ಆದರೂ ಕ್ಷಣ ಕ್ಷಣಗಳು ಶೂಲವಾಗಿ ಕೊರಪಿಯಾಗಿ ತನುಮನಗಳನ್ನು ಇರಿಯುತ್ತಿದ್ದುವು.

ರಣರಂಗದಲ್ಲಿ ಹೋರಾಡುವ ಯೋಧನ ಕುಟುಂಬವನ್ನು ರಕ್ಷಿಸಬೇಕಾದುದು ರಾಷ್ಟ್ರದ ಹೊಣೆ. ಆದರೆ ಆದ ಬಗೆ...?

ಮೂರು ದಿನಗಳಿಂದ ಸರಿಯಾದ ಆಹಾರ ನಿದ್ರಾದಿಗಳಿಲ್ಲ. ದಿನಚರಿ ನಡೆದರೂ ಸ್ಮಶಾನ ಕೈಂಕರ್ಯಗಳಂತೆ ಎಲ್ಲವೂ ರುದ್ರ ಗಂಭೀರ. ಮಾತಿಲ್ಲ, ಕತೆಯಿಲ್ಲ, ಸುಖವಿಲ್ಲ, ಸೊಗವಿಲ್ಲ. ಓಹ್ !....ವರ್ಣನಾತೀತ. ರುದ್ರ ಆಗೊಮ್ಮೆ ಈಗೊಮ್ಮೆ ಎದ್ದು ಅಜಿಲ ವಾರ್ಡ್‌ಬಾಯಿಯ ತೋಳ್ಬಲದ ಮೇಲೆ ಶೌಚದ ಮನೆಗೆ ಹೋಗಿ ಬರುತ್ತಿದ್ದ. ಒಮ್ಮೊಮ್ಮೆ ನರಳಿ ಹೊರಳಿ ಚೀರಿಡುತ್ತಿದ್ದ. ಒಮ್ಮೆ ಕಿಡಿಗಣ್ಣಾದರೆ ಇನ್ನೊಮ್ಮೆ ಸಪ್ಪೆಯಾಗಿ ಹಿಪ್ಪೆಯಾಗಿ ಬಿದ್ದಿರುತ್ತಿದ್ದ.

ಸುತ್ತು ಮುತ್ತಿನ ಠಾಣ್ಯಗಳಿಂದ ಸಿಪಾಯಿಗಳೂ ಮಿಲಿಟರಿ ಆಫೀಸರುಗಳೂ ಬಂದು ಹೊರಗಿನಿಂದಲೇ ಸುದ್ದಿ ತಿಳಿದುಕೊಂಡು ಹೋಗುತ್ತಿದ್ದರು. ಒಳಹೋಗಲು ಡಾ॥ ಹುಸೇನನ ಪರವಾನಗಿ ದೊರೆಯದಿದ್ದುದು ಒಂದಾದರೆ ಒಳ ಹೋಗುವ ಧೈರ್ಯ ಮೂಡದಿದ್ದುದು ಇನ್ನೊಂದು. ಆಗಾಗ್ಗೆ ಬಂದು ಸಮಾಧಾನ ಹೊಂದಿದ್ದಾನೆಯೆ ? ಊಟ ಮಾಡಿದನೇ ? ಎಂಬಿಷ್ಟು ವಿಚಾರಗಳನ್ನು ಡಾ॥ ಹುಸೇನನಿಂದ

ತಿಳಿದುಕೊಂಡು ಹೋಗುವುದೆಷ್ಟೋ ಅಷ್ಟು. ಅದೇ ಅವರು ತೋರಬಹುದಾದ ಅನುತಾಪ...ಅನುಕಂಪ.

ದಿನ ಪತ್ರಿಕೆಗಳಿಗೂ ಕಾಗದ ಪತ್ರಗಳಿಗೂ ಹುಸೇನ್ ತಡೆ ಹಾಕಿದ.

o o o o o

ಮೇಜರ್ ರುದ್ರ ಬಿಡುವಿನ ದಿನಗಳಲ್ಲಿ ಠಾಣ್ಯದ ವಲಯದಲ್ಲಿ ಸುತ್ತಾಡುವಾಗ ಬಹಳ ಮಟ್ಟಿಗೆ ಡಾ|| ಹುಸೇನನೊಡನೆ ಕೂಡುತ್ತಿದ್ದ. ಇಬ್ಬರೂ ಸ್ವಜನರ ವಿಚಾರವಾಗಿ ಯುದ್ಧರಂಗದ ವಿಚಾರವಾಗಿ ಪಾಕೀಸ್ತಾನಿಯರ ಅನೀತಿ ಕುತಂತ್ರಗಳ ವಿಚಾರವಾಗಿ ಮನಬಿಚ್ಚಿ ಮಾತಾಡುತ್ತಿದ್ದುದುಂಟು. ಹೃದಯ ಬಿಚ್ಚಿ ವಿಷಯಗಳನ್ನು ಚರ್ಚಿಸುತ್ತಿದ್ದುದುಂಟು.

ಇಬ್ಬರೂ ಗಡಿ ಠಾಣ್ಯಕ್ಕೆ ಬಂದಾಗಿನಿಂದ ಇಬ್ಬರಿಗೂ ಒಂದು ಮೈಲಿಯ ಅಂತರ. ಹೆಚ್ಚು ಕಡಿಮೆ ಬಿಡುವಿನ ವೇಳೆಯಲ್ಲಿ ಪರಸ್ಪರ ಭೇಟಿ ನಡೆಯುತ್ತಿತ್ತು. ಅದಿಲ್ಲದಾಗ ಸಿಗರೇಟು ಸೇವನೆಯ ವೇಳೆಯನ್ನು ಹಾಳು ಮಾಡುವುದೇಕೆ ? ಸರಿ, ಇಬ್ಬರೂ ಟೆಲಿಫೋನಿಗೆ ಕೈ ಹಚ್ಚುತಿದ್ದರು. ಎಷ್ಟೋ ವೇಳೆ ಇಬ್ಬರ ಅಭಿಪ್ರಾಯಗಳೂ ವಿರುದ್ಧ ದಿಕ್ಕಿನಲ್ಲಿ ಓಡುವುದೂ ಉಂಟು. ಒಮ್ಮೆ ಕವಲು ದಾರಿಯನ್ನು ಹಿಡಿದರೆ ಇನ್ನೊಮ್ಮೆ ಕೂಡುದಾರಿಯಲ್ಲಿ ಕೂಡುವುದೂ ಉಂಟು. ಕೆಲವೊಮ್ಮೆ "ಹಾಳೋ ಮೂಳೋ ಚಳಿಗಾಲಕ್ಕೊಂದು ಕಂಬಳಿ ಬೇಕೇಬೇಕು" ಎಂಬ ಕಾಲ ಧರ್ಮವೂ ಕೂಡಿ ಬರುತಿತ್ತು.

ಹದಿನೈದು ವರ್ಷಗಳ ಹಿಂದೆ ಮಿಲಿಟರಿ ಕ್ಷೇತ್ರಕ್ಕೆ ಕಾಲಿಟ್ಟಾಗ ಮಡಿವಂತ ಕುಟುಂಬದಿಂದ ಬಂದ ರುದ್ರ ಮಹಾಶಯನಿಗೆ ಮೊದಮೊದಲು ಮಿಲಿಟರಿಯ ರೀತಿನೀತಿಗಳು ಹತ್ತುವುದು ಬಹಳ ಕಷ್ಟವೆನಿಸಿದರೆ ಹುಸೇನನಿಗೆ ಅದು ಹಿತವೋ ಹಿತ. ಅವನು ತಿಂದು ಕುಡಿದು ನಕ್ಕು ನಲಿದು ಬದುಕನ್ನು ತಾನಾಗಿ ಹಗುರ ಮಾಡಿಕೊಂಡರೆ ಇವನು ದುಃಖ ದುಗುಡ ಜುಗುಪ್ಸೆಗಳನ್ನು ಹೊತ್ತು ತಾನಾಗಿ ಬದುಕನ್ನು ಭಾರ ಮಾಡಿಕೊಳ್ಳುವವ. ಆಗಿನ ಸಂದರ್ಭದಲ್ಲಿ ಹುಸೇನ್ ಗುರು, ರುದ್ರ ಶಿಷ್ಯ.

ಅಂದಿನ ಸ್ನೇಹಧಾರೆ ಇದುವರೆವಿಗೂ ಎಂದೂ ಕಡಿದಿರಲಿಲ್ಲ. ರುದ್ರ ಮನನೊಂದು ಹುಚ್ಚಾಗಿ ಪೆಚ್ಚಾಗಿ ಹಿಂತೆಗೆದನೆಂದರೆ ನಾನೇಕೆ ಮನಸ್ಸು ಕೆಡಿಸಿಕೊಳ್ಳಲಿ? ಹಿಂದೆ ಎಂತೋ ಮುಂದೆಯೂ ಅಂತೆಯೇ ಎನ್ನುತಿತ್ತು ಹುಸೇನನ ಎದೆಯ ಹಕ್ಕಿ.

ರುದ್ರನ ಕುಟುಂಬದೊಂದಿಗೆ ಹುಸೇನ್ ಹಸನಾಗಿ ಬೆರೆಯಬಲ್ಲ–ಹಾಲಿನೊಂದಿಗೆ ನೀರು ಬೆರೆತಂತೆ. ಆದರೆ ಹುಸೇನನ ಕುಟುಂಬಿಗರು ರುದ್ರನೊಂದಿಗೆ ಎಂದೂ ಕಲೆತವರಲ್ಲ. ಪರದಾ ಪದ್ಧತಿಯಲ್ಲಿ ಬೆಳೆದ ವಾತಾವರಣ ಮನಸ್ಸನ್ನು ಸಂಕುಚಿತಗೊಳಿಸಿತ್ತು. ರುದ್ರನಿಗೆ ಹುಸೇನ್ ಬೆರೆತರೂ ಅವರು ಬೆರೆಯುರಲ್ಲಾ ಎಂಬುದು ಬಹಳ ಅಸಮಾಧಾನ. ಅನೇಕ ವೇಳೆ ಗೆಳೆಯನನ್ನು ತರಾಟೆಗೆ ತೆಗೆದುಕೊಂಡುದುದೂ ಉಂಟು.

ಡಾ|| ಹುಸೇನನ ಕುಟುಂಬವೊಮ್ಮೆ ಠಾಣ್ಯಕ್ಕೆ ಬಂದಿತು. ಅವರು ಹಾಗೆ ಬರುವುದು ಅಪರೂಪ. ಬಂದರೆ ಬೆರೆಯುವಂತೆಯೂ ಇಲ್ಲ. ಆದರೂ ಮೇಜರ್ ರುದ್ರ ತನ್ನ ಠಾಣ್ಯಕ್ಕೆ ಆಹ್ವಾನಿಸಿ ಔತಣವೇರ್ಪಡಿಸಿದ. ಹೆಂಗಳೆಯರೂ ಹುಡುಗಿಯರೂ ಸಹಜವಾಗಿ ನಾಚಿಕೆಯ ಸ್ವಭಾವದವರು. ಸ್ವತಃ ಮೂವರು ಹೆಣ್ಣು ಮಕ್ಕಳ ತಂದೆಯಾದ ಮೇಜರ್ ರುದ್ರನಿಗೆ ಹೆಣ್ಣು ಮಕ್ಕಳೆಂದರೆ ಎಲ್ಲಿಲ್ಲದ ಪ್ರೀತಿ. ಕೊನೆಯ ಪಕ್ಷ ಹುಡುಗಿಯರೊಂದಿಗಾದರೂ ಬೆರೆತು ಆಟವಾಡಿ ಸಂತಸದ ಸುಗ್ಗಿಯನ್ನುಣ್ಣಬೇಕು. ಎಂಬಷ್ಟು ಆಕರ. ಆದರೆ ಹುಡುಗಿಯರು ತಾಯಂದಿರ ಬಳಿಯಿಂದ ಕದಲಲಿಲ್ಲ. ಅವರ ರೀತಿ ನೀತಿಗಳನ್ನು ನೋಡಿ ಮೇಜರ್ ಮಹಾಶಯನಿಗೆ ನಸು ಕೋಪ ಮೂಡಿತು. ಅವರ ಎದುರಿಗೇನೇ ಡಾ|| ಹುಸೇನನನ್ನು ತರಾಟೆಗೆ ತೆಗೆದುಕೊಂಡ.

"ಡಾಕ್ಟರ್ ಸಾಬ್ ! ಪರವಾಯಿಲ್ಲ, ಕುರಿ ಸಾಕುವುದರಿಂದ ಕುರುಬನಿಗೆ ಬಹಳ ಲಾಭ !"

"ಓ...ಹೋ...ಹೋ ! ಕುರಿ ಸಾಕುವುದರಲ್ಲಿ ನೀನೇನು ಕಡಿಮೆ ?"

"ನಮ್ಮ ದೊಡ್ಡಿಯಲ್ಲಿ ಕುರಿಗಳಿಲ್ಲ ಮನುಷ್ಯರಿದ್ದಾರೆ !"

"ಹಾದು ! ಆ ಮನುಷ್ಯರ ಸುತ್ತ ಮುತ್ತ ಮುಳ್ಳಿನ ಬೇಲಿ !"

"ನಮ್ಮ ಮನಸ್ಸು ಅಷ್ಟೊಂದು ಸಣ್ಣ ಎಲ್ಲೆ ಕಟ್ಟಿನಲ್ಲಿಲ್ಲ ಡಾಕ್ಟರ್ !"

"ನನಗ್ಗೊತ್ತಪ್ಪಾ ! ಎಲ್ಲಾ ಆಡಂಬರ. ಬರಿಯ ಬೂಟಾಟಿಕೆ !"

"ಅಂತಾದ್ದೇನಿಲ್ಲ."

"ಅಲ್ಲದೆ ಮತ್ತಿನ್ನೇನು ? ನಿಮ್ಮ ಹೆಂಗಸರು ಹೊರಗಡೆ ಭೂಷಣ ವಾಗಿ ಓಡಾಡಬಹುದು ಅಷ್ಟೆ. ಅದಕ್ಕಿಂತ ಇನ್ನೇನು ಮಾಡಿಯಾರು ? ಬಿ. ಎ. ಓದಿರಲಿ. ಎಂ. ಎ. ಓದಿರಲಿ. ಆಕೆ ದುಡಿದರೆ ಆಕೆಗುಂಟು. ಇಲ್ಲದಿದ್ದಲ್ಲಿ ನಿಮಗಿರುವ ಮಾನ್ಯತೆ ಅವಳಿಗುಂಟೆ ? ಗಂಡಿನ ಸಮಾನ ಹಕ್ಕುಂಟೆ ? ಏನುಂಟು ನಿಮ್ಮಲ್ಲಿ ?"

"ಏಷ್ಟೆಂದರೂ ಬಿಡು, ನಿಮಗಿಂತ ನಾವು ವಾಸಿ."

"ಡಾ॥ ಹುಸೇನನೂ ಹಾಗೆನ್ನುತ್ತಾನೆ, ರುದ್ರ ಮಹಾಶಯಾ !"

ಎರಡೂ ಕಡೆಯಿಂದ ಕಿಲಕಿಲ ನಗುವಿನಲೆಯೆದ್ದಿತು.

ಪುಟ್ಟ ಮಕ್ಕಳಾದರೂ ತನ್ನೊಂದಿಗೆ ಬೆರೆಯಲಿ ಎಂಬಷ್ಟು ಅಭಿಲಾಷೆ ಯಿಂದ ಬಳಿಗೆ ಕರೆದು ಮುದ್ದಾಡಿ ಮಾತಾಡಿ ಸಿಹಿ ನೀಡಿ ಸಲಿಗೆ ಬೆಳಸಿ ಕೊಳ್ಳಲು ಬಹಳಷ್ಟು ಪ್ರಯತ್ನ ಪಟ್ಟಿದ್ದ ಮೇಜರ್ ರುದ್ರ. ಆದರೂ ಮಕ್ಕಳು ಒಲಿಯಲಿಲ್ಲ–ಬೆರೆಯಲಿಲ್ಲ. ಧೈರ್ಯವೂ ಮೂಡಲಿಲ್ಲ. ಮೇಜರ್ ರುದ್ರ ಸಿಟ್ಟಿನಿಂದ ಚೀರಿದ "ನೀನು ಶುದ್ಧ ಪಶು ಕಣಯ್ಯಾ !"

"ಇರಲಿ, ಇಂದು ಮನುಷ್ಯರಿಗೂ ಪಶುಗಳಿಗೂ ಬಹಳ ವ್ಯತ್ಯಾಸವಿಲ್ಲ. ಇಬ್ಬರದೂ ಗ್ರೇಡ್ ಒಂದೇ. ಠಾಣ್ಯ ಬೇರೆ ಬೇರೆ ಅಷ್ಟೆ."

ನೆತ್ತಿಯ ತುತ್ತ ತುದಿಗೇರಿದ್ದ ಮೇಜರ್ ರುದ್ರನ ಸಿಟ್ಟು ಜಪ್ಪನೆ ಇಳಿ ಯಿತು.

"ರುದ್ರ ಮಹಾಶಯಾ ! ವಿದ್ಯೆ ಬುದ್ಧಿ ಎಷ್ಟೇ ಇರಲಿ, ಹೆಣ್ಣು ಗಂಡಿನ ಸಮಕ್ಕೆ ನಿಲ್ಲುವಷ್ಟು ಬಲಿಷ್ಟೆಯಲ್ಲ. ಮನಸ್ಸೂ ಸೂಕ್ಷ್ಮ. ಶರೀರವೂ ಸೂಕ್ಷ್ಮ. ಆದ್ದರಿಂದ ಆಕೆಗೆ ರಕ್ಷಣೆ ಬೇಕೇ ಬೇಕು."

ರುದ್ರ ಚೀರಿದ "ಕೀಳು ಮನೋಭಾವ !"

"ಕೀಳು ಮನೋಭಾವ ಅಂಗನೆಯನ್ನು ರಕ್ಷಿಸುವುದಾದರೆ ಅದನ್ನೇ 'ನೀತಿ' ಎನ್ನುವೆ ನಾನು !"

ಹಿಹ್ಹಿಹ್ಹೀ !

ಹುಸೇನ್ ಅಣಕಿಸಿದ ಹಿಹ್ಹಿಹ್ಹಿ !

ಇನ್ನೊಮ್ಮೆ, ಒಂದು ಸುಂದರ ಸಂಜೆ ಡಾ|| ಹುಸೇನ್ ಕೈ ತುಂಬ ಸಿಹಿ ಪೊಟ್ಟಣದ ಸಹಿತ ಆಗಮಿಸಿದ. ಮುಖದಲ್ಲಿ ಹಸನಾದ ನಗೆ ಅರಳಿತ್ತು. ಅವನ ರೀತಿಯನ್ನು ನೋಡಿ ಮೇಜರ್ ರುದ್ರ ಹುಬ್ಬೇರಿಸಿದ "ಏನಪ್ಪಾ ! ಬಹಳ ಸಂತೋಷವಾಗಿದ್ದಿ ? ಮೊಮ್ಮಗ ಹುಟ್ಟಿದಾನೇನು ?"

"ಮೊಮ್ಮಗ ಅಲ್ಲ, ಮಗ !"

ಎದೆಯ ಸಂತಸವೆಲ್ಲಾ ಮುಖಕ್ಕೆ ನುಗ್ಗಿ ಬಂದು ಹೂವಿನಂತೆ ಅರಳಿ ನಿಂತ ಹುಸೇನ್.

"ನಿಜವಾಗಿ ?" ಮಿಡುಕಿ ನಿಂತ ರುದ್ರ.

"ಹೌದು ! ಅಷ್ಟೇಕೆ ಆಶ್ಚರ್ಯ ?"

"ಶುದ್ಧ ಪಶು ಕಣಯ್ಯಾ !"

"ಹೇಡಿ ಇನ್ನೇನೆಂದೀತು ?"

"ಮೂರ್ಖಂಗೆ ನೂರ್ಕಾಲ..."

"ನಿನ್ನ ಭಾವನೆಗಳೇನೇ ಇರಲಿ. ಅದನ್ನು ಇನ್ನೊಬ್ಬರ ಮೇಲೆ ಹೇರಬಾರದು ರುದ್ರ."

ಸಿಹಿಯನ್ನು ಕೈಗೆ ನೀಡಿ, ವಾಕಿಂಗ್ ಸ್ಟಿಕ್ ಗೂಟಕ್ಕೆ ತಗಲು ಹಾಕಿ ಡಾ|| ಹುಸೇನ್ ಕುಳಿತುಕೊಂಡ. ಮೇಜರ್ ರುದ್ರ ಗೆಳೆಯ ನೀಡಿದ ಸಿಹಿಯ ಪೊಟ್ಟಣವನ್ನು ಬಿಚ್ಚಿ ತಾನು ಕೈಹಚ್ಚುವ ಮುನ್ನ ಹುಸೇನನ ಮುಂದೆ ಹಿಡಿದು "ಧೀರ ತಂದೆ ಮೊದಲು ತೆಗೆದು ಕೊಳ್ಳಬೇಕು !"

ಹುಸೇನ್ ಸಿಹಿಯನ್ನು ತೆಗೆದುಕೊಂಡು–"ನೀನು ಕೈಯಲ್ಲಾಗದವ. ಹೆಣ್ಣಿಗ !"

"ಅದೇನೋ ಸರಿಯೇ ಒಪ್ಪಿಕೊಳ್ಳಬೇಕಾದದ್ದೆ !"

"ಆದರೂ ಸೊಕ್ಕುಂಟು !"

ರುದ್ರ ನಕ್ಕುಬಿಟ್ಟ.

"ಯಾವಾಗಲಾದರೊಮ್ಮೆ ಆ ಕಡೆ ಮುಖ ಹಾಕಿ ಬರುತ್ತಿ. ಅಷ್ಟರೊಳಗಾಗಿ ಅಲ್ಲೊಂದು ತಯಾರು ! ನೋಡಿದರೆ ಒಣಕಡ್ಡಿ ! ಮಕ್ಕಳು ಮಾತ್ರ ಸಾಲುಗಟ್ಟಿ ಬರುತ್ತವೆ !"

"ಇದ್ದರೆ ಹಾಗಿರಬೇಕು. ಹದಿನಾಲ್ಕು ಮಕ್ಕಳ ತಂದೆ ಎನಿಸಿಕೊಳ್ಳುವುದು ನಿಜವಾಗಿಯೂ ನನಗೆ ಹೆಮ್ಮೆ. ನಾಳೆ ನಿವೃತ್ತಿಯಾದ ಕಾಲಕ್ಕೆ ಹದಿನಾಲ್ಕು ಮಕ್ಕಳೊಂದಿಗೆ ಕೂಡಿ ಸಂತಸದಿಂದ ಕಾಲಹರಣ ಮಾಡುವುದೆಂದರೆ ಎಷ್ಟು ಹಿತ ? ನೀನಂತೂ ಇದ್ದಿ. ವಂಶಕೊಬ್ಬ. ಮಗನೂ ಇಲ್ಲ. ಇರುವ ಮೂರು ಹೆಣ್ಣು ಹಕ್ಕಿಗಳೂ ಹಾರಿ ಹೋದುವೆಂದರೆ ಗಂಡ–ಹೆಂಡತಿಯರು ಮನೆಯಲ್ಲಿ ಜಾಗಟೆ ಬಾರಿಸಬೇಕು !" ಹುಸೇನ್ ಕಿಲಕಿಲ ನಕ್ಕ.

ಒಂದು ಗಳಿಗೆ ಯೋಚಿಸಿದ ರುದ್ರ. ಚಿತ್ತ ಹೆಂಡತಿ ಮಕ್ಕಳ ಕಡೆ ಹರಿಯಿತು. ಹಾಲಿನಂತಹ ಸಂಸಾರ. ಅನೇಕ ಮಂದಿಯ ಸಂತೆಗಿಂತ ಗಿಣಿಯಂತಹ ಒಂದೆರಡು ಮಕ್ಕಳಿದ್ದರೆ ಸಾಕು ಎನಿಸಿತು.

"ಏಕೆ ಬೆಪ್ಪಾಗಿ ಕುಳಿತೆ ?"

"ಡಾಕ್ಟರ್ ಸಾಬ್ ! ಈ ವಿಚಾರದಲ್ಲಿ ಮಾತ್ರ ನಿನ್ನ ಮುಂದೆ ಸೋಲೊಪ್ಪಿಕೊಳ್ಳಲಾರೆ. ನೀನು ಎಷ್ಟು ಬೇಕಾದರೂ ಹಚ್ಚಿಕೋ. ನನ್ನದು ಚೊಕ್ಕ ಬಂಗಾರ... ಅಪರಂಜಿ !"

"ಅಪರಂಜಿಯೊಂದರಿಂದ ಏನಾದೀತು ? ಈ ಕಾಲಕ್ಕೆ ಎಲ್ಲಾ ಲೋಹಗಳೂ ಬೇಕೇ ಬೇಕು !"

ಒಂದು ಗಳಿಗೆ ಮೌನವಾವರಿಸಿತು.

ಸಿಹಿಯನ್ನು ಮೆಲ್ಲುತ್ತಾ ಮೇಜರ್ ರುದ್ರ ಅಂದ "ಡಾಕ್ಟರ್, ನಿಮ್ಮ ಮನೆಯಲ್ಲಿ ನಲವತ್ತು ಮಂದಿ ವಾಸಿಸುವುದೆಂದರೆ ನಿಜವಾಗಿಯೂ ಕಷ್ಟ. ಹಳ್ಳಿಯ ಕೇಂದ್ರ, ಹೆಚ್ಚಿನ ಸೌಕರ್ಯಗಳೂ ಇಲ್ಲ. ಮೂವರು ಅಣ್ಣ ತಮ್ಮಂದಿರೂ ಬೇರೆ ಬೇರೆ ಮನೆ ಮಾಡಿಕೊಳ್ಳುವುದು ಲೇಸು. ಈಗ ನಿನ್ನ ಮಕ್ಕಳೂ ಬೆಳೆದಿದ್ದಾರೆ. ಮತ್ತೇಕೆ ಒಟ್ಟು ಸಂಸಾರ ? ಆ ಕಿಷ್ಕಿಂಧೆಯಲ್ಲಿ ಹೆಂಗಸರನ್ನು ಕೂಡಿಟ್ಟು ಪ್ರಾಣ ಹಿಂಡುತ್ತೀರಿ ! ಪಾಪ, ಅವರ ಕಷ್ಟ ನಿಮಗೆ ಅರ್ಥವಾಗುವುದಿಲ್ಲ."

"ಈ ಸಲ ಮನೆಗೆ ಇನ್ನೂ ಕೊಠಡಿಗಳನ್ನು ಸೇರಿಸಿ ಕಟ್ಟುತ್ತಾರೆ."

"ಮೊದಲೇ ಸುತ್ತ ಮುತ್ತ ಸೇರಿ ಕಟ್ಟಿ ಗಾಳಿ ಬೆಳಕು ಇಲ್ಲದಂತಾಗಿದೆ. ಇನ್ನೂ ಸುತ್ತುವರಿಸಿ ಕಟ್ಟುತ್ತಾ ಹೋದರೆ ಒಳಗಿನವರ

ಗತಿ ಏನಾಗಬೇಡ ? ಎಲ್ಲರೂ ಬೆಳೆದ ಮಂದಿ. ಸಂಸಾರಕ್ಕೊಂದು ಮನೆ ಕಟ್ಟಿ ಹೊರಗಡೆ ಕಳುಹಿಸಬಾರದೇ ?"

"ಒಗ್ಗಟ್ಟು !"

"ಹೊರಗಡೆ ಇದ್ದರೆ ಒಗ್ಗಟ್ಟಿರುವುದಿಲ್ಲವೇ ?"

"ಆದರೂ ಸಹ..."

"ಹೋಗಲಿ ಬಿಡು, ಎಲ್ಲರಿಗೂ ಅವರವರ ಅಭಿಪ್ರಾಯ ಮತ್ತು ಆತ್ಮ ಗೌರವ ಹೆಚ್ಚು. ಮನುಷ್ಯನಿಗೆ ಅದಕ್ಕಿಂತ ಹಿರಿಯ ವಸ್ತು ಇದೆ ಎನ್ನಿಸು ವುದು ಆಧ್ಯಾತ್ಮಿಕ ಮೆಟ್ಟಲು ಹತ್ತಿದ ಮೇಲೆಯೇ."

"ನೀನು ಅರಿತವ–ಕಲಿತವ ಎಂದುಕೊಂಡಿದ್ದೆ. ಕೆಲವೊಮ್ಮೆ ನಿನ್ನ ರೀತಿಯೇ ನನಗೆ ಅರ್ಥವಾಗುವುದಿಲ್ಲ." ಮುಖದಲ್ಲಿ ಸಣ್ಣ ನಗೆ ಅರಳಿತು.

"ಹೋಗಲಿ, ಬಿಡು. ಇಬ್ಬರ ರೀತಿ ನೀತಿಗಳೂ ಬೇರೆ ಬೇರೆ. ಎಂದೂ ಐದು ಬೆರಳುಗಳೂ ಒಂದೇ ತೆರನಾಗಿರುವುದಿಲ್ಲ."

ಇಬ್ಬರ ಮುಖದಲ್ಲೂ ಎಳೆ ನಗು ಹರಡಿತು.

o o o o o

ಮೇಜರ್ ರುದ್ರನ ಸಂಸಾರ ಬಹಳ ಚೊಕ್ಕ. ಇಳಿ ವಯಸ್ಸಿನ ತಾಯಿಯೂ ಕಲಿತವಳು. ಮಡದಿಯೂ ಕಲಿತವಳು. ಹತ್ತು, ಹನ್ನೆರಡು, ಹದಿನಾಲ್ಕು ವಸಂತ ಋತುಗಳನ್ನು ಕಂಡ ಹೆಣ್ಣು ಮಕ್ಕಳು ಶಾಲೆಯಲ್ಲಿ ಓದುತ್ತಿದ್ದ ಮುಗುದೆಯರು. ಅಮೃತ್ ಸೋದರ ಸಂಬಂಧದಲ್ಲೇ ಬಂದ ಹೆಣ್ಣು. ಇಬ್ಬರೂ ಬಾಲ್ಯದಿಂದಲೂ ಒಡನಾಡಿದವರು. ಇಬ್ಬರದೂ ಹೊಂದಿದ ಮನಸ್ಸು, ತುಂಬಿದ ಹೃದಯ. ಪ್ರೇಮಮಯ ಸಂಸಾರ. ರುದ್ರ ಮಿಲಿಟರಿ ಕ್ಷೇತ್ರಕ್ಕೆ ಕಾಲಿಟ್ಟಾಗಲೇ ಆವಳೆಂದಿದ್ದಳು. "ಈಗೇನೋ ದೇಶದಲ್ಲಿ ಶಾಂತಿ ನೆಲೆಸಿದೆ. ಮುಂದೆ ಎಂದಾದರೂ ಅಶಾಂತಿ ತಲೆದೋರಿದಾಗ ನೀವೆಲ್ಲೋ ನಾವೆಲ್ಲೋ ಆಗುವ ಸಂಭವ ಹೆಚ್ಚು. ಎಷ್ಟೆಂದರೂ ಇದು ತಲೆ ನೋವಿನ ಕ್ಷೇತ್ರ. ಇದಕ್ಕಿಂತ ಹತ್ತಿರ ಜವಾನಿದ್ದರೆ ಜೀವನ ನಿರ್ಮಲವಾಗುತ್ತದೆ. ಸಮಯ ಸಂದರ್ಭಗಳಲ್ಲಿ ನಮ್ಮ ಗತಿಯೇನೋ..."

"ಅದೇಕಷ್ಟು ಭಯ ಅಮೃತಾ ?"

"ಯೋಚಿಸಿ ನೋಡಿ. ಸಿವಿಲ್ ಕ್ಷೇತ್ರದಂತಲ್ಲ, ಮಿಲಿಟರಿ ಕ್ಷೇತ್ರ."

"ಎಲ್ಲಾ ಕ್ಷೇತ್ರಗಳಲ್ಲೂ ಅನುಕೂಲ ಅನನುಕೂಲಗಳೆರಡೂ ಇವೆ. ಹಾಗೆ ಹೆದರುತ್ತಾ ಹೋದರೆ ಅದಕ್ಕೆ ಕೊನೆಯೇ ಇಲ್ಲ."

"......."

"ಏನಂತೆ ? ಹದಿನೈದು ವರ್ಷಗಳ ನಂತರ ಎಂದಾದರೂ ನಿವೃತ್ತಿ ಹೊಂದಬಹುದಲ್ಲಾ ?"

ನುಡಿ ಕೇಳಿ ಮುಖ ಮುದುಡಿತು. ಅಮೃತ ಮಾತಾಡಲಿಲ್ಲ.

"ಹೇಡಿತನವಿರಬಾರದು ಅಮೃತ್."

"ಹೇಡಿತನವಲ್ಲ, ಬೇಸರ ಅಷ್ಟೆ."

"ಧೈರ್ಯವಿದ್ದರೆ ಬೇಸರ ಬರುವುದಿಲ್ಲ."

ಅವಳೆಂದಂತೆ ದೇಶದಲ್ಲಿ ಶಾಂತಿ ನೆಲೆಸಿರುವಾಗ ಬದುಕು ನಿರಾಳವಾಗಿ ಸಾಗುತಿತ್ತು. ರುದ್ರ ಹೆಚ್ಚು ಹೆಚ್ಚಾಗಿ ಕೇಂದ್ರ ಸ್ಥಳಗಳಲ್ಲಿರುತ್ತಿದ್ದ. ಸಿವಿಲ್ ಕ್ಷೇತ್ರಕ್ಕೂ ಮಿಲಿಟರಿ ಕ್ಷೇತ್ರಕ್ಕೂ ವ್ಯತ್ಯಾಸವೇ ತೋರಲಿಲ್ಲ. ಅವನು ಗಡಿ ಠಾಣ್ಯಕ್ಕೆ ವರ್ಗಾಯಿಸಲ್ಪಟ್ಟ ಮೇಲೆ ಬದುಕಿನಲ್ಲಿ ಏರು ಪೇರು ಮೂಡಿತು. ಅಮೃತಳಿಗೆ ಬದುಕು ನೀರಸವಾಗಿ ತೋರಿತು. ಮನೆಯಲ್ಲಿ ಅನ್ಯಥಾ ಹೊತ್ತು ಕಳೆಯುವುದಕ್ಕಿಂತ ಶಾಲಾ ಶಿಕ್ಷಕಿಯಾದರೆ ಹೇಗೆ ಎಂಬ ಯೋಚನೆ ಅಮೃತಳಿಗೆ. ಗಳಿಕೆಯೊಂದಿಗೆ ಹೊತ್ತನ್ನೂ ಸದ್ವಿನಿಯೋಗ ಮಾಡಿಕೊಳ್ಳಬಹುದು ಎಂಬ ಸಮಾಧಾನ.

ಹಾಗೆಂದು ರುದ್ರನ ಮುಂದೆ ತನ್ನ ಅಭಿಪ್ರಾಯವನ್ನು ಮುಂದಿಟ್ಟಾಗ ಅವನೆಂದ "ನೀನು ಶಾಲಾ ಶಿಕ್ಷಕಿಯಾದೆಯೆಂದರೆ ಮುಗಿಯಿತು. ಅನಂತರ ನಿನ್ನ ಹೊತ್ತೆಲ್ಲಾ ಶಾಲಾ ಕ್ಷೇತ್ರಕ್ಕೆ ಮೀಸಲಾಗಿ ವೀಣಾವಾದನವನ್ನು ಸಂಪೂರ್ಣ ಅಲಕ್ಷಿಸಿ ಬಿಡುತ್ತಿ. ಮುಖ್ಯವಾಗಿ ನೀನು ವೀಣಾಭ್ಯಾಸಕ್ಕೆ ಪ್ರಾಧಾನ್ಯ ಕೊಡಬೇಕೇ ಹೊರತು ಶಿಕ್ಷಣ ಕ್ಷೇತ್ರಕ್ಕಲ್ಲ."

"ಹಾ ! ಅದು ನಿಜ." ಎದೆಯ ಹಕ್ಕಿ ಉಲಿಯಿತು.

ಅಮೃತ ತನ್ನ ನಿರ್ಧಾರದಿಂದ ಹಿಂತೆಗೆದರೂ ಸಂಸಾರಿಕ ತೊಂದರೆಯೂ ಕಾಡುತಿತ್ತು. ಒಮ್ಮೊಮ್ಮೆ ಹಣದ ಕೊರತೆ ತೋರಿ ಮನಸ್ಸು ಸಮಸ್ಯೆಯ ಕತ್ತಿಯಲುಗಿನ ಮೇಲೆ ಹರಿದಾಡುವಾಗ ಹೃದಯ ಬೆಂಗಾಡಾಗುತಿತ್ತು.

ಬರುವ ಉತ್ಪನ್ನ ಎರಡು ಸಂಸಾರಗಳಿಗೆ ಹಿಸ್ಸೆಯಾಗಿ ಹಣದ ಮುಗ್ಗಟ್ಟಿಗೆ ಒಳಗಾದಾಗ ರುದ್ರನ ನಿವೃತ್ತಿಯನ್ನು ಬಯಸುತಿತ್ತು ಮನಸ್ಸು. ಅವನು ರಜೆ ತೆಗೆದುಕೊಂಡು ಊರಿಗೆ ಮರಳಿದಾಗ ಇವರು ರಜೆಯ ದಿನಗಳಲ್ಲಿ ಗಡಿ ಠಾಣ್ಯಕ್ಕೆ ಬಿಜಯಂಗೈದಾಗ ಮಾತಿಗೆ ಮುಖ್ಯವಾದ ವಿಷಯ ರುದ್ರನ ನಿವೃತ್ತಿ.

"ಇನ್ನು ಸಾಕು. ನಿವೃತ್ತಿ ಹೊಂದಿಬಿಡಿ ಅಪ್ಪಾ! ನೀವಿಲ್ಲಿ-ನಾವಲ್ಲಿ ಬಲು ಬೇಸರ" ಎಂದಳು ಕರುಣ. ದನಿಯಲ್ಲಿ ಹಾಲ್ಸಕ್ಕರೆಯ ಸವಿಯಿತ್ತು.

"ಎಲ್ಲಾದರೂ ಹೋಗುವುದಿದ್ದರೆ ನಾವು ನಾವೇ ಹೋಗುವುದು ಬಲು ಬೇಸರ. ಎಲ್ಲಾ ಮಕ್ಕಳು ತಂದೆಯೊಡಗೂಡಿ ಬರುತ್ತಾರೆ. ನಮ್ಮೊಂದಿಗೆ ನೀವಿರುವುದೇ ಇಲ್ಲ" ಮುದ್ದು ಕಿರಣಳ ಕಂಬನಿ.

"ಈಗಾಗಲೇ ಹದಿನೈದು ವರ್ಷಗಳ ಸರ್ವಿಸ್ಸಾಗಿದೆ. ಇನ್ನೂ ಏಕೆ ಈ ಗೋಳು ?" ಅರುಣಳ ಗೋಳು.

"ನಾನು ಸಾಯುವಾಗ ನೀನೆಲ್ಲಿರುವೆಯೋ ? ನೀನಲ್ಲಿದ್ದು ನಾನಿಲ್ಲಿ ಪ್ರಾಣ ಬಿಟ್ಟರೆ ಸೊಸೆಗೂ ಮೊಮ್ಮಕ್ಕಳಿಗೂ ಎಷ್ಟು ಗೋಳು ?" ತಾಯಿಯ ಸಂಕಟ.

"ನೀವಲ್ಲಿದ್ದರೆ ನಮ್ಮನ್ನಿಲ್ಲಿ ಕೇಳುವವರಾರು ?" ಮಡದಿಯ ಮೊರೆ.

"ಇಷ್ಟು ಬೇಗನೆ ನಿವೃತ್ತಿ ಹೊಂದಿ ಮಾಡುವುದಾದರೂ ಏನು ? ಆಗುಹೋಗುಗಳು ಎಲ್ಲಿದ್ದರೂ ತಪ್ಪುವುದಿಲ್ಲ. ಹೇಗೋ ಹಾಗೆ ದಿನಗಳೆಯೋಣ. ಏಕೆ ಅಷ್ಟು ಬೇಸರ ?"

ರುದ್ರನ ನುಡಿ–ದನಿಗಳೆರಡೂ ತನ್ನವರ ಕದಡಿದ ಬಗೆಗೆ ಸಾಂತ್ವನ ನೀಡಿದುವು. ಎಲ್ಲರೊಡನೆ ಬೆರೆತು ನಕ್ಕುನಗಿಸಿ ಸಂತಸದ ಸವಿಯನ್ನುಂಡು ನಿವೃತ್ತಿಯ ಸೊಲ್ಲನ್ನು ಹಾರಿಸಿಬಿಡುವ.

ಕಳೆದ ಎರಡು ಮೂರು ವರ್ಷಗಳಿಂದ ಗಡಿ ಠಾಣ್ಯಗಳಲ್ಲಿ ಉಳಿದಿದ್ದ ಮೇಜರ್ ರುದ್ರನಿಗೆ ಒಮ್ಮೆ ಮೂರು ತಿಂಗಳ ಕಾಲ ಹೆಂಡತಿ ಮಕ್ಕಳೊಡನೆ ಇರಲು ಅವಕಾಶವಾಗಿತ್ತು. ಅನಂತರ ರಜೆ ದಿನಗಳಲ್ಲಿ ಅವರೇ ಒಂದೆರಡು ಬಾರಿ ಬಂದು ಹೋದುದುಂಟು. ಗಲಾಟೆ ಗೊಂದಲಗಳಿಲ್ಲದ

ತಣ್ಣನೆಯ ದಿನಗಳಲ್ಲಿ ಠಾಣ್ಯಕ್ಕೆ ಬಂದು ಗಿರಿ ಕಾನನಗಳಲ್ಲಿ ಅಡ್ಡಾಡಿ ಹೋಗುವುದೆಂದರೆ ಹುಡುಗಿಯರಿಗೆ ಬಲು ಪ್ರೀತಿ. ಠಾಣ್ಯ ಪ್ರದೇಶ ಮರ ಗಿಡಗಳ ತಂಪಿನಿಂದ ಕೂಡಿರುವುದನ್ನು ಕಂಡಾಗಿನಿಂದ ಪ್ರತಿ ರಜೆಗೂ ಅಲ್ಲಿಗೆ ಹೋಗಬೇಕೆಂದು ಹುಡುಗಿಯರ ಇಚ್ಛೆ. ಎಷ್ಟೋ ಬಾರಿ ವಿಪತ್ತಿನ ಪರಂಪರೆಗಳನ್ನು ಮುಂದಿಟ್ಟು ಇನ್ನೊಮ್ಮೆ ಕರೆಸಿಕೊಳ್ಳುವುದಾಗಿ ಮುಂದೂಡುತ್ತಿದ್ದ ಮೇಜರ್ ರುದ್ರ.

ಅಮೃತ ವೀಣಾವಾದನವನ್ನು ಚೊಕ್ಕವಾಗಿ ನುಡಿಸಲು ಕಲಿತ ಹೆಣ್ಣು. ಅವಳು ವೀಣೆಗೆ ಕೈಹಚ್ಚಿದಳೆಂದರೆ ರುದ್ರ ಮೈಯೆಲ್ಲಾ ಮನಸ್ಸಾಗುತಿದ್ದ. ವೀಣಾ ನಿನಾದ ಹೃದಯಂಗಮವಾಗಿ ಹೊರಡುತಿತ್ತು. ಎದೆಯ ಸಂತಸವನ್ನೆಲ್ಲಾ ಹೊರಚೆಲ್ಲಿ ಆರಾಮಕುರ್ಚಿಯ ಮೇಲೆ ಮೈಚಾಚುತಿದ್ದ ರುದ್ರ. ಆಫೀಸು ಮುಗಿದ ನಂತರ ಅವಳ ಸಂಗೀತದ ಸವಿಯುಣ್ಣುದಿದ್ದಲ್ಲಿ ರಸಾನ್ನವುಂಡು ಅಡಿಕೆಲೆಯ ಸವಿಯನ್ನು ಸವಿಯುದವನಂತೆ ಮನಸ್ಸು ಮಿಲಿಮಿಲಿಗೊಳ್ಳುತಿತ್ತು.

ಗಡಿ ಠಾಣ್ಯಗಳಲ್ಲುಳಿದ ಮೇಲೆ ಟೇಪ್ ರಿಕಾರ್ಡರ್ ಅವಳ ಸಂಗೀತ ಸುಧೆಯ ಸವಿಯನ್ನುಣಿಸುತಿತ್ತು. ರುದ್ರ ಸವಿಯುತ್ತಿದ್ದ. ಮನಸ್ಸು ಉಲ್ಲಾಸಗೊಳ್ಳುತಿತ್ತು.

ಈ ಸಲ ಒಂದು ತಿಂಗಳ ಪೂರ್ತಿ ರಜೆಯನ್ನು ಠಾಣ್ಯದಲ್ಲಿ ಕಳೆಯಲು ಬಂದಿದ್ದ ಸಂಸಾರವನ್ನು ಎರಡು ವಾರ ತುಂಬುವುದರೊಳಗಾಗಿ ಹಿಂದಕ್ಕೆ ಕಳುಹಿಸಬೇಕಾಗಿ ಬಂದಾಗ ತಂದೆ ಮಕ್ಕಳಿಗೆ ಎಲ್ಲಿಲ್ಲದ ಸಂಕಟ. ಕೊನೆಯ ದಿನದ ಅಡುಗೆಯನ್ನು ತಾನೇ ಮಾಡುವುದಾಗಿ ಹುಡುಗಿಯರು ಮುಂದಾದರು. ಅಮೃತಳಿಗೂ ರಾಜೇಶ್ವರಿಗೂ ಮೈ ಕೈ ಸುಟ್ಟುಕೊಂಡಾರೆಂಬ ಭಯ.

"ನೀವು ತರಕಾರಿ ಹೆಚ್ಚಿಕೊಡಿರಿ. ಅಡುಗೆ ಮಾಡುವುದು ಬೇಡ" ಎಂದಳು ರಾಜೇಶ್ವರಿ.

"ನಿಜ ಮಕ್ಕಳಿರಾ. ಅಜ್ಜಿ ಹೇಳಿದಂತೆ ಕೇಳಿ" ಎಂದಳು ಅಮೃತ.

ಅತ್ತೆ ಸೊಸೆಯರು ಮಕ್ಕಳಿಗೆ ಹಲವು ಬಾರಿ ಎಚ್ಚರಿಕೆ ಹೇಳಿದರೂ ಮಕ್ಕಳು ಮಣಿಯದೆ ನುಡಿದರು. "ಬಾಬೂರಾವ್ ಇದ್ದಾರೆ. ನಿಮಗೇಕೆ

ಭಯ ? ನೀವೆಲ್ಲಾ ಸುತ್ತಾಡಿ ಬನ್ನಿ."

ರುದ್ರನೂ ಒತ್ತಾಸೆ ನೀಡಿದ "ಮಾಡಲಿ ಬಿಡಿ. ಮುಂದೆಯಾದರೂ ಮಾಡಬೇಕಲ್ಲ ?"

ಆದರೂ ಅತ್ತೆ ಸೊಸೆಯರು ಮಕ್ಕಳಿಗೆ ಮತ್ತೊಮ್ಮೆ ಎಚ್ಚರಿಕೆ ಹೇಳಿ ರುದ್ರನೊಂದಿಗೆ ಗಿರಿ ಪ್ರದೇಶಗಳಲ್ಲಿ ಸುತ್ತಾಡಿ ಬರಲು ಹೊರಟರು. ಅವರು ಸುತ್ತಾಡಿ ಬರುವಷ್ಟರಲ್ಲಿ ಹೊತ್ತು ನೆತ್ತಿಗೆ ಏರಿತ್ತು. ಹೊಟ್ಟೆಯು ಹಸಿದಿತ್ತು. ಅಡುಗೆಯೂ ಸಿದ್ಧವಾಗಿತ್ತು. ರುದ್ರ ಬಾಯಿ ಚಪ್ಪರಿಸುತ್ತ ಹೆಂಡತಿ ಮತ್ತು ತಾಯಿಯರನ್ನು ಮೂದಲಿಸುತ್ತಲೇ ಅಂದ "ನೀವೇನು ಅಡುಗೆ ಮಾಡಬಲ್ಲಿರಿ ? ನನ್ನ ಮಕ್ಕಳು ಮಾಡುತ್ತಾರೆ. ನೋಡಿ. !"

"ಇನ್ನೇನು, ಬಹಳ ಚೆನ್ನಾಗಿದ್ದಿರಲೇಬೇಕು !"

ಎಲ್ಲರ ಮುಖದ ಮೇಲೂ ಮೆಲುನಗೆ ಮೂಡಿತು.

ಎಲ್ಲರೂ ಊಟಕ್ಕೆ ಕುಳಿತರು. ಖಾದ್ಯಗಳು ಅಗವಿಸಿದುವು. ಕೈ ಹಚ್ಚಿದರೆ ಕೇಳುವುದೇನು ? ಅವು ಷಡ್ರಸಗಳ ಕೂಟವಷ್ಟೇ ಅಲ್ಲ, ಹೊತ್ತಿ ಕಪ್ಪಾಗಿ ಏಳನೆಯ ವ್ಯಂಜನವೂ ಅಗ್ರಗಣ್ಯವಾಗಿತ್ತು. ಆದರೂ ಅಡುಗೆ ಬಹಳ ಚೆನ್ನಾಗಿದೆಯೆಂದು ಮೇಜರ್ ರುದ್ರ ಬಾಯಿ ಚಪ್ಪರಿಸಿದ. ಎಲ್ಲರೂ ನಗೆಯ ಗುಲ್ಲೆಬ್ಬಿಸಿದರು. ಅದರಲ್ಲಿ ಹುಡುಗಿಯರ ದನಿಯೇ ಮುಂದು.

o o o o o

ಒಮ್ಮೊಮ್ಮೆ ರುದ್ರ ಕೊಠಡಿಯಲ್ಲಿ ಅರೆ ಹುಚ್ಚನಂತೆ ಶತಪಥ ತಿರುಗುತಿದ್ದ. ಶೌಚದ ಮನೆಗೆ ಹೋಗಿ ತನುಮನಗಳು ತಂಪಾಗುವಷ್ಟು ತಣ್ಣೀರನ್ನು ಸುರಿದುಕೊಳ್ಳುತಿದ್ದ. ಆದರೂ ಏನೋ ಒಂದು ಬಗೆ. ಅರುಣ, ಕಿರಣ, ಕರುಣರು ಇಲ್ಲೇ ಬಳಿಯಲ್ಲೇ ಸುಳಿದಾಡಿದಂತೆ ಭಾಸವಾಗುವುದು. ಅಮೃತಳ ವೀಣಾವಾದನ ಅಲೆಅಲೆಯಾಗಿ ತಂಗಾಳಿಯಲ್ಲಿ ತೇಲಿ ಬಂದಂತೆ ಕಿವಿಯ ಮೇಲೊರೆಯುವುದು. ತಾಯಿಯ ಹಿತವಚನಗಳು ಮನಃಪಟಲದ ಮೇಲೆ ಸುಳಿದಳಿಯುವುವು.

ಮೃದುಮಧುರ ವೀಣಾ ನಿನಾದ ಕಿವಿಯ ಮೇಲೊರೆಯುತ್ತಲೂ

ಮೇಜರ್ ರುದ್ರ ತಟ್ಟನೆ ಕಣ್ಣುಗಳನ್ನು ಟ್ರಾನ್ಸಿಸ್ಟರ್ ಮೇಲೆ ಹೊರಳಿಸಿದ. ಅದರಿಂದ ಹಾಡು ಹೊಮ್ಮುತ್ತಿದೆಯೇ ? ಅಥವಾ ನಿಜವಾಗಿಯೂ ಕೇಳುತಿದ್ದೇನೆಯೇ ? ಕಣ್ಣುಗಳನ್ನು ಸುತ್ತಲೂ ಹೊರಳಿಸಿ ನಿರಿನಿರಿ ನಿಟ್ಟಿಸಿದ. ಟಿಂಟಿಣಿ ನಾದವಂತೂ ಎಲ್ಲಿಂದಲೋ ಹರಿದು ಬರುತ್ತಿದೆ. ಎಲ್ಲಿಂದ ಎಂಬುದು ಅರ್ಥವಾಗದು. ಕಣ್ಣುಗಳು ಟೇಪ್ ರಿಕಾರ್ಡರಿನ ಮೇಲೆ ಹೊರಳಿದುವು. ಅದೂ ಮೂಲೆಯಲ್ಲಿ ಬೆಪ್ಪನಂತೆ ಕುಳಿತಿದೆ. ಅದರೆಡೆಗೆ ಯಾರ ಕರುಣ ದೃಷ್ಟಿಯೂ ಬಿದ್ದಿಲ್ಲ. ಅದರ ವಯರು ಸ್ವಿಚ್ ಗಳು ತೊಟ್ಟುಗಳಚಿದ ಹೂವಿನಂತೆ ಅಲ್ಲಲ್ಲೇ ಬಿದ್ದಿವೆ. ಅಂದಮೇಲೆ ಎಲ್ಲಿಂದ ಬರುತ್ತಿದೆ. ನಿನಾದ...? ನಿಜವಾಗಿಯೂ ಅದು ಅಮೃತಳ ವೀಣಾವಾದನ...ಹಾ ! ಎಷ್ಟೊಂದು ಮಧುರವಾಗಿದೆ ! ಎಲ್ಲಿದ್ದಿ ಅಮೃತ್ ? ಗೋಡೆಯೊಳಗೆ, ಮಾಡಿನ ಮೇಲೆ, ಮಂಜಿನಾಚೆ. ಓಹ್ ! ಎಲ್ಲಿದ್ದಿ ಅಮೃತ್....

ಮೇಜರ್ ರುದ್ರ ತಟ್ಟನೆ ಎದ್ದ. ಮೈಗೆ ಅಶ್ವಬಲ ಮೂಡಿ ಬಂತು. ಟ್ರಾನ್ಸಿಸ್ಟರಿಗೆ ಕೈ ಹಚ್ಚಿಯೂ ನೋಡಿದ. ಉಹೂ ಅದರ ಸ್ವಿಚ್ ಒತ್ತಿಯೇ ಇಲ್ಲ. ಅಂದಮೇಲೆ ಎಲ್ಲಿಂದ ಬರುತ್ತಿದೆ ? ಅಲ್ಲಿಂದ ಎದ್ದು ಕಿಟಕಿಯ ಬಳಿಗೆ ಹೋದ. ನೋಟ ಹರಿಯುವವರೆಗೂ ದಿಟ್ಟಿ ತಡುಕಿತು. ಆದರೆ ಅಲ್ಲೇನಿದೆ ?

ಸುತ್ತಮುತ್ತಲಿಂದ ಹಲವಾರು ಕಣ್ಣುಗಳು ಇತ್ತಲೇ ನಿಟ್ಟಿಸಿದುವು. ನಾಲ್ಕಾರು ದಿನಗಳಿಂದ ಹೊರಗಡೆ ತಲೆ ಹಾಕಿರದುದರಿಂದ ನೋಡುವ ಕಣ್ಣುಗಳಿಗೆ ಆತುರವೆಷ್ಟು ? ಠಾಣ್ಯದಿಂದ ಠಾಣ್ಯಕ್ಕೆ ಓಡಾಡುವ ಸಿಪಾಯಿ ಗಳು. ಮದ್ದಿಗಾಗಿ ಬಂದವರು. ದವಸಧಾನ್ಯ ತಂದವರು. ಒಂದು ಗಳಿಗೆ ಅಲ್ಲಲ್ಲೇ ನಿಂತು ಇತ್ತಲೇ ನಿಟ್ಟಿಸಿದರು. ಒಮ್ಮಲೇ ಮನಸ್ಸಿಗೆ ಕಿನಿಸಿಗೆ ಮೂಡಿ ಅಲ್ಲಿಂದ ಹಿಂದೆ ಸರಿದ.

ಮತ್ತೆ ಅದೇ ಮಧುರ ವೀಣಾ ನಿನಾದ.

ಮೇಜರ್ ರುದ್ರ ಕಿವಿ ನಿಮಿರಿಸಿದ. ಮನಸ್ಸು ಪ್ರಫುಲ್ಲವಾದರೂ ಹೃದಯ ಭಾರವಾಯಿತು. ನನ್ನನ್ನು ಸಾಂತ್ವನಗೈಯುವುದಕ್ಕಾಗಿ ಎಲ್ಲಿಂದ ಎಲ್ಲಿಗೆ ಬಂದಿದಾಳೆ ಅಮೃತ ? ಅಯ್ಯೋ, ನನ್ನ ಕತೆ ಹಾಳಾಗಲಿ,

ಮಕ್ಕಳನ್ನು ಬಿಟ್ಟು ಇಲ್ಲೇಕೆ ಬಂದೆ? ಹುಡುಗಿಯರು ಚಿಕ್ಕವರು, ಹಾದಿ ತಪ್ಪಿಯಾರು! ಈಗ ನಿನ್ನ ಆಶ್ರಯಬೇಕು. ಅವರನ್ನೆಲ್ಲಾ ಅಲ್ಲಲ್ಲೇ ಬಿಟ್ಟು ನನಗಾಗಿ ಓಡಿ ಬರಬೇಡ ಅಮೃತ್!

ಬಾಗಿಲ ಬಳಿ ಮೆಲ್ಲಮೆಲ್ಲನೆ ಬೂಟಿನ ಸಪ್ಪಳ.

ಸದ್ದು ಕೇಳಿಬಂದರೂ ನೋಟ ಹೊರಳಲಿಲ್ಲ. ಡಾ|| ಹುಸೇನ್ ಬಾಗಿಲಲ್ಲಿ ಹಣಿಕಿ ಮೆಲ್ಲಗೆ–ಬಹಳ–ಮೆಲ್ಲಗೆ ಕಟಕಟ ಸದ್ದು ಮಾಡಿ ಒಳ ಗಡೆ ಬಂದ. ಮೇಜರ್ ರುದ್ರ ತಲ್ಲೆಯೆತ್ತಲಿಲ್ಲ.

"ಮೇಜರ್ ಸಾಬ್!"

"ದಯವಿಟ್ಟು ನಾನೊಬ್ಬನೇ ಇರಲು ಅವಕಾಶ ಕೊಡು ಡಾಕ್ಟರ್".

"ಆಗಬಹುದು ಆದ್ದರಿಂದಲೇ ಹೊರಗಡೆ ಇದ್ದೆ. ಈಗೇನು ತೆಗೆದು ಕೊಳ್ಳುತ್ತಿ ಹೇಳು."

"ಹೊಟ್ಟೆ ತುಂಬಿದೆ ಡಾಕ್ಟರ್."

"ಏನಾದರೂ ಸ್ವಲ್ಪ..."

"ಆಗಲೇ ತೆಗೆದುಕೊಂಡಿದ್ದೇನೆ. ಈಗೇನೂ ಬೇಡ".

ಮೂರು ದಿನಗಳಿಂದಲೂ ಅನ್ನುತಿದ್ದುದೇ ಹಾಗೆ. ಒಂದು ರೊಟ್ಟಿಯ ಚೂರೋ ಒಂದು ತುತ್ತು ಅನ್ನವೊ ತಿನ್ನಿಸಬೇಕಾದರೆ ಸಾಕು ಸಾಕಾಗು ತಿತ್ತು. ಒಮ್ಮೊಮ್ಮೆ ಡಾ|| ಹುಸೇನ್ ಬಳಿಯಲ್ಲಿದ್ದರೆ ಕ್ಷೇಮ ಎಂಬಷ್ಟು ಆಕರ. ಇನ್ನೊಮ್ಮೆ ಯಾರೂ ಇರುವುದು ಬೇಡ ಎಂಬಷ್ಟು ಕಿಸಿಸಿಗೆ. ಆಗಲೇ ಮೈ ಸೊರಗಿ ಕಣ್ಣುಗಳು ಗುಳಿ ಬಿದ್ದಿದ್ದುವು. ಮನಸ್ಸಿನ ರೊಚ್ಚು ಇಳಿದರೂ ಒಮ್ಮೆ ಹುಚ್ಚಾಗುತ್ತಿದ್ದ. ಇನ್ನೊಮ್ಮೆ ಕೆಚ್ಚಾಗುತಿದ್ದ. ಮತ್ತೊಮ್ಮೆ ಸಪ್ಪೆ....ಬರೀ ಸಪ್ಪೆ.

"ಮೇಜರ್ ಸಾಬ್!"

"ಡಾಕ್ಟರ್..." ಒಣಗಿದ ತುಟಿಯನ್ನು ನಾಲಗೆಯಿಂದ ಸವರಿಕೊಂಡ. ಮುಂದೆ ಮಾತು ಹೊರಡಲಿಲ್ಲ. ಗಂಟಲು ಬಿಗಿಯಿತು.

"ಏನಪ್ಪಾ..."

"ನನಗಿನ್ನು ಬದುಕು ಬೇಕಿಲ್ಲ."

"ಹಾ! ಹಾಗೆಂದವರುಂಟೇ?"

ರುದ್ರ ಮಾತಾಡಲಿಲ್ಲ. ಎದೆಯಾಳದಲ್ಲಿ ಬಿಸಿಯುಸಿರು ಎಣೆಯಿಲ್ಲದೆ ಹೆಣಿದಾಡಿತು.

"ನಿನ್ನ ಚಿತ್ತಶಾಂತಿಯಾಗುವವರೆಗೂ ನಿನ್ನವರ ಆತ್ಮಗಳಿಗೆ ಶಾಂತಿಯು ದೊರೆಯಲಾರದು. ಯೋಚಿಸಿ ನೋಡು, ಆತುರದ ಕ್ರಮ ಕೈಗೊಳ್ಳು ವುದು ಸರಿಯಲ್ಲ."

"......."

"ಮನಶ್ಶಾಂತಿ ಪಡೆದುಕೊಳ್ಳುವವರೆಗೂ ಪ್ರಾರ್ಥಿಸು ರುದ್ರ."

"ಹಾಯ್...!"

"ನಿನಗೆ ಸ್ವಲ್ಪ ನಿದ್ರೆ ಬಂದರೆ ಒಳ್ಳೆಯದು. ಒಂದು ಮಾತ್ರೆ ಕೊಡಲೇ ?"

"ಒಂದೇಕೆ ? ಹತ್ತು ಕೊಡು. ಸಣ್ಣ ನಿದ್ದೆ ಬೇಡ. ದೀರ್ಘ ನಿದ್ದೆ ಬರಲಿ."

"ಛೀಃ ! ಛೀಃ !".

"ಇನ್ನಾರಿಗಾಗಿ ಈ ಬಾಳ್ವೆ ?"

"ದೇಶಕ್ಕಾಗಿ ! ನಿನ್ನ ದೇಹದಲ್ಲಿ ನೆತ್ತರಿನ ಕೊನೆಯ ಬಿಂದು ಇರುವ ವರೆಗೂ ನೀನು ಹೋರಾಡಬೇಕು ರುದ್ರ."

"ಹಾ....!"

ಸುಮಧುರ ವೀಣಾನಾದ....ಟಂಟಣಿ....ಟಂಟಣಿ.

ಎರಡೂ ಹಸ್ತಗಳ ನಡುವೆ ಶಿರೋಭಾರವನ್ನಿಳುಹಿ ಕಣ್ಮುಚ್ಚಿ ಕುಳಿತ ರುದ್ರ. ಡಾ|| ಹುಸೇನ್ ಹೆಜ್ಜೆಯ ಮೇಲೆ ಹೆಜ್ಜೆಯನ್ನಿಟ್ಟು ಹೊರ ಹೋದ.

ಡಾ|| ಹುಸೇನನ ದವಾಖಾನೆ ಇಲ್ಲೇ ತಳ ಊರಿತು. ಪಕ್ಕದಲ್ಲಿದ್ದ ಇನ್ನೊಂದು ಸೈನಿಕ ಶಿಬಿರವನ್ನು ತನ್ನ ದವಾಖಾನೆಗೆ ಅಳವಡಿಸಿಕೊಂಡು ಸ್ಥಳವನ್ನು ವಿಸ್ತರಿಸಿಕೊಂಡ ಹುಸೇನ್. ರುದ್ರನ ಮನೆಯವರ ಶವ ಸಂಸ್ಕಾರದ ಸುದ್ದಿಯೂ ಬಂದು ಮುಟ್ಟಿತು. ತನ್ನವರಾರೂ ಉಳಿಯ ದಿದ್ದುದರಿಂದ ಮೇಜರ್ ರುದ್ರ ಊರಿಗೆ ಹೋಗುವ ಯೋಚನೆಯನ್ನು ಸಹಿತ ಮಾಡಲಿಲ್ಲ.

ಮೇಜರ್ ರುದ್ರ ಗಡಿ ಠಾಣ್ಯಕ್ಕೆ ಬಂದಾಗಿನಿಂದ ಪಾಕಿಸ್ತಾನಿಯ ರೊಡನೆ ಅನೇಕ ಬಾರಿ ಸಣ್ಣ ಪುಟ್ಟ ಘರ್ಷಣೆಗಳು ನಡೆದಿದ್ದುವು. ಕಳೆದ ತಿಂಗಳಿನಿಂದ ಎರಡೂ ಕಡೆಯ ಪಡೆಗಳು ರಣರಂಗಕ್ಕೆ ಇಳಿದಿವೆ. ದಿನೇ ದಿನೇ ಭಾರತದ ಪಡೆಗಳು ಪಾಕೀಸ್ತಾನದ ಪಡೆಗಳನ್ನು ಸದೆಬಡಿಯುತ್ತಾ ಮುನ್ನುಗ್ಗುತ್ತಿವೆ. ಕ್ಷಣಕ್ಷಣವೂ ಭಾರತದ ಪಡೆಗಳ ಕೈ ಮೇಲಾಗುತಿತ್ತು. ರಣರಂಗದ ಸುದ್ದಿ ಠಾಣ್ಯಕ್ಕೆ ಬಂದಾಗಲೆಲ್ಲ ಇಲ್ಲಿಯವರು ಕೇಕೆ ಹಾಕಿ ನಲಿಯುತಿದ್ದರು. ಕುಣಿದಾಡಿ ನಗೆಯಾಡಿ ಅದೇ ವಿಷಯವನ್ನು ಮೇಲಿಂದ ಮೇಲೆ ಬಣ್ಣಿಸುವಾಗ ಒಬ್ಬರಿಗೊಬ್ಬರು ಅಪ್ಪಿ ನಗೆಯ ಹೊನಲನ್ನು ಹರಿಸುತಿದ್ದರು.

ರುದ್ರನಿಗೆ ಹೊರವಲಯದ ಮಾತುಗಳು ಕಿವಿಯ ಮೇಲೆ ಬಿದ್ದಾಗ ಹೃದಯ ಭಾರವಾಗಿದ್ದರೂ ಮನಸ್ಸು ಹಗುರವಾಗುತಿತ್ತು. ಒಮ್ಮೆ ಬೇಡವೆನ್ನಿಸಿದರೂ ಮಗದೊಮ್ಮೆ ತಾನಾಗಿ ಕಿವಿ ಕೊಡುತ್ತಿದ್ದ. ಒಮ್ಮೊಮ್ಮೆ ರಣರಂಗದ ಭೀಕರ ಗುಂಡಿನ ಮೊರೆತವೂ ಕಿವಿಯ ಮೇಲೆ ಬೀಳುತಿತ್ತು. ಹಾಗೆ ಕೇಳಿಸಿಕೊಳ್ಳುವಾಗಲೆಲ್ಲ ನಾನೇಕೆ ಯುದ್ಧರಂಗಕ್ಕೆ ಹೋಗಬಾರದು ? ಹತ್ತು ಮಂದಿಯನ್ನು ಸದೆಬಡಿದು ತನ್ನ ನೆತ್ತರನ್ನೂ ಅಲ್ಲೀ ಬಸಿಯುವುದಾದರೆ ನಿಜವಾಗಿಯೂ ತನಗೆ ಮುಕ್ತಿ ದೊರೆಯುತ್ತದೆ ಎಂಬ ಯೋಚನೆಯೂ ಬರುತಿತ್ತು. ಆದರೆ ಕೈಕಾಲುಗಳಲ್ಲಿ ಬಲ ವಿದ್ದರಷ್ಟೆ ?

ಮೇಜರ್ ರುದ್ರ ಎದ್ದು ಹೋಗಿ ಪಲ್ಲಂಕದ ಮೇಲೆ ಬೋರಲಾಗಿ ಬಿದ್ದ.

ಠಾಣ್ಯದ ಹೊರವಲಯದಲ್ಲಿ ಸಿಪಾಯಿಗಳು ಆನಂದಾಂಬುಧಿಯಲ್ಲಿ ಮುಳುಗಿದ್ದಾರೆ. ಬಹುಶಃ ರೇಡಿಯೋ ಸುದ್ದಿ ವಿಜಯದ ವಾರ್ತೆಯನ್ನು ಬಿತ್ತರಿಸಿತೋ ಏನೋ. ಸಿನಿಮಾ ಹಾಡುಗಳು ಹೊರ ಹೊಮ್ಮು ತ್ತಿದ್ದುವು. ಇಂಗ್ಲೀಷ್ ಹಾಡು, ಹಿಂದಿ ಹಾಡು, ಕೆಲವೊಮ್ಮೆ ಕನ್ನಡ, ತೆಲುಗು, ತಮಿಳು ಹಾಡುಗಳೂ ಒರಿಯ ಗೀತೆಗಳೂ ಕರ್ಣಪಟಲಗಳ ಮೇಲೆ ಬೀಳುತ್ತಿವೆ. ರಾಗವೂ ಇಲ್ಲ ; ರಸವೂ ಇಲ್ಲ. ಹಾಡಿದ್ದೇ ರಾಗ ಹಾಕಿದ್ದೇ ತಾಳ. ಮದ್ದಲೆಗಳ ಸದ್ದನ್ನೂ ಮೀರಿಸುತ್ತಿದೆ—ಅವರು ಬಡಿ ಯುವ ಸದ್ದು ! ಡಬ್ಬ ಬಡಿಯುತ್ತಿದ್ದಾರೋ ಮಡಕೆ ಬಡಿ

ಯುತ್ತಿದ್ದಾರೋ ದೇವರಿಗೇ ಗೊತ್ತು.

"ಜೈ ಕಾಳಿ ಮಾತಾ !"

"ಹರ ಹರ ಮಹಾದೇವ !"

"ಜೈ ಸೀತಾ ರಾಂ."

"ಬೋಲೋ ಭಾರತ್ ಮಾತಾಕಿ ಜೈ !"

"ಓ....ಹೋ...ಹೋ ! ಎಷ್ಟು ಬಗೆ ಜೈಕಾರ ? ಎಲ್ಲರ ದನಿಯೂ ಕಲಸುಮೇಲೋಗರವಾಗಿ ಮಿಶ್ರನೋಳವಾಗಿ ತಲೆಯನ್ನು ತುಂಬಿದುವು.

ಈ ಹಾಳು ಡಾಕ್ಟರ್ ಒಂದು ನಿದ್ದೆಯ ಗುಳಿಗೆಯನ್ನೂ ಸಹ ಇಡುವುದಿಲ್ಲ.

"ಸರ್..."

"........"

"ಸರ್...."

ದನಿ ಬಂದ ಕಡೆ ನೋಟ ಹೊರಳಿತು.

ಅಜಿಲ ನೀಳವಾದ ಮೈಯನ್ನು ಗೇಣುದ್ದ ಕುಗ್ಗಿಸಿ ನಿಂತಿದ್ದ. ಕೈಯಲ್ಲಿ ಟ್ರೇ ಇತ್ತು- ಅದರಲ್ಲಿ ತಿಂಡಿ ತಿನಿಸುಗಳೂ ಒಂದು ಬಿಸಿ ಹಾಲೂ ಇದ್ದುವು. ತಿಂಡಿಯನ್ನು ಒಯ್ಯುವಾಗಲೆಲ್ಲ ಇದುವರೆವಿಗೂ ಜೊತೆಗೆ ಡಾ|| ಹುಸೇನ್ ಇರುತ್ತಿದ್ದ. ಇಂದವನು ಗಾಯಾಳುವಿಗೆ ಚಿಕಿತ್ಸೆ ನೀಡುತ್ತಿದ್ದುದರಿಂದ ಅಜಿಲನಿಗೆ ಜೀವ ಚಿಮ್ಮುವಷ್ಟು ಭಯ. ಅವನ ರೀತಿಯನ್ನು ನೋಡುತ್ತಲೂ ಮನಸ್ಸು ಮಂಜಿನಂತೆ ಕರಗಿತು. ತಾನು ಅವರಿಗಾಗಿ ಏನು ಮಾಡದಿದ್ದರೂ ಅವರೆಲ್ಲಾ ನನಗಾಗಿ ಮನಮುಟ್ಟಿ ಸೇವೆ ಮಾಡುತ್ತಿದ್ದಾರೆ. ಅಯ್ಯೋ, ನಾನೆಂತಹ ಕಟುಕ ..!

ಚಹದ ಬಸಿ ಬಟ್ಟಲುಗಳನ್ನು ಟೀಪಾಯಿಯ ಮೇಲೆ ಅಳವಡಿಸಿ ಕಾದು ನಿಂತಿದ್ದ. ಅಜಿಲ. ರುದ್ರ ಏಳುತ್ತಿದ್ದಂತೆ ತೋಳಾಶ್ರಯ ನೀಡಿ ಎದ್ದು ಕುಳಿತುಕೊಳ್ಳಲು ಸಹಾಯ ಮಾಡಿ ತಿಂಡಿ ತಿನಿಸುಗಳನ್ನು ಮುಂದಿಟ್ಟ. ಅಂದಿನಿಂದಲೂ ಒಂದೇ ಸಮನೆ ಸೇವೆ ಮಾಡುವವರ ಬಗೆಗೆ ಮನಸ್ಸು ಮರ್ಮರ ಮರುಗಿತು.

"ನನ್ನ ಮನಸ್ಸು ಸರಿಯಾಗಿಲ್ಲ. ದಯವಿಟ್ಟು ಏನೂ ತಿಳಿದುಕೊಳ್ಳ ಬೇಡ ಅಜಿಲ."

"ಇಲ್ಲ....ಸರ್."

ಕೆಂಗಣ್ಣುಗಳ ಅಂಚಿನಲ್ಲಿ ಬೆಳ್ಳಿಯ ಗೆರೆಯಂತೆ ನೀರಾಡಿತು.

ಅಜಿಲ ತಲೆಬಾಗಿದ. ಒಡೆಯನ ಕಣ್ಣಹನಿಗಳಿಗುತ್ತರವಾಗಿ ಅವನ ಕಣ್ಣುಗಳಲ್ಲೂ ಪ್ರತಿ ಹನಿಗಳು ಮೂಡಿದುವು.

ಎದೆಯ ಸುಯ್ಲು ಸುಯ್ಯಲರೊಡನೆ ಸ್ವಚ್ಛಂದವಾಗಿ ಬೆರೆಯಿತು.

೦ ೦ ೦ ೦ ೦

ಮೂರು ವಾರಗಳಿಂದ ನಡೆಯುತ್ತಿದ್ದ ಉಗ್ರ ಕದನ ತಾಷ್ಕೆಂಟ್ ರಾಜೀ ಸೂತ್ರದ ಮೇಲೆ ತಡೆದು ನಿಂತಿತು. ಪಾಕಿಸ್ತಾನದ ಗಡಿಯೊಳಕ್ಕೆ ನುಗ್ಗಿದ ಭಾರತದ ರೆಜಿಮೆಂಟ್ ಮೂರು ಮೈಲಿ ಮುನ್ನಡೆದು ಪಾಕಿಸ್ತಾನಿ ಗಳನ್ನು ಸದೆಬಡಿದು ಯುದ್ಧ ಸಾಮಗ್ರಿಗಳನ್ನು ವಶಪಡಿಸಿಕೊಂಡು ಸೈನಿಕ ರನ್ನು ಸೆರೆಹಿಡಿದು ವಿಜಯಪತಾಕೆ ಹಾರಿಸಿತ್ತು. ಭಾರತದ ಠಾಣ್ಯ ಗಳಲ್ಲೆಲ್ಲಾ ವಿಜಯೋತ್ಸಾಹ ನಲಿಯುತಿತ್ತು. ಸಿಪಾಯಿಗಳು ಕುಣಿದಾಡು ತಿದ್ದರು. ಎಲ್ಲರ ಬಾಯಲ್ಲೂ ಶೌರ್ಯ ವೀರ್ಯಾದಿಗಳ ಕತೆ ಕೇಳಿ ಬರುತ್ತಿತ್ತು. ಯುದ್ಧರಂಗದ ಸುದ್ದಿಗಳು ಮತ್ತೆ ಮತ್ತೆ ಮೊಳಗುತ್ತಿದ್ದುವು. ದಿನವೆಲ್ಲ ಅದೇ ಸುದ್ದಿ. ಅದೇ ಉತ್ಸಾಹ.

ಗೆದ್ದು ಬಂದ ಬಗೆ. ಕದ್ದು ಬಂದ ಬಗೆ. ಸದೆಬಡಿದ ಬಗೆ. ಮದ್ದು ಗುಂಡು ಗಳಿಸಿದ ಬಗೆ. ವಿಜಯ ಪತಾಕೆ ಹಾರಿಸಿದ ಬಗೆ. ಚಿತ್ರ ವಿಚಿತ್ರವಾಗಿ ಸವಿಸ್ತಾರವಾಗಿ ಕಿವಿಯ ಮೇಲೊರೆಯುತಿತ್ತು. ಮಾತು, ಮಾತು ಕಿವಿ ಕಿವುಡಾಗುವಷ್ಟು ಮಾತು. ಇನ್ನು ಕೇಳಲಾರೆನೋ ಎಂದು ನರಳಿತು ಜೀವ. ಮನಸ್ಸು ತುಸು ಅರಳಿದರೂ ಹೃದಯ ದಣಿ ಯಿತು. ರುದ್ರ ಎರಡೂ ಕಿವಿಗಳಿಗೆ ಅರಳೆ ಇಟ್ಟುಕೊಂಡು ಆರಾಮ ಕುರ್ಚಿಯ ಮೇಲೆ ಮೈ ಚೆಲ್ಲಿದ. ದೀರ್ಘದೇಹ ಮರದ ದಿಮ್ಮಿಯಂತೆ ಕಾಲು ಚಾಚಿತು. ದಿಟ್ಟಿ ಮಾಡಿನ ಸೇರಕ್ಕೆ ಹರಿದರೂ ಏನನ್ನೂ ನೋಡು ತ್ತಿರಲಿಲ್ಲ. ಕೈಗಳೆರಡನ್ನೂ ಏರಿಳಿಯುವ ಎದೆಯ ಮೇಲೆ ಕಟ್ಟಿದ. ಮನಸ್ಸು ಸಂದುಹೋದ ದಿನಗಳ ಕಡೆ ಹೊರಳಿತು. ಅಂದಿನಿಂದ

ಇಂದಿನವರೆಗಿನ ಜೀವನಧಾರೆಯಲ್ಲಿ ತೇಲಿ ದುಃಖದೂಟೆಯಲ್ಲಿ ಮಿಂದು ಕಂಬನಿಯ ಕಟ್ಟೆಯೊಡೆಸಿತು ಚಿತ್ತ–ರುದ್ರ ಹೆಂಗಳೆಯಂತೆ ಕಂಬನಿಗೆರೆದ.

ಅರವತ್ತರ ತಾಯಿ, ಹರೆಯದ ಸತಿ, ಹಾಲ್ಗೆನ್ನೆಯ ಹೆಣ್ಣು ಮಕ್ಕಳು ಸ್ಮೃತಿ ಪಥದಲ್ಲಿ ಫೇರಿ ನಡೆಸಿದರು. ಐದು ಮಂದಿ ಅಬಲೆಯರ ಆತ್ಮಕ್ಕೆ ಶಾಂತಿಯನ್ನೊದಗಿಸಬೇಕೆಂದರೆ ಕನಿಷ್ಠಪಕ್ಷ ಐವತ್ತು ಮಂದಿ ಶತೃಗಳ ಎದೆಯ ನೆತ್ತರನ್ನು ಬಸಿಯದಿದ್ದಲ್ಲಿ ಶಾಂತಿ ಕೋರುವ ಯೋಚನೆಯನ್ನು ಮಾಡದಿರುವುದು ಲೇಸು.

ಓ...ಕಾಲಿಮಾ ! ನನಗೆ ಶಕ್ತಿ ನೀಡು. ನನ್ನವರಿಗೆ ಶಾಂತಿ ಕೋರಿದ ನಂತರ ನನಗೆ ಬದುಕು ಬೇಡವೇ ಬೇಡ.

ಎರಡೂ ಕೈಗಳನ್ನು ಜೋಡಿಸಿ ಪ್ರಾರ್ಥಿಸಿದ ರುದ್ರ. ಕಣ್ಣುಗಳ ಅಂಚಿನಲ್ಲಿ ಕಂಬನಿ ಧಾರಾಕಾರವಾಗಿ ಹರಿಯಿತು.

ಬಾಗಿಲ ಬಳಿಗೆ ಬಂದಿದ್ದ ಡಾ|| ಹುಸೇನನ ಕಿವಿಗೆ ಕಾಲಿಮಾ ಸ್ಮರಣೆ ಸ್ವಚ್ಛಂದವಾಗಿ ಬಿತ್ತು.

....ಈಗೇಕೆ ಹೀಗೆ ಚೀರುತ್ತಾನೆ ರುದ್ರ ? ಮೊದಲು ಅವನೆಷ್ಟು ರುದ್ರ ಗಂಭೀರ ? ಈಗ ಇಷ್ಟೊಂದು ದುರ್ಬಲನಾದುದು ಹೇಗೆ ? ರುದ್ರ ಇದುವರೆವಿಗೆ ಎಷ್ಟು ಮಂದಿಯನ್ನು ಕೊಲ್ಲಲಿಲ್ಲ ? ನಿಜವಾಗಿಯೂ ಯೋಚಿಸಿದರೆ ಅವನು ಸ್ವತಃ ಕೊಲೆಗಾರನೂ ಹೌದು. ಅಂದಮೇಲೆ ಇಂದು ತನ್ನವರ ಕೊಲೆಯನ್ನೇಕೆ ಸಹಿಸಿಕೊಳ್ಳಲಿಲ್ಲ ? ಸ್ವಜನರು ಮಾತ್ರ ಜೀವಿಗಳೇ...?

ಓ....ಕಾಲಿಮಾ !

ಡಾ|| ಹುಸೇನ್ ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ಒಳಬಂದ ಮೇಜರ್ ರುದ್ರ ಮುಚ್ಚಿದ ಕಣ್ಣುಗಳನ್ನು ತೆರೆದಿರಲಿಲ್ಲ. ಧಾರಾಕಾರವಾಗಿ ಕಂಬನಿ ಸುರಿಯುತ್ತಲೇ ಇತ್ತು. ಮುಖ ಬಣ್ಣಗೆಟ್ಟು ಕಂದಿ ಕುಂದಿದೆ. ಕಣ್ಣುಗಳ ಸುತ್ತ ಕಪ್ಪು ಹೆಪ್ಪುಗಟ್ಟಿದೆ. ತುಂಡುಗಡಿದ ಹೆಮ್ಮರದಂತೆ ಬಿದ್ದ ದೃಶ್ಯ ಕರುಣಾಜನಕವಾಗಿತ್ತು.

"ಮೇಜರ್ ಸಾಬ್"

"......"

"ರುದ್ರ ಮಹಾಶಯಾ."

"ಹುಸೇನ್, ನನ್ನನ್ನೇಕೆ ಗೋಳು ಹುಯ್ಯುತ್ತಿ ? ಠಾಣ್ಯದ ಮೇಲೆ ಬಾಂಬಿನ ಧಾಳಿಯಾದಾಗಲೂ ಬದುಕಿ ಉಳಿದೆಯಲ್ಲಾ, ಹಾಳಾದವನೇ !" ರುದ್ರ ಚೀರಿದ.

"ಸಾವು ಎಲ್ಲರಿಗೂ ಒಂದೇ ಬಾರಿಗೆ ಬರುವುದಿಲ್ಲ. ಅದು ಎಂದು ಬರಬೇಕೋ ಅಂದು ಬಂದೀತು..."

"......."

"ಇನ್ನು ಎಷ್ಟು ಕಾಲ ಹೀಗೆ ? ನೀನು ಮಾಡಬೇಕಾದ ಕೆಲಸ ಬಹಳ ಇದೆ. ಪಾಕಿಸ್ತಾನಿಯರು ಇಂದು ರಾಜಿಯ ಸೂತ್ರ ಹಿಡಿದರೂ ಇನ್ನೆಂದಾದರೂ ಧಾಳಿ ಹೂಡುವವರೇ. ಇಂದಿನ ರಾಜಿ ಮುಂದಿನ ರಂಗಕ್ಕೆ ಸಜ್ಜಾಗಲು ಸಮಯವೊದಗಿಸುತ್ತದೆ. ನೀನು ಉಣ್ಣದೆ ತಿನ್ನದೆ ಮೈ ಕೆಡಿಸಿಕೊಂಡರೆ ಏನು ಸಾಧಿಸಿದ ಹಾಗಾಯಿತು ? ಚೆನ್ನಾಗಿ ಉಂಡು ತಿಂದು ನೆತ್ತರನ್ನು ವೃದ್ಧಿಗೊಳಿಸಿಕೋ. ಹೃದಯವನ್ನು ಕಲ್ಲಾಗಿಸಿಕೋ. ನಿನ್ನ ರೀತಿ ಯೋಧನಿಗೆ ಶೋಭೆಯಲ್ಲ."

ಎದೆಯ ಹಕ್ಕಿ ಚೀರಿತು...ಹೌದು. ಗಂಡಸರಿಲ್ಲದ ಮನೆಗೆ ನುಗ್ಗಿ ಅಬಲೆಯರನ್ನು ಅಮಾನುಷವಾಗಿ ಕೊಂದವರನ್ನು ಸದೆ ಬಡಿಯದ ಹೊರತು ನನಗೆ ಶಾಂತಿ ಇಲ್ಲ.

ಆದರೆ...ಆದರೆ...

ಹಾ....! ಎಲ್ಲವೂ ಕರ್ಮಾನುಸಾರ...ನಮ್ಮ ಕರ್ಮಕ್ಕೆ ಯಾರ ಮೇಲೇಕೆ ಹಗೆ ? ಈ ಜೀವನ ಯಾರಿಗೂ ಶಾಶ್ವತವೂ ಅಲ್ಲ ; ಸುಖ ಪ್ರದವೂ ಅಲ್ಲ ಎಂತಹ ಕರ್ಮವೋ ಅಂತಹ ಫಲ ! ಮತ್ತೇಕೆ ಕೊರಗು ? ಇನ್ನೇಕೆ ದುಃಖ ?

ಅಂದಮೇಲೆ...?

ಒಂದು ಗಳಿಗೆ ಕಣ್ಣು ಮುಚ್ಚಿ ನೋವನ್ನು ನುಂಗಿಕೊಂಡ ಹಗೆಯ ನೆಲೆಯಲ್ಲಿ ತಂತಾನೇ ಸಮಾಧಾನದ ಮೊಗ್ಗು ಅರಳಿತು. ರುದ್ರ ನಿಟ್ಟುಸಿರು ಬಿಟ್ಟ. ತುಟಿಗಳು ಬಿರಿದುವು.

"ಹುಸೇನ್ ! ಸೇಡು ತೀರಿಸಿಕೊಳ್ಳುವ ಗೋಜು ನನಗೆ ಬೇಡವೇ ಬೇಡ. ಅದರ ಹಿತಾಹಿತಗಳನ್ನು ನೋಡಿಕೊಳ್ಳಲು ಕಾಲಿಮಾ ಇದ್ದಾಳೆ."

"ಸರಿ. ನಿನಗೆ ಯಾವುದೂ ಬೇಡ. ನಿಶ್ಚಿಂತೆಯಿಂದ ಇರು. ಮನಸ್ಸಿಗೆ ಯಾವುದನ್ನೂ ಹಚ್ಚಿಕೊಳ್ಳಬೇಡ."

"ಡಾಕ್ಟರ್ !"

"ಏನಪ್ಪಾ ?"

ಏನೋ ಹೇಳುವುದಿತ್ತು. ಒಂದು ಗಳಿಗೆ ಚಿಂತಿಸಿದ ತುಟಿಗಳು ಬಿರಿಯಲಿಲ್ಲ. ಮೈಯಲ್ಲಿ ನಂಜಿನ ಝುರಿ ಹರಿದಂತಾಗಿ ಮೈನವಿರೆದ್ದಿತು. ರುದ್ರ ಹಾಗೇ ಕಣ್ಮುಚ್ಚಿದ.

ದವಾಖಾನೆಯಿಂದ ಕರೆ ಬಂದುದರಿಂದ ಡಾ|| ಹುಸೇನ್ ಹೊರಟ.

ಮನೋಮಂದಿರದಲ್ಲಿ ವೀಣಾನಾದ ಟಂಟಣಿಗೈಯ್ಯುತಿತ್ತು. ರುದ್ರ ಮುಚ್ಚಿದ ಕಣ್ಣು ತೆರೆಯಲಿಲ್ಲ. ಸ್ಮೃತಿಫಟಲದ ಮೇಲೆ ತನ್ನವರು ಸುಳಿ ಸುಳಿದಳಿದರು. ಹೊತ್ತು ಮೆಲ್ಲನುರುಳಿತು.

"ಓ....ಕಾಲಿಮಾ ! ನನಗೆ ದಾರಿ ತೋರು. ಯಾವುದು ಹಿತ, ಬದುಕೋ ? ಸಾವೋ ?"

"ಹೇಡಿ ! ಶುದ್ಧ ಹೇಡಿ !"

"ಕಾಲಿಮಾ ನನಗೆ ಶಕ್ತಿ ನೀಡು, ಧೈರ್ಯ ನೀಡು"

"ನಿನಗೆ ಶಕ್ತಿ ನೀಡಲು ಇನ್ನೊಬ್ಬರು ಬರಬೇಕೆ ರುದ್ರ ? ನಿನ್ನ ರುದ್ರ ಶಕ್ತಿ ನಿನ್ನಲ್ಲೇ ಉಂಟು. ಏಕೆ ಹೀಗಾದೆ ?"

ಹಾ, ಅದು ಯಾರ ಧ್ವನಿ ? ಓ ! ಅದು ಕಾಲಿಮಾ ಧ್ವನಿಯೇ ಹೌದು. ಅದೆಷ್ಟು ರುದ್ರ ಗಂಭೀರ ! ಅದೆಷ್ಟು ಧೈರ್ಯ ಪೂರ್ಣ ? ಅದೆಷ್ಟು ಭಾವಪೂರ್ಣ ? ಓ....ಕಾಲಿಮಾ, ನೀನೆಲ್ಲಿರುವೆ ? ಎದುರಿಗೇಕೆ ಬರಬಾರದು ? ಎಲ್ಲೋ ಮರೆಯಲ್ಲಿ ನಿಂತು ನುಡಿಯುವುದೇಕೆ ? ನಿನಗೂ ಭಯವೇ ?

"ಮೇಜರ್ ಸಾಬ್ !"

ದನಿ ಕರ್ಣಪಟಲಗಳಿಗೆ ತಾಗಿದರೂ ರುದ್ರ ಕಣ್ದೆರೆಯಲಿಲ್ಲ. ತಣ್ಣನೆಯ ಕೈಗಳು ಹಣೆಯನ್ನೇರುತ್ತಲೂ ಮೆಲ್ಲನೆ ಕಣ್ಣುಗಳು

ತೆರೆದುವು. ಹುಸೇನ್ ಯಾವಾಗ ಹೊರಹೋದನೋ ಯಾವಾಗ ಒಳ ಬಂದನೋ ಅಥವಾ ಇಲ್ಲೇ ಇದ್ದನೋ ಅದು ತಿಳಿಯದು. ರುದ್ರ ನಿರಿನಿರಿ ನಿಟ್ಟಿಸಿದ. ಕಣ್ಣುಗಳಲ್ಲಿ ನೆತ್ತರು ಚಿಮ್ಮುವಂತೆ ರಂಗೊರೆದಿತ್ತು. ನೇರವಾಗಿ ಕಾಲು ಚಾಚಿದ್ದ ರುದ್ರ ಎದ್ದು ಕುಳಿತ. ಮುಖದ ಮೇಲೆ ಮೂರು ದಿನಗಳ ಬೆಳೆ ಹುಲುಸಾಗಿ ಬೆಳೆದಿತ್ತು. ಎದ್ದು ಶೌಚದ ಮನೆಗೆ ಹೋಗುತ್ತಲೂ ಹುಸೇನ್ ತೋಳಾಶ್ರಯ ನೀಡಿದ. ಹುಸೇನ್ ತಂಬಿಗೆಯಿಂದ ನೀರು ತೆಗೆದು ಸುರಿಯುವಾಗ ಮಗುವಿನಂತೆ ಅಲ್ಲಿ ಬೊಗಸೆಯೊಡ್ಡಿ ಮುಖ ಮಜ್ಜನ ಮಾಡಿದ ರುದ್ರ.

ಬಾಬೂರಾವ್ ಬ್ರೆಡ್ಡು ಆಮ್ಲೆಟ್ಟುಗಳನ್ನು ತಂದು ಮುಂದಿಟ್ಟ. ಟವಲ್ಲಿನಿಂದ ಮುಖವನ್ನು ಒರೆಸಿಕೊಳ್ಳುತಿದ್ದ ರುದ್ರ ಮರು ನುಡಿಯದಿದ್ದರೂ ಹುಸೇನ್ ಅಲ್ಲಿಂದ ಕದಲಲಿಲ್ಲ. ಅವನ ಕಡ್ಡಿ ದೇಹ ಚಲಿಸದೇ ನಿಂತುದನ್ನು ನೋಡಿ "ಕುಳಿತುಕೊಳ್ಳಪ್ಪಾ, ಡಾಕ್ಟರ್ !" ಎಂದ ರುದ್ರ.

ಹೊರಗಡೆ ಒಮ್ಮಿಂದೊಮ್ಮೆಲೇ ದೋಲಿ ದೊಡ್ಡ ದನಿಯಲ್ಲಿ ಬೊಗಳಿತು.

ಬೌವೌ, ವೌವೌ ವ್ ವ್ ವ್ ವ್ !

ಮೇಜರ್ ರುದ್ರ ತುತ್ತು ತುತ್ತಿಗೂ ನೀರು ಕುಡಿಯುತ್ತಾ ತುತ್ತು ನುಂಗಿದ. ನಾಯಿಯ ಬೊಗಳಿಕೆ ಯಾರೋ ಬಂದಿದ್ದಾರೆಂಬುದನ್ನು ಸೂಚಿಸುತಿತ್ತು. ಬಹುಶಃ ದವಾಖಾನೆಗೆ ಬಂದವರೇ ಇರಬೇಕೆಂಬುದು ಮನದಟ್ಟಾದರೂ ಹುಸೇನ್ ಕದಲಲಿಲ್ಲ. ಅವನು ನೋಡಿದ ನೋಟ ಕೂಗಿ ಹೇಳಿತು......ನೀನೊಂದಿಷ್ಟು ಚೈತನ್ಯ ಪಡೆದುಕೊಂಡಿದ್ದರೆ ನನಗೆ ವ್ಯಥೆ ಇರಲಿಲ್ಲ. ನನ್ನ ಕೆಲಸವನ್ನು ನಿರ್ಮಲವಾಗಿ ಮಾಡಿಕೊಳ್ಳಬಹುದಾಗಿತ್ತು.

ದವಾಖಾನೆಯಿಂದ ಕರೆ ಬಂತು.

ಕರೆಗೆ ಓಗೊಟ್ಟ ಹುಸೇನ್ ಒಂದು ಕ್ಷಣ ನಿಂತು ನುಡಿದ. "ಕಳೆದ ದಿನಗಳನ್ನು ಸ್ಮರಿಸಲೇಬೇಡ ರುದ್ರ. ಭವಿಷ್ಯವನ್ನು ಮಾತ್ರ ಕುರಿತು ಚಿಂತಿಸು."

ರುದ್ರನ ದೀನ ನೋಟ ಅವನನ್ನೇ ನಿಟ್ಟಿಸಿತು. ತುಟಿ ಬಿರಿಯಲಿಲ್ಲ.

ಡಾ|| ಹುಸೇನ್ ಸಿಗರೇಟನ್ನು ನೀಡಿ ಹಿಂದೆಯೇ ಕದವನ್ನೆಳೆದುಕೊಂಡು ಹೋದ. ಬಾಗಿಲ ಸಂದಿಯಲ್ಲಿ ಅವನ ಕಡ್ಡಿದೇಹ ಕಣ್ಮರೆಯಾಗುವುದನ್ನು ಜೋಡಿ ಕಣ್ಣುಗಳೆರಡೂ ನಿಟ್ಟಿಸಿದವು. ಹೊತ್ತು ಮೆಲ್ಲನುರುಳಿತು. ಹೊತ್ತಿಸಿದ ಸಿಗರೇಟು ಬಹಳ ಮಟ್ಟಿಗೆ ಬೆರಳ ಸಂದಿಯಲ್ಲಿ ಉರಿದು ಬೂದಿಯಾಯಿತೇನೋ. ಅದರ ನೆನಪಾದೊಡನೆ ಒಂದು ದಮ್ ಎಳೆದು ಮತ್ತೆ ಸುಮ್ಮನಾದ. ಮನಸ್ಸು ಎಲ್ಲವನ್ನೂ ಹಿಂದೆ ಬಿಟ್ಟು ಅಲ್ಲಿ ಇಲ್ಲಿ ಚಕ ಚಕ ಹರಿದಾಡಿತು. ಬಾಲ್ಯ, ಕೌಮಾರ್ಯ, ಯೌವನ, ಸಂಸಾರ, ಮಕ್ಕಳು ಮರಿ ಮತ್ತು ಅಂತ್ಯ. ಹಾಳು ಮನಸ್ಸು ಅಲ್ಲೇ ನಿಲ್ಲಬೇಕೇ? ಪ್ರಯತ್ನಪೂರ್ವಕವಾಗಿ ಅದನ್ನು ಬೇರೆಡೆಗೆ ಎಳೆದರೂ ಮತ್ತೆ ಅದು ನಿಲ್ಲುತಿದ್ದುದು ಅಲ್ಲೇ.

ಉಟ್ಟ ಬಟ್ಟೆ ತೊಟ್ಟ ಅಂಗಿ ಕೊಳಕಾಗಿತ್ತು. ಅಜಿಲ ಒಗೆದ ಬಟ್ಟೆಗಳನ್ನು ಮುಂದಿಟ್ಟರೂ ಸುಮ್ಮನಾಗಿದ್ದ. ಒಮ್ಮೆ ಅಸಹ್ಯವಾಗಿದ್ದರೂ ಇನ್ನೊಮ್ಮೆ ಯಾವುದೂ ಬೇಡವೆನಿಸುತಿತ್ತು. ಸಿಗರೇಟಿನ ಕೊನೆಯ ತುಣುಕನ್ನು ಎಸೆದು ಎದೆಯ ಮೇಲೆ ಕೈಕಟ್ಟಿ ಮಾಡಿನ ನೇರಕ್ಕೆ ದೃಷ್ಟಿ ಹರಿಸಿದ. ಕಲ್ಲು ಹೊತ್ತಂತೆ ಹೃದಯ ಭಾರವಾಗಿತ್ತು. ಸುತ್ತುಮುತ್ತಿನ ಠಾಣ್ಯದವರೆಲ್ಲಾ ವಿಜಯೋತ್ಸಾಹ ಆಚರಿಸುತ್ತಿದ್ದಾರೆ. ಗ್ಹೈಲ್ ಗ್ಹೈಲ್ ಎಂಬ ಮಧುರ ರವ ಕೇಳಿಸುತ್ತಿದೆ. ಅದೇನು ಕುಣಿಯುತ್ತಿದ್ದಾರೋ? ಅಥವಾ ಹಳ್ಳಿ ಮಂದಿಯ ಗೆಜ್ಜೆ ಪಾಡಗವೋ? ಒಮ್ಮೆ ಎದ್ದು ಕಿಟಕಿಯಲ್ಲಿ ನೋಡೋಣವೇ? ಎನ್ನಿಸಿತು. ಮರುಕ್ಷಣದಲ್ಲಿ ಎಲ್ಲಿಲ್ಲದ ಬೇಸರ ಕಿನಿಸಿಗೆ.

ಹೊತ್ತು ಉರುಳಿತು. ಡಾ|| ಹುಸೇನ್ ದವಾಖಾನೆಯನ್ನು ಮುಚ್ಚಿ ಒಳಬಂದ.

ಂ　ಂ　ಂ　ಂ

ಸಾಯಂ ಸಮಯ. ತಂಗಾಳಿ ತಣ್ಣಗೆ ತೀಡುತ್ತಿದೆ.

ಡಾ|| ಹುಸೇನ್ ದವಾಖಾನೆಯನ್ನು ಮುಚ್ಚಿ ಇಲ್ಲೇ ಬಂದು ಕೂಡುವ. ಒಮ್ಮೆ ಅವನ ಸಾಮೀಪ್ಯ ಬೇಸರವೆನಿಸಿದರೂ ಇನ್ನೊಮ್ಮೆ ಬೇಕೆನಿಸುತಿತ್ತು. ಡಾ|| ಹುಸೇನ್ ಅಂದಿನಿಂದ ವರ್ತಮಾನ ಪತ್ರಿಕೆ

ಗಳಿಗೂ ತಡೆಹಾಕಿದ್ದ ನಿನ್ನೆ ಒಳಪುಟಕ್ಕೆ ಮಾತ್ರ ಪರವಾನಗಿ ದೊರೆಕಿತ್ತು. ಇಂದು ಪತ್ರಿಕೆಯು ಮುಖಪುಟದೊಂದಿಗೆ ಆಗಮಿಸಿತು. ಹರಿದ್ರಾಪುರದ ಗೂಂಡಾಗಿರಿ ಪೋಲೀಸರ ಕಣ್ಣಿಗೆ ಮಣ್ಣೆರಚಿ ಅಲ್ಲಲ್ಲಿ ನಡೆದೇ ಇತ್ತು. ಗೂಂಡಾಗಿರಿಗೆ ಬಲಿಯಾದವರೆಲ್ಲಾ ಬಹು ಮಂದಿ ನಿರಪರಾಧಿಗಳು.

ಶಿವ ಶಿವಾ ಎಂದೊರಲಿತು ಎದೆಯ ಹಕ್ಕಿ.

ರುದ್ರ ಒಂದು ಗಳಿಗೆ ಕಣ್ಣು ಮುಚ್ಚಿ ಕುಳಿತ. ಭಾರತ ಸಾಮ್ರಾಜ್ಯ ದಲ್ಲಿ, ವೇದಭೂಮಿಯ ಮಡಿಲಲ್ಲಿ ಅಂದಿನಿಂದ ಇಂದಿನವರೆಗೆ ನಡೆದ ಗೂಂಡಾ ಗಿರಿ ಮನಃಪಟಲದ ಮೇಲೆ ಸುಳಿಸುಳಿದಳಿಯಿತು. ಗೂಂಡಾಗಿರಿಗೆ ಜೀವ ತೆತ್ತವರ–ಮನನೊಂದವರ ಬಿಸುಸುಯ್ಲು ಸುಡುಬಿಸಿಲ ಬೀಸುಗಾಳಿಗೆ ಸಮನಾದರೆ, ಹಗಲಿರುಳು ಮಿಡಿದವರ ಕಂಬನಿ ಸಾಗರೋಪಮವಾಗಿ ತೋರಿತು. ತನುಮನಗಳು ಕಸಿವಿಸಿಗೊಂಡವು.

ಆಪಾದಮಸ್ತಕವೂ ಮೈ ನವಿರೆದ್ದಿತು. ರುದ್ರ ಮರವಟ್ಟು ಕುಳಿತ. ಗೂಂಡಾಗಿರಿಯ ಎಳೆ ಎಳೆಯನ್ನೂ ಮುಟ್ಟಿತು ಮನಸ್ಸು.

ಪ್ರಪಂಚದ ಯಾವ ಭಾಗದಲ್ಲಿ ಗೂಂಡಾ ಇಜಂ ಇಲ್ಲ ?

ಗೂಂಡಾ ಅಪ್ರತಿಮ ಸಾಹಸಿಯೇ ? ಗೂಂಡಾ ಇಜಂ–ಗೆ ಸೋಲೇ ಇಲ್ಲವೇ ? ಹಾ ! ಇಲ್ಲವೇ ಇಲ್ಲ. ಗೂಂಡಾ ಸಮಸ್ತ ಇಜಂ-ಗಳ ಮಹಾ ವೈರಿ. ಅವನಿಗೆ ಎಂದೆಂದೂ ಸೋಲಿಲ್ಲವೇನೋ ಎಂಬಷ್ಟು ಪ್ರಬಲ. ಅಸಾಮಾನ್ಯ ಸಮರ್ಥ. ಈತನಿಗೆ ಜಾತಿ–ಮತ–ಭಾಷೆ– ಸ್ಥಳಗಳ ಪರಿ ಭೇದವಿಲ್ಲ. ಎಲ್ಲೆಂದರೆ ಅಲ್ಲಿ, ಯಾವಾಗೆಂದರೆ ಆವಾಗ ಪುಟಿದೇಳುವ ಅಯೋನಿಜ. ಎಲ್ಲಿ ಪುಟಿದೇಳುವನೋ ಅಲ್ಲಿ ಸರ್ವನಾಶಗೈಯುವುದೇ ಉದ್ದಾಮ ಗುರಿ. ಕತ್ತಿಯಾಗಿ, ಕಲ್ಲಾಗಿ, ದೊಣ್ಣೆಯಾಗಿ, ಕೋವಿಯಾಗಿ, ಬೆಂಕಿಯಾಗಿ ನಾನಾ ರೂಪಗಳಲ್ಲಿ ಭುಗಿಲೇಳಬಲ್ಲ ಮಾನವನಲ್ಲಿ ಪಶುತ್ವವನ್ನು ತುಂಬಿ, ಶಾಂತಿಯನ್ನು ಬಡಿದೋಡಿಸಬಲ್ಲ...ಕೀರ್ತಿಯನ್ನು ಕದಲಿಸಬಲ್ಲ... ಅಪಮೃತ್ಯುವನ್ನು ಬರಮಾಡಿಕೊಳ್ಳಬಲ್ಲ.

ಪುರಾಣಕಾಲದ ಮಾಯಾಸುರನನ್ನೂ ಮೀರಿಸುವ ಮಹಾ ಮಾಯಾ ಸುರ....

ಗೂಂಡಾನಿಗೆ ಗುರುವೂ ಇಲ್ಲ ; ಗುರಿಯೂ ಇಲ್ಲ. ಗಾಳಿ ಬೀಸಿದ ಕಡೆ

ತೀವ್ರವಾಗಿ ಹರಡುವ ಕಿಚ್ಚಿನಂತೆ ಹರಡುತ್ತದೆ ಈತನ ಮಹಾ ಮಾಯಾ ಪ್ರಭಾವ. ತನ್ನ ಮೂಲವನ್ನು ಯಾರೂ ಕಂಡುಕೊಳ್ಳದಿರುವಂತೆ ಎಚ್ಚರ ವಹಿಸುವುದಷ್ಟೇ ಅಲ್ಲದೇ ಇತರರೆಡೆಗೆ ಬೆರಳು ತೋರಿ ನುಣ್ಣಗೆ ನುಣುಚಿ ಕೊಳ್ಳಬಲ್ಲ ಅಪ್ರತಿಮ ಸಾಹಸಿ.

ಚಾಣಾಕ್ಷನಿಗೆ ಸೋಲುಂಟೇ ?

ಇಲ್ಲವೇ ಇಲ್ಲ ; ಈತ ಎಲ್ಲಿಲ್ಲ ? ಯಾರಲ್ಲಿಲ್ಲ ? ಸಮಯ–ಸಂದರ್ಭ–ಸನ್ನಿವೇಶಗಳ ಒತ್ತಡದಿಂದ ಸಿಡಿದೇಳುವ ಇವನು ಶಿಕ್ಷೆಗೆ ನಿಲುಕುವನೇ ? ಬಿರುಗಾಳಿಯಾಗಿ ಬೀಸಿ ಅಣೋರಣೀಯವಾಗಿ ಕುಣಿದು ಮಹತೋಮಹೀಯ ನಾಗಿ ಬೆಳೆದು ಸೀಮೆಯಿಂದ ಸೀಮೆಗೆ ಜಿಗಿದು ಸೀಮೋಲ್ಲಂಘನ ಮಾಡುವಾಗ ಕೆಚ್ಚೆದೆಯ ವೀರನೂ, ಸಾಧು–ಸಂತರ ಪಂಥದವನೂ, ದೇಶಾಗ್ರಣಿಯೂ, ಪೋಲೀಸ್ ಮಹಾಶಯನೂ ಪೆಚ್ಚಾಗುತ್ತಾನೆಯೇ ಹೊರತು ಗೂಂಡಾ ಪೆಚ್ಚಾಗಲಾರ.

ಗೂಂಡಾ ಇಂದಿನವನೇ ?

ಅನಾದಿ ಕಾಲದಿಂದಲೂ ಈತ ಸರ್ವರಿಗೂ ಸುಪರಿಚಿತ. ಕೌರವ ಪಾಂಡವರಲ್ಲಿ ದಾಯಾದಿ ಮತ್ಸರವನ್ನು ಬೀರಿದವನೀತ. ಯಾದವರ ಕಲ ಹಕ್ಕೆ ಬೀಜ ಬಿತ್ತಿದವನೀತ. ರಾಮ ರಾವಣರ ಮಧ್ಯೆ ಸೀತೆಯಾಗಿ ಮೆರೆದು ಲಂಕಾಪಟ್ಟಣಕ್ಕೆ ಕಿಚ್ಚನ್ನು ಹೊತ್ತಿಸಿದವನೂ ಈತನೇ.

ಗೂಂಡಾ ಅಲ್ಪನೇ ?

ಲಿಂಕನ್, ಗಾಂಧಿ ಹಂತಕರಿಗೆ ಪ್ರೋತ್ಸಾಹ ಈತನದು. ರಾಜ್ಯ ರಾಜ್ಯಗಳ ಮಧ್ಯೆ ಜಾತಿ ಜಾತಿಗಳ ಮಧ್ಯೆ, ಮೇಲು ಕೀಳುಗಳ ಮಧ್ಯೆ, ಗಂಡ ಹೆಂಡಿರ ಮಧ್ಯೆ, ತಂದೆ ಮಕ್ಕಳ ಮಧ್ಯೆ ಮಹಾಮಾರಿಯಾಗಿ ನಿಲ್ಲ ಬಲ್ಲವನೂ ಈತನೆ. ಜ್ಞಾನಾ ಜ್ಞಾನಿಯನ್ನೂ, ಸಿದ್ಧಾಸಿದ್ಧರನ್ನೂ, ಬುದ್ಧಾಬುದ್ಧರನ್ನೂ ಲೆಕ್ಕಿಸದೆ ಗೊಂದಲವೆಬ್ಬಿಸುವುದು ಈತನ ಜಾಯ ಮಾನ. ಗೋಚರನಾದರೂ ಅಗೋಚರನಾಗಿ ಸಮಯ ಸಾಧಿಸುವುದರಲ್ಲಿ ಇವನು ಯೋಚನಾತೀತ-ಕಾಲಾತೀತ. ಸತ್ಯವನ್ನು ಕೆಡಗಿ, ಧರ್ಮವನ್ನು ಕೊಂದು ಶಾಂತಿಯನ್ನು ನಾಶಗೈದು ಶಿಸ್ತಿಗೆ ಎಳ್ಳುನೀರು ಬಿಡುವ ಈತ ಸಮನ್ವಯಾಚಾರ್ಯ !

... ಅಂದ ಮೇಲೆ ಯಾರ ಪಾಡೇನು ? ಮೇಜರ್ ರುದ್ರ ಸಗ್ಗದಿಂದ ಇಳಿದು ಬರಲಿಲ್ಲವಷ್ಟೆ ? ಆದರೂ...

ಮನಸ್ಸು ಓಡುವಷ್ಟು ದೂರ ಓಡಿ, ಬಳಲಿ ಬೆಂಡಾಗಿ, ಸೋತು ಹಿಪ್ಪೆಯಾಗಿ ಹಿಂತಿರುಗಿದಾಗ ಡಾ॥ ಹುಸೇನನ ಮಾತುಕತೆ ಕರ್ಣ ಪಟಲಗಳ ಮೇಲೆ ಪ್ರತಿಧ್ವನಿಸಿತು. ಅವನು ದವಾಖಾನೆಯಲ್ಲಿ ಯಾರೊಂದಿಗೋ ಮಾತುಕತೆ ನಡೆಸಿದ್ದ. ಅವನಿಗೇನು ? ದಿನಾ ಸಾಯುವವರನ್ನು ನೋಡಿ ನೋಡಿ ಜೀವ ಕಲ್ಲಾಗಿದೆ. ಮನೆ ತುಂಬ ಮಕ್ಕಳನ್ನು ಇಟ್ಟುಕೊಂಡಿರುವ ಅವನಿಗೆ ಇತರರದು ಸರ್ವೇಸಾಮಾನ್ಯ, ಮರಜೀವಿ !

ಧಿಗ್, ಧಿಗ್, ಧಿಗ್, ಧಿಗ್.

ಧಿಗ್, ಧಿಗ್, ಧಿಗ್, ಧಿಗ್.

ಹಲವಾರು ಮಂದಿ ಒಂದೇ ಸಮನೆ ಬಿರುಸಾಗಿ ನಡೆದು ಬಂದ ಸದ್ದು ಕಿವಿಯ ಮೇಲೆ ಬಿತ್ತು. ಕಣ್ಣುಗಳು ಅನಿರೀಕ್ಷಿತವಾಗಿ ಗಡಿಯಾರದ ಮೇಲೆ ಹೊರಳಿದುವು. ಮುಳ್ಳು ಆರರ ಅಂಚನ್ನು ದಾಟಿಯಾಗಿತ್ತು. ಈಗ ಯಾರು ಬಂದಿರಬಹುದು ಎಂಬ ಪ್ರಶ್ನೆ ಎದ್ದರೂ ಎದ್ದು ಹೋಗಿ ನೋಡುವ ಮನಸ್ಸಾಗಲಿಲ್ಲ. ದಿಟ್ಟಿ ಪುನಃ ಪತ್ರಿಕೆಯಲ್ಲಿ ನೆಟ್ಟಿತು. ನಾನಾ ವಿಷಯಗಳೊಂದಿಗೆ ಯುದ್ಧರಂಗದ ವಿಷಯವನ್ನೂ ಬಣ್ಣಿಸಿತ್ತು. ಅಯೂಬ್ ದೆಹಲಿಯ ಗದ್ದುಗೆಯನ್ನು ಏರುವುದಾಗಿ ಅಬ್ಬರಿಸಿ ಮತ್ತೆ ಯುದ್ಧದ ಸಂಚು ಹೂಡಿದುದನ್ನು ಮುಖ ಪುಟದಲ್ಲಿ ದಪ್ಪ ಅಕ್ಷರಗಳಲ್ಲಿ ಪ್ರಕಟಿಸಿತ್ತು. ಈಶಾನ್ಯ ಗಡಿಯಲ್ಲಿ ಪಾಕೀಸ್ತಾನಿಯರ ಸೈನ್ಯ ಜಮಾವಣೆಯಾಗುತ್ತಿರುವುದಾಗಿಯೂ ಚೀನೀ ದೈತ್ಯರಿಂದ ಶಸ್ತ್ರಾಸ್ತ್ರಗಳ ಸರಬರಾಜು ನಡೆದಿದೆಯೆಂದೂ ಕಳಕಳಿಯಿಂದ ಬಿತ್ತರಿಸಿತು. ವಿಷಯ ಕಣ್ಣು ಕೆನ್ನೆ ಕಿವಿಗಳಲ್ಲಿ ರಂಗು ಮೂಡಿಸಿತು.

"ಮೇಜರ್ ಸಾಬ್ !" ಡಾ॥ ಹುಸೇನ್ ಅಲ್ಲಿಂದಲೇ ಕರೆದ.

"......"

ಬಾಗಿಲ ಕಡೆ ನೋಟ ಹೊರಳಿತು. ಓಗೊಡಲು ಮನಸ್ಸಾಗಲಿಲ್ಲ.

"ಅದೇ ದನಿ ಪುನಃ ಮೊಳಗಿತು "ಮೇಜರ್ ಸಾಬ್ !"

"ಡಾಕ್ಟರ್...!" ಎನ್ನುವುದರೊಳಗಾಗಿ ಡಾ॥ ಹುಸೇನ್ ಬಾಗಿಲಲ್ಲಿ ಕಾಣಿಸಿಕೊಂಡ.

"ಏನಪ್ಪಾ ?"

"ಎದ್ದು ಬಾ."

ಮೇಜರ್ ರುದ್ರ ಮರುಮಾತಾಡದೆ ಎದ್ದು ಹೋದ. ದವಾಖಾನೆಯಲ್ಲಿ ಹತ್ತಿಪ್ಪತ್ತು ಮಂದಿ ಕಲೆತಿದ್ದಾರೆ. ಎಲ್ಲರ ಮೈಯುಕ್ತ್ಯಾ ನೆತ್ತರಿನಿಂದ ತೊಯ್ದಿದೆ. ಎಲ್ಲರಿಗೂ ಅಲ್ಲಲ್ಲಿ ಗುಂಡುಗಳು ತಾಗಿವೆ.

"ಇದೇನು ? ಏನಾಯಿತು ?"

"ಗಡಿ ಕಾಯುತ್ತಿದ್ದವರ ಮೇಲೆ ಹಿಂದಿನಿಂದ ತಿಳಿಯದಂತೆ ಪಾಕಿಸ್ತಾನೀಯರು ಗುಂಡು ಹಾರಿಸಿದರು. ಕೆಲವರು ಸ್ಥಳದಲ್ಲೇ ಪ್ರಾಣ ನೀಗಿದರು. ಹಿಂದಿನ ಟ್ರಕ್ಕಿನಲ್ಲಿ ಇನ್ನೂ ಕೆಲವು ಗಾಯಾಳುಗಳು ಬರುತಿದ್ದಾರೆ. ಹೆಚ್ಚಿನ ಗಾಯವಾದವರನ್ನು ಪಠಾನ್‌ಕೋಟ್‌ಗೆ ಹಾಗಿಂದ್ಹಾಗೇ ಸಾಗಿಸಲಾಗಿದೆ."

ಮೇಜರ್ ರುದ್ರನಿಗೆ ಒಮ್ಮಿಂದೊಮ್ಮೆಲೇ ಮೈಮೇಲೆ ಬಿಸಿನೀರು ಎರಚಿದಂತಾಯಿತು.

ಡಾ॥ ಹುಸೇನ್ ಗಂಭೀರ ದನಿಯಲ್ಲಿ ಅಂದ "ರುದ್ರ ಮಹಾಶಯಾ ! ನಿನಗಿನ್ನು ವಿರಾಮವಿಲ್ಲ."

ಇದುವರೆವಿಗೆ ತಣ್ಣಗಿದ್ದ ಠಾಣ್ಯ ಈಗ ಸದ್ದು ಗದ್ದಲಗಳಿಂದ ಕೂಡಿತು. ಕೆಲಸಕ್ಕೆ ಕೈ ಹಚ್ಚುವುದರೊಳಗಾಗಿ ಇನ್ನೊಂದು ಟ್ರಕ್ಕೂ ಆಗಮಿಸಿತು. ಗಾಯಾಳುಗಳ ಚೀರಾಟ ನರಳಾಟ ಮೈ ಮನಸ್ಸುಗಳನ್ನು ಜಡವಾಗಿ ಕೂಡಗೊಡಿಸಲಿಲ್ಲ. ಒಡನೆ ಡಾ॥ ಹುಸೇನ್– "ನಮಗೆ ಈಗಿರುವ ಹ್ಯಾಂಡ್ಸ್ ಏನೇನೂ ಸಾಲದು. ಬಾ, ನೀನೂ ಒಂದಿಷ್ಟು ಕೂಡು."

ರುದ್ರ ಸಿಂಕಿನ ಬಳಿ ಹೋಗಿ ಕೈ ತೊಳೆಯ ಹತ್ತಿದ.

ಕೆಲವರಿಗೆ ಗುಂಡು ತಾಗಿದ್ದರೆ ಕೆಲವರಿಗೆ ಎದ್ದುಬಿದ್ದು ಬರುವಾಗ ಮುಳ್ಳು ಚುಚ್ಚಿ ಟೊಂಗೆ ತಾಗಿ ಮೈ ಕೈ ಗಾಯಗಳಾಗಿದ್ದುವು. ಹಲವಾರು ಡಾಕ್ಟರುಗಳು ಕರ್ತವ್ಯತತ್ಪರರಾಗುತಿದ್ದಂತೆ ರುದ್ರನ

ಮೈಯ್ಯಲ್ಲೂ ಶಕ್ತಿಯ ಸಂಚಾರವಾಯಿತು, ಎಲ್ಲರಿಗೂ ಚಿಕಿತ್ಸೆ, ಊಟ ತಿಂಡಿಯಷ್ಟೇ ಅಲ್ಲ. ಹಗಲಿರುಳೂ ನೀಡಬೇಕಾದ ನರ್ಸಿಂಗ್ ಇತ್ತು. ಕೆಲಸ ಬಿರುಸಿನಿಂದ ಸಾಗಿತು. ಹಲವಾರು ಕೈಗಳು ಒಟ್ಟುಗೂಡಿ ಕೆಲಸ ಮಾಡುತಿದ್ದಂತೆ ಪಾಕೀಸ್ತಾನಿಗಳ ತಂತ್ರ ಕುತಂತ್ರ ಕುಟಿಲ ನೀತಿಗಳು ಎಲ್ಲರ ಬಾಯಿಯಲ್ಲೂ ಚರ್ವಿತ ಚರ್ವಣವಾದುವು. ಕೈ ಚಟುವಟಿಕೆಯಾ ದೊಡನೆ ಮನಸ್ಸೂ ಪುಟಿಪುಟಿಯ ಹತ್ತಿತು. ತನ್ನ ಮನೋವೇದನೆಯನ್ನು ಬದಿಗೊತ್ತಿ ರುದ್ರ ಕರ್ತವ್ಯಕ್ಕೆ ಶರಣಾದ.

ಕೈ ಬಿಡುವು ದೊರೆಯುವ ಹೊತ್ತಿಗೆ ಹೊತ್ತು ಮಧ್ಯರಾತ್ರಿಗೆ ಮೀರಿತ್ತು. ಇಂದು ಎಂದಿಗಿಂತಲೂ ಮನಸ್ಸು ಸ್ಥಿಮಿತಕ್ಕೆ ಬಂದಂತೆ ಭಾಸವಾಯಿತು. ಹುಸೇನನಿಗೂ ಎದೆ ಹಗುರವಾಯಿತು. ಒಬ್ಬರಿ ಗೊಬ್ಬರು 'ಗುಡ್‌ನೈಟ್' ಹೇಳಿ ತಮ್ಮ ತಮ್ಮ ಕೊಠಡಿಗೆ ತೆರಳಿದರು. ರುದ್ರ ಸೆಜ್ಜೆಯನ್ನು ಸೇರುತ್ತಲೂ ಒಡೆಯನ ಮಂಚದ ಬಳಿ ಬಾಲ ಮುದುಡಿ ಮಲಗಿಕೊಂಡಿತು ದೋಲಿ. ಬಾಗಿಲ ಬಳಿ ಅಜಿಲ ಹಾಸಿಗೆ ಹಾಸಿಕೊಂಡ.

ಆಗಿಂದಾಗ್ಗೆ ಗಾಯಾಳುಗಳ ನರಳುವಿಕೆ ಚೀರಾಟಗಳು ಕಿವಿಯ ಮೇಲೆ ಬೀಳುತಿದ್ದುವು. ಕೇಳು ಕೇಳುತಿದ್ದಂತೆ ಒಡಲ ಸಂಕಟವೆಲ್ಲ ತನಗರಿಯದಂತೆಯೇ ಕಂಬನಿಯಾಗಿ ಹರಿಯಿತು. ಸ್ವರ್ಗಸ್ಥ ಕುಟುಂಬ ಚಿತ್ರಭಿತ್ತಿಯಲ್ಲಿ ಚಲನಚಿತ್ರದಂತೆ ತೇಲಿ ನಲಿಯಿತು. ರುದ್ರ ಹಸು ಮಗುವಿನಂತಾದ. ಗೋಡೆಯ ಮೇಲಿನ ಗಡಿಯಾರ ಏರುಪೇರಿಲ್ಲದೆ ಟಿಕ್ ಟಾಕ್ ಸದ್ದುಗೈಯ್ಯುತಿತ್ತು.

ಟಿಣ್, ಟಿಣ್, ಟಿಣ್, ಟಿಣ್ !

ಹಾ ! ಎಲ್ಲಿದ್ದಿ ಅಮೃತ್ ?

o o o o o

ಢಂ ! ಢಮಾರ್ ! ಢಂ ! ಢಮಾರ್ !

ಯುದ್ಧ ಭೂಮಿಯಲ್ಲಿ ವೀರಾವೇಷದಿಂದ ಹೋರಾಟ ನಡೆಯು ತಿತ್ತು. ಟ್ಯಾಂಕುಗಳೂ ಟ್ರಕ್ಕುಗಳೂ ಹಳ್ಳ ತಿಟ್ಟುಗಳನ್ನೂ ಲೆಕ್ಕಿಸದೆ ಮುನ್ನುಗ್ಗುತ್ತಿವೆ. ಮುಂದಾಗಿ ಹೋದ ಅನುಭವೀ ದುರ್ಬೀನು

ಧಾರಿಗಳು ಶತ್ರುಗಳ ಚಟುವಟಿಕೆಗಳನ್ನು ಪತ್ತೆಹಚ್ಚಿ ತಮ್ಮವರಿಗೆ ವಯರ್‌ಲೆಸ್ ಸಂದೇಶ ಕಳುಹಿಸುತಿದ್ದಾರೆ. ಭಾರತ ಪಡೆಗಳು ಒಂದೇ ಸಮನೆ ಮುನ್ನುಗ್ಗುತ್ತಿವೆ. ಕೂಗಾಟ ಚೀರಾಟ ಆರ್ಭಟಗಳೊಂದಿಗೆ ಗುಂಡಿನ ಮೊರೆತ ಕಿವಿಯನ್ನು ಕಿವುಡಾಗಿಸುತ್ತಿವೆ. ಇಂದು ಮೇಜರ್ ರುದ್ರ ದಂಡಿಗೆ ದಳಪತಿ.

ರುದ್ರ ರೌದ್ರಮೂರ್ತಿಯಾಗಿದ್ದ. ಕಣ್ಣುಗಳು ಕೆಂಗಣ್ಣಾಗಿವೆ. ಕೆನ್ನೆ ಕಿವಿಗಳಲ್ಲಿ ರಂಗು ದಟ್ಟೈಸಿದೆ. ಪಾಕಿಸ್ತಾನಿಗಳು ಚಕಚಕ ಹಿಮ್ಮೆಟ್ಟುತ್ತಿದ್ದಂತೆ ಬೆನ್ನುಹತ್ತಿದ ಬೇತಾಳದಂತೆ ರುದ್ರ ದಳವನ್ನು ನಡೆಸುತಿದ್ದ. ರಣರಂಗದ ವಲಯದಲ್ಲಿ ಎಲ್ಲಿ ನೋಡಿದರೂ ಧೂಳು ಹೊಗೆಗಳಿಂದ ಮುಚ್ಚಿಕೊಂಡಿದೆ. ಶತ್ರುಗಳನ್ನು ಸದೆಬಡಿದು ಶಸ್ತ್ರಾಸ್ತ್ರ ಗಳನ್ನು ವಶಪಡಿಸಿಕೊಂಡು ಸಿಕ್ಕಿದವರನ್ನು ಸೆರೆಹಿಡಿದು ವಿಜಯೋತ್ಸಾಹ ದಿಂದ ಭಾರತೀ ಪಡೆ ಹಿಂತಿರುಗುವಾಗ ತಮ್ಮ ಕಡೆಯ ಅನೇಕ ಗಾಯಾಳುಗಳನ್ನೂ ಹೊತ್ತು ತಂದರು. ಅವರಲ್ಲಿ ಮೇಜರ್ ರುದ್ರನೂ ಒಬ್ಬ.

ಡಾ|| ಹುಸೇನನ ದವಾಖಾನೆ ಹತ್ತು ಪಟ್ಟು ಚಟುವಟಿಕೆಯು ಬೀಡಾಗಿದೆ. ಆದರೆ ಡಾ|| ಹುಸೇನ್ ಮಾತ್ರ ಮೊದಲಿನಂತಿಲ್ಲ. ಒಂದು ತಿಂಗಳ ಪರ್ಯಂತ ರಜೆ ತೆಗೆದುಕೊಂಡ ಅವನು ಊರಿಗೂ ಹೋಗಿರ ಲಿಲ್ಲ. ಹೆಚ್ಚು ಹೆಚ್ಚಾಗಿ ತನ್ನ ಕೊಠಡಿಯಲ್ಲಿ ಏಕಾಂಗಿಯಾಗಿ ಕಾಲಹರಣ ಮಾಡುತಿದ್ದ. ಕೈಯಲ್ಲಿ ಕುರಾನು. ತಪ್ಪಿದರೆ ಹಾಸಿಗೆ. ಮನಸ್ಸಾದರೆ ಸಂಜೆಯ ತಂಪು ಹೊತ್ತಿನಲ್ಲಿ ವನ್ಯ ಪ್ರದೇಶಗಳ ಕಡೆ ಅಡ್ಡಾಡಿ ಬರುತಿದ್ದ. ಸೇವಕ ಅಲೀಬಾಬ ಊಟವನ್ನು ಕೊಠಡಿಗೆ ತಂದು ಮುಂದಿಟ್ಟರೂ ಎದ್ದು ತುತ್ತು ನುಂಗವಾಗ ಅದು ತಂಗಳಾಗಿರುತಿತ್ತು. ಸೂಪಿನಲ್ಲಿ ನೊಣ ಗಳು ಈಜಾಡಿರುತ್ತಿದ್ದುವು. ಆಲೀಬಾಬ ಕಾದು ಕಾದು ಹೊರ ಹೋಗಿ ರುತಿದ್ದ. ಯಾವಾಗಲೋ ಮನಸ್ಸು ಬಂದಾಗ ಒಂದಿಷ್ಟು ತಿಂದರೆ ಮುಗಿ ಯಿತು. ಮೈ ದಿನೇ ದಿನೇ ಕ್ಷೀಣಿಸುತಿತ್ತು. ಕಣ್ಣುಗಳ ಭಾವ, ದೀನ ಮುಖಮುದ್ರೆ ಅಂತಃಸ್ಥಿತಿಯನ್ನು ಸಾರಿ ಸಾರಿ ಹೇಳುತಿತ್ತು.

ಡಾ|| ಹುಸೇನ್ ಕಳೆದ ಮೂರು ದಿನಗಳಿಂದ ಎಲ್ಲರಿಗೂ ಒಂದು

ಒಗಟಾಗಿದ್ದ. ಮೈ ಚೆನ್ನಾಗಿಲ್ಲದಿರಬಹುದೇನೋ ಎಂಬ ಯೋಚನೆಯಿಂದ ಸಹ ಡಾಕ್ಟರುಗಳು ಕೇಳಿದರೂ "ಅಂತಾದ್ದೇನಿಲ್ಲ. ಬೇಸರ ಅಷ್ಟೆ" ಎಂದು ಮೊಟಕು ಉತ್ತರ ನೀಡುತಿದ್ದ.

ಮೇಜರ್ ರುದ್ರನಿಗೆ ಮೈಯರಿವು ಮೂಡಿದಾಗ ಬಾಲರವಿ ಬಾನೇರುತ್ತಿದ್ದ. ಅರುಣ ಕಿರಣಗಳು ಕಿಟಕಿಯಲ್ಲಿ ಮೈ ಚಾಚಿವೆ. ಸದ್ದು ಗದ್ದಲಗಳಿದ್ದರೂ ವಾತಾವರಣ ತಣ್ಣಗಿತ್ತು. ಕಣ್ತೆರೆದು ನಿರಿನಿರಿ ನಿಟ್ಟುಸಿದ. ಖಂಡ ಖಂಡಗಳೂ ನೋಯುತ್ತಿವೆ. ಕಾರಲೇಪನವಾದಂತೆ ಗಾಯ ಗಾಯಗಳೂ ಉರಿಯುತ್ತಿವೆ. ನೆತ್ತರು ಬಸಿದ ಮೈ ಬಳಲಿ ಬೆಂಡಾಗಿತ್ತು.

"ಡಾ...ಕ್ !"

ಕೈಯಲ್ಲಿದ್ದ ಕುರಾನನ್ನು ಬಿದಿಗಿಟ್ಟು ಹುಸೇನ್ ಎದ್ದು ಬಂದ.

"ಹೇಗಿದ್ದಿ....?"

"ಬಹಳ ಉರಿ..."

"ನಾಳೆಯಿಂದ ಕಡಿಮೆಯಾದೀತು."

"ಗಂಟಲಾರಿದೆ."

"ನೀರು ಕುಡಿಯುತ್ತೀಯೇನು ?"

"ಹೂ."

ಹುಸೇನ್ ಹೂಜಿಯಿಂದ ನೀರನ್ನು ಲೋಟಕ್ಕೆ ಬಗ್ಗಿಸಿ ಸ್ವಲ್ಪ ಸ್ವಲ್ಪವಾಗಿ ಕುಡಿಸಿದ.

"ಡಾಕ್ಟರ್."

"ಏನಪ್ಪಾ ?"

"ನಿನ್ನ ಮುಖವೇಕೆ ಬಾಡಿದೆ ? ರಾತ್ರಿ ನಿದ್ದೆ ಮಾಡಲಿಲ್ಲವೇ ?"

"ಇಲ್ಲ, ಸರಿಯಾಗಿ ಬರಲಿಲ್ಲ."

"ಇತರರನ್ನು ನೋಡುವುದರಲ್ಲಿ ನಿನ್ನನ್ನು ನೀನು ಅಲಕ್ಷ್ಯ ಮಾಡಬೇಡಪ್ಪಾ."

"........"

"ನೋವು..." ನರಳಿದ ರುದ್ರ.

"ಯೋಚಿಸಬೇಡ. ಪ್ರಾಣಾಪಾಯವಿಲ್ಲ. ಅಂಗಾಂಗಗಳಿಗೂ ಊನವಿಲ್ಲ."

"ಈಗಲೂ ಸಾಯಲಿಲ್ಲವಲ್ಲಾ ಎಂಬುದೊಂದೇ ಯೋಚನೆ."

"ಸಾವು ಬರದೆ ಯಾರೂ ಸಾಯುವುದಿಲ್ಲ ಬಿಡು." ದನಿ ಭಾರವಾಗಿತ್ತು.

ರುದ್ರ ಏನೋ ಹೇಳಬೇಕೆಂದು ಬಯಸಿದರೂ ಹೇಳಲಾಗದೆ ಕಣ್ಣುಗಳನ್ನು ಅರೆಮುಚ್ಚಿದ. ಶಕ್ತಿಯುಡಗಿದ ಮೈ ಬಹಳವಾಗಿ ಬಳಲಿ ಬೆಂಡಾಗಿತ್ತು. ಡಾ|| ಹುಸೇನ್ ನಾಡಿ ಹಿಡಿದು ಪರೀಕ್ಷಿಸಿದನಂತರ ಕೇಳಿದ "ಏನಾದರೂ ಕುಡಿಯುತ್ತೀಯೇನಪ್ಪಾ ?"

"ಬಾಯೊಣಗಿದೆ. ಸ್ವಲ್ಪ ನೀರು ಬೇಕು." ಒಣಗಿದ ತುಟಿಯನ್ನು ನಾಲಿಗೆಯಿಂದ ಸವರಿಕೊಳ್ಳುತ್ತಾ ನುಡಿದ ರುದ್ರ. ಹುಸೇನ್ ಒಂದು ಗುಟುಕು ನೀರನ್ನು ತೆರೆದ ಬಾಯಿಗೆ ನಿಧಾನವಾಗಿ ಸುರಿದ. ನೀರನ್ನು ನುಂಗಿ ರುದ್ರ ಕೇಳಿದ "ನಿನ್ನೆ ಮೊನ್ನೆಯ ಸುದ್ದಿಯೇನು ? ಪಾಕೀಸ್ತಾನಿಗಳು ಹಿಮ್ಮೆಟ್ಟಿದ್ದಾರೆಯೆ ? ನಮ್ಮ ಕಡೆಗೆ ಎಷ್ಟು ಟ್ಯಾಂಕುಗಳು ದೊರೆತಿವೆ ?"

ಅವನ ಬಳಲಿದ ಮುಖಮುದ್ರೆಯಲ್ಲೂ ಕಣ್ಣುಗಳು ಮಿನುಗಿದುವು.

"ನೀನೀಗ ಅದನ್ನೆಲ್ಲಾ ಹಚ್ಚಿಕೊಳ್ಳಬೇಡಪ್ಪಾ, ಸುಖವಾಗಿ ನಿದ್ದೆ ಮಾಡು."

"ಅಯ್ಯೋ, ಅದನ್ನು ತಿಳಿಯದ ಹೊರತು ನಿದ್ದೆ ಬರುವಂತಿಲ್ಲ."

ಈಗ ನಿನ್ನ ಹೃದಯ ದಣಿಯಬಾರದು. ಮನಸ್ಸು ಉದ್ರೇಕಗೊಳ್ಳಬಾರದು."

"ಅದರಿಂದ ನನಗೇನಾದರೂ ಬಾಧಕವಿಲ್ಲ ; ಹೇಳು."

"ನಮ್ಮ ಪಡೆಗಳು ಮುನ್ನುಗ್ಗುತ್ತಿವೆ ಎಂದರೆ ಸಾಕಲ್ಲ ?"

"ಉಹೂ, ಪೂರ್ತಿ ಹೇಳು."

"ನೀನು ಬಹಳ ಬಳಲಿದ್ದಿ...ನಿನಗೆ ತುಂಬ ವಿಶ್ರಾಂತಿ ಬೇಕು."

"ಹಾ....!"

"......."

"ಡಾಕ್ಟರ್, ನೀನೇಕೋ ಒಂದು ಬಗೆಯಾಗಿದ್ದೀಯಲ್ಲ....ಏನು ?

"ಏನಿಲ್ಲ, ಮಲಗಿಕೊ."

ರುದ್ರ ಮಾತಾಡಲಿಲ್ಲ.

ಡಾ|| ಹುಸೇನ್ ಕಾಲಿಂಗ್ ಬೆಲ್ ಒತ್ತಿ ವಾರ್ಡ್‌ಬಾಯ್‌ಗೆ ಕರೆ ನೀಡಿದ. ಐದು ನಿಮಿಷದೊಳಗಾಗಿ ವಾರ್ಡ್‌ಬಾಯ್ ಔಷಧಿಯ ಟ್ರೇ ಸಹಿತ ಬಂದ. ಇಬ್ಬರೂ ಪಕ್ಕದ ಕೊಠಡಿಯಲ್ಲಿ ಇಂಜಕ್ಷನ್ ನಳಿಕೆಗೆ ಮದ್ದು ತುಂಬ ಹತ್ತಿದರು. ರುದ್ರ ತನಗೆ ತಾನೇ ಹೇಳಿಕೊಂಡ "ನನಗಿನ್ನೇಕೆ ಮದ್ದು ಇಂಜಕ್ಷನ್ ? ಸಾವು ಬರುವುದಾದರೆ ಹೀಗೆಯೇ ಬರಲಿ. ನಾನು ಮಾಡಬೇಕಾದುದೆಲ್ಲಾ ಮಾಡಿಯಾಗಿದೆ. ಯಾರಿಗಾಗಿ ಇನ್ನು ಬದುಕು ? ತಾಯಿ ಇಲ್ಲ, ಹೆಂಡತಿ ಇಲ್ಲ, ಮಕ್ಕಳಿಲ್ಲ ಅಂದಮೇಲೆ ಈರುದ್ರ ಹೋದರೆ ಯಾರಿಗೂ ನಷ್ಟವಿಲ್ಲ."

ಯೋಚನೆಯ ಸುಳಿಯಲ್ಲಿ ಸಿಕ್ಕಿ ಒಂದು ಗಳಿಗೆ ಕಣ್ಮುಚ್ಚಿದ.

"ರುದ್ರಶಕ್ತಿ ರಾಷ್ಟ್ರಶಕ್ತಿ....ಯಾರಿಗಾಗಿ ಅಲ್ಲದಿದ್ದರೂ ರಾಷ್ಟ್ರಕ್ಕಾಗಿ ನೀನು ಬದುಕಲೇಬೇಕು ರುದ್ರ." ನುಡಿಯಿತು ಅಂತರ್ವಾಣಿ.

"ಹಾ........!"

"ಯೋಚಿಸಿ ನೋಡು, ರುದ್ರ. ಈ ಕಡೆ ಪಾಕಿಸ್ತಾನಿಗಳ ಕಿರುಕುಳ–ಆ ಕಡೆ ಚೀನೀ ದೈತ್ಯರ ಧಾಳಿ. ಈ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ರುದ್ರಶಕ್ತಿ ವ್ಯರ್ಥವಾಗಬಾರದು. ಗೂಂಡಾ ಪ್ರವೃತ್ತಿಗೆ ಹೆದರಿದರೆ ರಾಷ್ಟ್ರಮಾತೆಗೆ ಏನು ಹೇಳುವೆ ? ಇಂದು ಮಾನವ ಶಕ್ತಿಯ ಕಣಕಣವೂ ರಾಷ್ಟ್ರದ ಪ್ರಗತಿಗೆ ಪರಿಪೋಷಕವಾಗಲೇಬೇಕು. ಹೀಗೆಯೇ ಸತ್ತರೇನು ಫಲ ? ಇಂದು ಭಾರತದ ಇಂಚು ಇಂಚು ನೆಲವೂ ಲಕ್ಷೋಪಲಕ್ಷ ರುದ್ರರುಗಳಿಂದ ರಕ್ಷಿಸಲ್ಪಡಬೇಕು. ಒಂದೊಂದು ಹನಿ ಶುದ್ಧ ರಕ್ತವೂ ರಾಷ್ಟ್ರದ ಭವ್ಯಶಕ್ತಿ. ಎಲ್ಲೆಲ್ಲೂ ತಲೆಯೆತ್ತುವ ಅಸುರೀ ಶಕ್ತಿಯ ದಮನಕ್ಕಾಗಿ ಮಾನವ ಶಕ್ತಿ ಉದ್ದಾಮವಾಗಿ, ಭೂಮವಾಗಿ, ವಿರಾಡ್ರೂಪವಾಗಿ ಭರತಖಂಡವನ್ನೆಲ್ಲ ವ್ಯಾಪಿಸದ ಹೊರತು ಅಸುರೀ ಶಕ್ತಿ ನಶಿಸದು. ಲಕ್ಷ ಲಕ್ಷ ಹೃದಯಗಳಿಂದೆದ್ದ ದುಃಖದಗ್ಧ ಮೊರೆಗೆ ಲಕ್ಷ ಲಕ್ಷ ರುದ್ರರಿದ್ದಲ್ಲದೆ ಅಭಯ ಪ್ರಧಾನ ವರವನ್ನು ನೀಡಬಲ್ಲುದೇ ಈ ರಾಷ್ಟ್ರ ? ರಾಷ್ಟ್ರಕ್ಕಾಗಿ

ನೀನು. ನಿನಗಾಗಿ ರಾಷ್ಟ್ರ. ಯಾರಿಗಾಗಿ ಅಲ್ಲದಿದ್ದರೂ ರಾಷ್ಟ್ರಕ್ಕಾಗಿ. ರಾಷ್ಟ್ರೋತ್ಥಾನಕ್ಕಾಗಿ ಬದುಕು ರುದ್ರ....ರಾಷ್ಟ್ರೋ ರಕ್ಷತಿ ರಕ್ಷಿತಃ..."

ಡಾ|| ಹುಸೇನ್ ಕೈಯಲ್ಲಿ ಅಣಿಯಾದ ಸೂಜಿ ಮದ್ದಿನೊಡನೆ ಒಳ ಬಂದ, ಒಡನೆ ಕೈ ನೀಡಿದ ರುದ್ರ–"ಇಂದೇ ನನ್ನ ಗಾಯಗಳೆಲ್ಲ ಮಾಯ ವಾಗಬೇಕು. ನೀನೆಷ್ಟು ಚುಚ್ಚಿದರೂ ಸರಿಯೆ."

ಹುಸೇನನ ಮುಖದಲ್ಲಿ ಊಹಿಸಲೂ ಬಾರದಂತಹ ಸಣ್ಣ ನಗು ಮೂಡಿ ಮಾಯವಾಯಿತು.

೦ ೦ ೦ ೦

ರುದ್ರ ಭಾರತದ ಪಡೆಯನ್ನು ವೀರಾವೇಶದಿಂದ ಮುನ್ನಡೆಸುತಿದ್ದಾನೆ. ಶತ್ರುಗಳೂ ಕೆಚ್ಚೆದೆಯಿಂದ ಮುನ್ನುಗ್ಗಿ ಬರುತ್ತಿದ್ದಾರೆ. ಅವರ ಕೈ ಮೇಲಾದೀತೇನೋ ಎಂಬ ಭಯದೊಂದಿಗೆ ತನ್ನ ಪ್ರಾಣ ಭಯವೂ ಎದೆಯ ಗೂಡಿನಲ್ಲಿ ರಕ್ಷಣೆ ಪಡೆದಿದೆ.

ಏನು ಗತಿ ? ಎಂದೂ ಇಲ್ಲದ ಹೇಡಿತನ ಇಂದೇಕೆ ?....ಛೀಃ ! ಛೀಃ ! ಈಗ ಹಿಮ್ಮೆಟ್ಟುವುದೇ ?

ತನಗೆ ತಾನೇ ಹುರಿದುಂಬಿಸಿಕೊಂಡ ರುದ್ರ. ಢಂ ! ಢಮಾರ್ ! ಢಂ ! ಢಮಾರ್ !

ಗುಂಡುಗಳ ಭೀಕರ ಸದ್ದಿನ ಮಧ್ಯೆ ಇನಿದನಿಯೊಂದು ಕಿವಿಯನ್ನು ತಾಗಿತು.

"ಜನ ಬಲವೇ ದೇಶ ಬಲ ; ಧನ ಬಲವೇ ರಾಷ್ಟ್ರ ಬಲ. ಇಲ್ಲಿ ನೀವೇನು ಮಾಡುತ್ತಿದ್ದೀರಿ ?"

—ಹಾ, ಆ ದನಿ ಎಲ್ಲಿಯದು ?

"ಮಾನವತೆಯನ್ನು ಬದಿಗಿಟ್ಟು ಅಣ್ಣ ತಮ್ಮಂದಿರನ್ನು ಕೊಂದು ಹೆಂಗಸರು ಮಕ್ಕಳನ್ನು ಅನಾಥರನ್ನಾಗಿ ಮಾಡುವುದು ರಾಷ್ಟ್ರ ರಕ್ಷಣೆ ಯಲ್ಲ. ರಾಷ್ಟ್ರ ದ್ರೋಹ !"

—ಹಾ, ಯಾರ ಧ್ವನಿ ಅದು ?

ನೋಡೆ ನೋಡೆ ರಣರಂಗದ ಮಧ್ಯೆ ಹಸುರುಡೆಯುಟ್ಟ ದೇವಿ ಭಾರತಿ. !

ರುದ್ರ ತತ್ತರಿಸಿದ. ರೈಫಲ್ ಕೆಳಗೆ ಬಿತ್ತು.

ರುದ್ರ ತಟ್ಟನೆ ಕಣ್ತೆರೆದು ನಿರಿನಿರಿ ನಿಟ್ಟಿಸಿದ. ಕನಸಿನ ಚಿತ್ರವಳಿದು ಎದುರಿನ ನೈಜ ಚಿತ್ರ ಕಣ್ಣೋಚರಿಸಿತು. ಡಾ|| ಹುಸೇನ್ ಕುರ್ಚಿಯ ಮೇಲೆ ಕುಳಿತಿದ್ದಾನೆ. ಮುಚ್ಚಿದ ಕಣ್ಣುಗಳಲ್ಲಿ ನೀರು ಧಾರಾಕಾರವಾಗಿ ಹರಿದಿದೆ. ತೊಡೆಯ ಮೇಲೆ ಕುರಾನು ವಿಶ್ರಮಿಸಿದೆ. ಇತ್ತ ಪರಿವೆಯೇ ಇಲ್ಲ. ದೃಶ್ಯ ತಬ್ಬಿಬ್ಬಾಗಿಸಿತು. ನಿರಿನಿರಿ ನಿಟ್ಟಿಸಿದ ರುದ್ರ. ಭಾವ ಸಮಾಧಿಯಲ್ಲಿ ಮುಳುಗಿರಬಹುದೇ ? ಅಥವಾ ದುಃಖಾಂಬುಧಿಯಲ್ಲಿ ತೇಲುತ್ತಿರಬಹುದೇ ?

"ಡಾಕ್ಟರ್ !"

"......."

"ಡಾಕ್ಟರ್....!"

"ಆ್ಞ...!"

"ಕಣ್ಣೀರೇಕೆ ?"

"ಏನಿಲ್ಲಪ್ಪಾ."

"ಏಕೆ ಡಾಕ್ಟರ್ ? ನನ್ನಲ್ಲಿ ಮುಚ್ಚುಮರೆಯೇ ?"

"ಭಾವಪರವಶನಾಗಿರಬಹುದು ಅಷ್ಟೆ."

ಮೇಜರ್ ರುದ್ರ ಸುಮ್ಮನಾದ. ಡಾ|| ಹುಸೇನ್ ಕಂಬನಿಗಳನ್ನು ತೀಡಿಕೊಂಡ.

"ಗಂಟೆಯೆಷ್ಟು ಡಾಕ್ಟರ್ ?"

"ನಾಲ್ಕು. ಚಹ ತರಿಸಲೇ ?

"ಹ್ಞೂ."

ಹುಸೇನ್ ಹೊರಹೋದ. ರುದ್ರ ಕಣ್ಮುಚ್ಚಿದ. ಅರೆ ನಿದ್ದೆಯಾಗಿತ್ತೇನೋ ಮತ್ತೆ ಜೊಂಪು ಹತ್ತಿತು. ಸ್ವಲ್ಪ ಹೊತ್ತು ಉರುಳಿತು. ಒಂದು ಸಣ್ಣ ನಿದ್ದೆಯೂ ಆಯಿತು. ಕಿಟಕಿಯಲ್ಲಿ ಭರ್ರನೆ ತೂರಿಬಂದ ತಂಗಾಳಿ ಮುಖವನ್ನು ತಣ್ಣಗೆ ಮುದ್ದಿಸುತ್ತಲೂ ಮುಚ್ಚಿದ ಕಣ್ಣುಗಳು ತೆರೆದುವು. ನೋಟ ನೋಡಲಾರದೆ ನೋಡಿತು. ಅರೆ ! ಎದುರಿಗೆ ಕಂಡದ್ದೇನು ? ಹುಸೇನ್ ಹೇಗೆ ಹೀಗಾದ ? ಅವನು ಇಷ್ಟರೊಳಗಾಗಿ

ಅಪರಂಜಿಯ ಹೊಳೆಯಲ್ಲಿ ಮಿಂದು ಬಂದನೇ ? ಕಣ್ಣುಗಳನ್ನು ಅಗಲ ವಾಗಿ ತೆರೆದು ಆಚ್ಚರಿಯಿಂದ ನಿರಿನಿರಿ ನಿಟ್ಟಿಸಿದ ರುದ್ರ.

ಅದಾವ ವರ್ಣ ? ತಾಮ್ರದ ಮಿನುಗೇ ? ಅಲ್ಲ, ಅಲ್ಲ ; ಅಪರಂಜಿಯೇ ? ಉಹೂ, ಅಲ್ಲವೇ ಅಲ್ಲ. ಮತ್ತಾವ ಲೋಹ ? ಲೋಹವಲ್ಲ, ದೇಹ ! ಸರ್ವೇಸಾಮಾನ್ಯ ದೇಹ. ಮೊದಲಿನ ತಾಮ್ರ ವರ್ಣವೇ ಹೌದು. ಆದರೆ ಅಪೂರ್ವ ಹೊಳಪಿದೆ...ಅದು ಹೇಗೆ ಬಂತು ?

"ಡಾಕ್ಟರ್ !"

"........"

"ಡಾ....ರ್ !"

"ಮೇಜರ್ ಸಾಬ್ !"

"ನೀನು ಏನೋ ಒಂದು ಬಗೆಯಾಗಿದ್ದಿ ?"

"ಇಲ್ಲವಲ್ಲಾ..."

"ಧರ್ಮ ಸಂಕಟಕ್ಕೊಳಗಾದ ಅರ್ಜುನನಂತೆ ತೋರುತಿದ್ದಿ."

"........"

"ನನಗೆ ಹೇಗೆಂದು ಊಹಿಸಲೂ ಅಸಾಧ್ಯವಾಗಿದೆ. ನಿನ್ನೆಯಿಂದಲೂ ನಿನ್ನಲ್ಲಿ ಅಪೂರ್ವ ಬದಲಾವಣೆಯನ್ನು ನೋಡುತಿದ್ದೇನೆ. ಇದುವರೆವಿಗೆ ಏನೆಂಬುದೇ ಅರ್ಥವಾಗಿಲ್ಲ."

"ಹೋಗಲಿ ಬಿಡು. ಈಗ ನೀನು ಯಾವ ವಿಷಯವನ್ನೂ ಮನಸ್ಸಿಗೆ ಹಚ್ಚಿಕೊಳ್ಳಬಾರದು."

"ನಿನಗಿಂದು ಡ್ಯೂಟಿ ಇಲ್ಲವೇ ? ಬೆಳಿಗ್ಗೆಯಿಂದ ಇಲ್ಲೇ ಇದ್ದೀ ಯಲ್ಲ."

"ನಾನೊಂದು ತಿಂಗಳು ರಜೆಯಲ್ಲಿದ್ದೇನೆ."

"ಏಕೆ ?"

"ಸುಮ್ಮನೆ."

"ಎಂದಿನಿಂದ ?"

"ಗುರುವಾರದಿಂದ."

"ಮತ್ತೇಕೆ ಇಲ್ಲೇ ಇದ್ದಿ ?"

"ನಿನಗಾಗಿ."

"ತುಂಬ ಥ್ಯಾಂಕ್ಸ್, ಇನ್ನೂ ಸ್ವಲ್ಪ ದಿನ ಇಲ್ಲೇ ಇರಪ್ಪಾ."

"ಇರುವೆ."

"ಏಕೆ ರಜೆ ತೆಗೆದುಕೊಂಡೆ ? ಕಾಂಚೀಪುರಕ್ಕೆ ಹೋಗುವು ದಿದೆಯೆ ?"

"ಇಲ್ಲ...." ಪ್ರಯತ್ನಪಟ್ಟರೂ ನಾಲಿಗೆ ತೊದಲಿತು. "ಇರಪ್ಪಾ, ಬಂದೆ." ಎನ್ನುತ್ತಾ ಹುಸೇನ್ ಎದ್ದು ಶೌಚದ ಮನೆಗೆ ಹೋದ.

ಒಡೆಯ ಗಾಯಾಳುವಾಗಿ ಹಾಸಿಗೆ ಹಿಡಿದಾಗಿನಿಂದ ದೋಲಿ ಕೊಠಡಿಯನ್ನು ಬಿಟ್ಟು ಕದಲಿರಲಿಲ್ಲ. ಹಾಸಿಗೆಯ ಬಳಿ ಸಪ್ಪೆ ಮೋರೆ ಯಿಂದ ಬಿದ್ದುಕೊಂಡಿತ್ತು. ಪಕ್ಕದ ಕೊಠಡಿಗಳಲ್ಲಿನ ಗಾಯಾಳುಗಳ ನರಳಾಟ ಕಿವಿಯ ಮೇಲೆ ಎರಕ ಹೊಯ್ದಂತೆ ಬೀಳುತ್ತಿದೆ. ಹೊರ ವಲಯ ದಲ್ಲಿ ವಿಜಯೀ ಸೈನಿಕರ ವಿಜಯೋತ್ಸವವೂ ನಡೆಯುತಿತ್ತು. ಕೇಕೆ ಹಾಕಿ ನಗುವುದರೊಂದಿಗೆ ಗೈಲ್ ಗೈಲ್ ಗೆಜ್ಜೆ ನಿನಾದವೂ ಕೇಳಿ ಬರುತಿತ್ತು.

ಅಂತರ್ವಾಣಿ ಚೀರಿತು " ಸಾಕಪ್ಪಾ. ಸಾಕು."

ಶೌಚದ ಮನೆಯ ಬಾಗಿಲು ತೆರೆಯಿತು. ಮುಖವನ್ನು ತೀಡಿ ಕೊಳ್ಳುತ್ತಾ ಹುಸೇನ್ ಹೊರಬಂದ. ತೆಳ್ಳನೆಯ ನೀಳವಾದ ಮೈ ಕಟ್ಟಿಗೆಯಂತೆ ಕಾಲು ಚಾಚಿ ಮೇಜಿನೆಡೆಗೆ ನಡೆಯಿತು. ಮುಖದಲ್ಲಿ ಗೆಲುವಿಲ್ಲ. ಮೈಯಲ್ಲಿ ಲವಲವಿಕೆ ಇರಲಿಲ್ಲ. ಏನೋ ಒಂದು ಬಗೆಯಲ್ಲಿ ಯಾಂತ್ರಿಕವಾಗಿ ಕುರ್ಚಿಯಲ್ಲಿ ಮಯಣದ ಬೊಂಬೆಯಂತೆ ಮೈ ಚೆಲ್ಲಿದ. ಈಗ ಕೈಯಲ್ಲಿ ಕುರಾನಿರದೆ ಸ್ಟೆತೋಸ್ಕೋಪಿತ್ತು. ಮೇಲ್ ನರ್ಸ್ ಥರ್ಮಾಮಿಟರ್ ಸಹಿತ ಬಂದು ಜ್ವರ ನೋಡಿ ರಿಕಾರ್ಡು ಮಾಡಿ ಹೊರ ಹೋದ. ಇನ್ನಷ್ಟು ಹೊತ್ತಿನೊಳಗಾಗಿ ಚಹವೂ ಆಗಮಿಸಿತು. ಮೇಜರ್ ರುದ್ರ ಎದ್ದು ಕುಳಿತ.

ಥಿಗ್, ಥಿಗ್, ಥಿಗ್, ಥಿಗ್.

ಥಿಗ್, ಥಿಗ್, ಥಿಗ್, ಥಿಗ್.

ಸದ್ದು ಕೇಳಿ ದೋಲಿ ಹೊರಗಡೆ ಧಾವಿಸಿತು. ಬೌವ್, ವ್‌ವ್‌ವ್!

ಅಜಿಲ ಒಳಬಂದು ಹೇಳಿದ "ಡಾಕ್ಟರ್, ಸಿಪಾಯಿಯೊಬ್ಬ ಕಾಲು ಮುರಿದು ಕಾಡಿನಲ್ಲಿ ಮೂರು ದಿನಗಳಿಂದ ಬಿದ್ದಿದ್ದನಂತೆ. ಬಹಳ ಸುಸ್ತಾಗಿದ್ದಾನೆ. ಇಂದು ನೋಡಿದವರು ಹೊತ್ತು ತಂದಿದ್ದಾರೆ."

"ಅಯ್ಯೋ, ಪಾಪ."

ಹುಸೇನ್ ಖಾಲಿ ಬಸಿಯನ್ನು ಟ್ರೇಯಲ್ಲಿಟ್ಟು ಹೊರಹೋದ.

ರುದ್ರ ಚಿಂತಿಸಿದ...ಪಾಪ, ಅವನ ಗತಿ ಏನಾಗಿರಬೇಡ ?

ಸಿಪಾಯಿಗೆ ಪಥ್ಯಪಾನ ಚಿಕಿತ್ಸೆಗಳ ಏರ್ಪಾಡನ್ನು ಮಾಡಿದನಂತರ ಡಾ|| ಹುಸೇನ್ ಒಳಬಂದ. ಮೇಜರ್ ರುದ್ರ ಕೇಳಿದ.

"ಹೇಗಿದ್ದಾನೆ ?"

"ಪಾಪ, ಬಹಳ ಸುಸ್ತಾಗಿದ್ದಾನೆ."

ಮೇಜರ್ ರುದ್ರ ಮಾತಾಡಲಿಲ್ಲ. ಮುಖ ಖಿನ್ನವಾಯಿತು.

ಡಾ|| ಹುಸೇನ್ ತೊಳೆದ ಕೈಯನ್ನು ಟವಲ್ಲಿನಿಂದ ಒರಿಸಿಕೊಂಡು ಆರಲು ಹಾಕಿ ಈ ಕಡೆ ಬರುತ್ತಲೂ ಅವನ ಸೀರಿ ಸೀಕಲಾದ ಮುಖವನ್ನು ನೋಡು ನೋಡುತ್ತಾ ರುದ್ರ ಒಂದು ಗಳಿಗೆ ಚಿಂತಿಸಿದ....ಏಕೆ ಹೀಗೆ ? ಏನಾಗಿರಬಹುದು ? ಸಿಡಿದೊಡೆಯುವ ಮೂಟೆಯಂತಿದ್ದಾನಲ್ಲ ಹುಸೇನ್ ?

ರುದ್ರ ಸ್ವಲ್ಪ ಹೊತ್ತು ಮಾತಾಡಲಿಲ್ಲ. ಹೊತ್ತು ಮೌನ ವ್ರತ ಹೂಡಿತು. ಪ್ರಯತ್ನಿಸಿದರೂ ಇಬ್ಬರ ತುಟಿಯೂ ಬಿರಿಯಲಿಲ್ಲ. ಸದ್ದಿಲ್ಲದ ಶಾಂತಿಯಲ್ಲಿ ಬಿಸಿಯುಸಿರು ನೆಲೆಯಿಲ್ಲದೆ ಹರಿದಾಡಿತು. ಹಲವು ಯೋಚನೆಗಳಿಗೆ ಇಂಬು ಕೊಟ್ಟಿತು–ಮನಸ್ಸು.

"ಡಾಕ್ಟರ್...."

ಹುಸೇನ್ ನೋಡಿದ ನೊಟನೇ ಕೇಳಿತು "ಏನು?"

"ದಿನೇ ದಿನೇ ಇಳಿದು ಹೋಗುತ್ತಿದ್ದಿ. ನಿನ್ನ ಕಡೆಗೆ ನೀನು ಲಕ್ಷ್ಯ ಕೊಡುತ್ತಿಲ್ಲ. ದಯವಿಟ್ಟು ಇತರ ಡಾಕ್ಟರುಗಳಿಗಾದರೂ ನಿನ್ನ ಶರೀರ ಪ್ರಕೃತಿಯನ್ನು ಒಪ್ಪಿಸಿಬಿಡು."

ಹುಸೇನ್ ಯಾವುದೋ ಯೋಚನೆಯ ಮಂಪರದಲ್ಲಿದ್ದ. ಮಾತಾಡದೆ ಮೇಜಿನ ಮೇಲಿದ್ದ ಔಷಧಿಯನ್ನು ಯಾಂತ್ರಿಕವಾಗಿ ಪರೀಕ್ಷಿಸಿದ.

ಅದರ ಆವಶ್ಯಕತೆ ಇಲ್ಲದಿದ್ದರೂ ಹೊತ್ತು ಕಳೆಯುವ ವಿಧಾನ ಹೂಡಿದ್ದಾನೆ ಎನ್ನಿಸಿತು ಮೇಜರ್ ರುದ್ರನಿಗೆ. ಅತ್ತಲೇ ನಿಟ್ಟಿಸಿ ನೋಡಿ "ಏನಪ್ಪಾ" ಎಂದ.

"ಮಾತ್ರೆ ಇದೆಯೋ ಖರ್ಚಾಗಿದೆಯೋ ನೋಡಿದೆ ಅಷ್ಟೆ."

"ಅಷ್ಟೆ ತಾನೆ ? ಬಾಪ್ಪ ಕೂಡು .."

ಡಾ॥ ಹುಸೇನ್ ಕುಳಿತುಕೊಳ್ಳುವುದಕ್ಕೆ ಬದಲಾಗಿ ಹೊರಹೋದ. ಅವನು ಹಾಗೇಕೆ ಹೊರಹೋದನೆಂಬುದು ಬಗೆಹರಿಯಲಿಲ್ಲ. ದೀನ ನೋಟ ಅವನನ್ನು ಹಿಂಬಾಲಿಸಿತು. ಡಾ॥ ಹುಸೇನ್ ಹತ್ತು ನಿಮಿಷದೊಳಗಾಗಿ ಹಿಂದಿರುಗಿದ. ಅವನು ಹೋದುದಕ್ಕೂ ಬಂದುದಕ್ಕೂ ಯಾವ ಕಲ್ಪನೆಯೂ ಮೂಡಲಿಲ್ಲ.

ಏನಿರಬಹುದು ?

ಹುಸೇನ್ ಯಾವ ಮಾತನ್ನೂ ಆಡದೆ ಕೆಲವು ತಂತಿ ವರ್ತಮಾನಗಳನ್ನೂ ಕೆಲವು ಕಾಗದಗಳನ್ನೂ ಗೆಳೆಯನ ಮುಂದೆ ಹಿಡಿದ. ಮೇಜರ್ ರುದ್ರ ಅವುಗಳ ಮೇಲೆ ಒಂದು ಗಳಿಗೆ ಕಣ್ಣಾಡಿಸಿದ.

ಅಬ್ಬಾ...ಭಯಂಕರ !

ಮೇಜರ್ ರುದ್ರ ಹಣೆ ಚಚ್ಚಿಕೊಂಡು ಅಂದ "ಅದನ್ನಿಷ್ಟು ಹಚ್ಚಿಕೊಳ್ಳಬೇಡಪ್ಪಾ ಡಾಕ್ಟರ್ !"

ಕಣ್ಣ ಮುಂದಿನ ವಸ್ತುಗಳೆಲ್ಲಾ ಒಂದು ಗಳಿಗೆ ಗಿರಗಿರ ಸುತ್ತಿದಂತಾಯಿತು. ಶಕ್ತಿಯುಡುಗಿದ ಕಾಲುಗಳು ಬಳುಕಿದುವು. ರುದ್ರ ಆರ್ತನಾಗಿ ಅಂದ "ಡಾಕ್ಟರ್ ! ನಿನಗೆ ಈ ಅವಸ್ಥೆ ಬರಬಾರದಿತ್ತು !"

"ಅಲ್ಲಾನ ಇಚ್ಛೆ !" ಹುಸೇನ್ ತಲೆಬಾಗಿದ.

ರುದ್ರ ವ್ಯಾಪ್ತಿಗೆ ಮೀರಿ ಮಿಡಿದ ಹೃದಯವನ್ನು ಒತ್ತಿ ಹಿಡಿದುಕೊಂಡ. ಕಣ್ಣುಗಳಲ್ಲಿ ಫಳಫಳನೆ ನೀರಾಡಿತು.

ಓ....ಕಾಲಿಮಾ ! ನಿನ್ನ ದಾಹ ಇನ್ನೂ ಹಿಂಗಲಿಲ್ಲವೇ ?

ರುದ್ರ ನಾಲ್ಕು ಹೆಜ್ಜೆ ಮುಂದುವರಿದು ಹುಸೇನನನ್ನು ಆಲಂಗಿಸಿಕೊಂಡು ಮಗುವಿನಂತೆ ಕಂಬನಿಗರೆದ.

ಹೊರಗಡೆ ದೋಲಿ ಒಂದೇ ಸಮನೆ ಬೊಗಳುತಿತ್ತು.

# ಮಾದೇನಹಳ್ಳಿಗೆ ರೈಲು

....ಘಮ ..ಘಮ...ಘಮ....ಘಮ !

...ಮಲ್ಲಿಗೆ ಹೂಗಳ ಕಂಪು ಅಂಗಳದಲ್ಲಿ 'ಘಂ' ನೆ ತುಂಬಿ ಹರಡಿತ್ತು.

ರಾಧಾ ಮೊಣಕೈಗಳೆರಡನ್ನೂ ಕಿಟಕಿಯ ಮೇಲೆ ಊರಿ ಹೂ ಹಸ್ತಗಳ ನಡುವೆ ಮುಖವನ್ನಿರಿಸಿಕೊಂಡು ಹೊರಲೋಕದಲ್ಲಿ ಸಂಪೂರ್ಣ ಗಮನ ವನ್ನು ತೆತ್ತು ಮೈಮರೆತಿದ್ದಾಳೆ- ಬಾಲದೇಹ ಕಿಟಕಿಗಾಂತು ನಿಂತು ಅದೆಷ್ಟು ಹೊತ್ತು ಉರುಳಿತ್ತೋ....ಅವಳ ಎಳೆಯ ಮನವನ್ನು ಮಲ್ಲಿಗೆಯ ಮನಮೋಹಕ ಕಂಪೋ, ಅಥವಾ ಬೆಳಗಿನ ವಾತಾವರಣವೋ, ಗಿಡಮರಗಳಲ್ಲಿ ಚಿಲಿಪಿಲಿಗುಟ್ಟುವ ಪಕ್ಷಿಗಳೋ-ಅಂತೂ ಯಾವುದೋ ಸೆಳೆದು ಅಲುಗದಂತೆ ಬಂಧಿಸಿತ್ತು. ಹೊತ್ತು ಉರುಳಿ ಬಾಲರವಿ ಬಾನೇರಿದರೂ ಅವಳು ಅಲುಗಲಿಲ್ಲ. ಒಂದೆರಡು ಬಾರಿ ಒಳಗಿನಿಂದ ಗಂಗಮ್ಮ ಕರೆದರೂ ರಾಧಾ ಓಗೊಡಲಿಲ್ಲ ಎನ್ನುವುದಕ್ಕಿಂತಲೂ ಅವಳ ಗಮನಕ್ಕದು ಬೀಳಲಿಲ್ಲ ಎನ್ನಬಹುದು. ಬೇಲಿ ಸಾಲಿನಲ್ಲಿ ಕುಳಿತ ಹಸುರು ಗಿಣಿ ಹಸುರು ರೆಕ್ಕೆಯನ್ನು ಬಿಚ್ಚಿ ಪುರ್ರನೆ ಹಾರಿದುದನ್ನು ನೋಡಿ ಮನಸ್ಸು ಅರಳಿತು. ಅದೇ ಸಮಯಕ್ಕೆ ಸರಿಯಾಗಿ ದೂರದ ಮಾವಿನ ಹೊದರಿನಲ್ಲಿ ಹುದುಗಿ ಕುಳಿತ ಮತ್ತ ಕೋಗಿಲೆ ಮಧುರಗಾನಗೈಯಿತು. ಕುಹೂಊೂ !

ಇನಿದನಿ ಕಿವಿಯನ್ನು ತಾಗುತ್ತಲೂ ತಾನೂ ಮರುದನಿ ಕೊಡೋಣ ವೆಂಬಷ್ಟು ಹುಮ್ಮಸ್ಸು ಮೂಡಿ ಬಾಯ್ದೆರೆಯುವುದರೊಳಗಾಗಿ ಗದ್ದೆಯಂಚಿ ನಿಂದ ಯಾರೋ ಮರುದನಿ ಕೊಟ್ಟರು. ಕುಹೂಊೂ !

ಕೀಚಲು ದನಿ ಕಿವಿಯನ್ನು ತಾಗುತ್ತಲೂ ರಾಧೆಗೆ ನಗುವುಕ್ಕಿ ಬಂತು. ದನಿ ಬಂದ ಕಡೆ ನೋಟ ತಾನಾಗಿ ಹರಿಯಿತು. ಆದರೆ ಕಣ್ಣಿಗೆ

ಬಿದ್ದುದು ಮರುದನಿ ಕೊಟ್ಟವರಲ್ಲ–ಹಗ್ಗದ ಮೇಲಿನ ಮಿರುಮಿರುಗುವ ಸೀರೆ.

ಸೋಮಣ್ಣನ ಮನೆಯವರು ಜರಿಯಂಚಿನ ಸೀರೆಯನ್ನು ಹಗ್ಗದ ಮೇಲೆ ಹಾಕಿದ್ದಾರೆ. ಎಳೆ ಬಿಸಿಲು ಮುತ್ತಿಡುತ್ತಿದೆ. ಮಂದ ಮಾರುತ ಮುದ್ದಿಸಿ ಮುದ್ದಿಸಿ ಅತ್ತಿಂದಿತ್ತ ತೂರಾಡಿಸುತಿದ್ದಾನೆ. ಒಮ್ಮೆಲೆ ಎಳೆ ಮನಸ್ಸು ನಿಮಿರಿ ನಿಂತಿತು...ಏನಿರಬಹುದು ?

ಮಿರುಮಿರುಗುವ ಸೀರೆ ಹೊರಬರಲು ಕಾರಣವಾದರೂ ಏನು ? ಕೊಳೆಯಾಗಿದ್ದು ಒಗೆದು ಹಾಕಿರಬಹುದೇ ? ಅಥವಾ ಎಲ್ಲಿಗಾದರೂ ಹೋಗಲು ಹೊರಟಿರಬಹುದೆ ? ಆದರೆ ಈಗ ಹೋಗುವುದಾದರೂ ಎಲ್ಲಿಗೆ ? ಜಾತ್ರೆಯೂ ಇಲ್ಲ, ಮದುವೆಯೂ ಇಲ್ಲ. ಇನ್ನೇನಿರಬಹುದು ?

ಟಪ, ಟಪ, ಟಪ, ಟಪ.

ಕಿಟಕಿಯ ನೇರಕ್ಕೆ ಮೂಲೆ ಮನೆ ಅಜ್ಜಿಯ ಬಳ್ಳಿ ದೇಹ ಬಿದಿರ ಗಣೆಯಂತೆ ಸಾಗಿಹೋಯಿತು. ಹೊಗೆ ಹತ್ತಿ ಕಪ್ಪು ತಳೆದ ಕುಕ್ಕೆ ತಲೆಯ ಮೇಲಿತ್ತು. ದಿಟ್ಟ ನಡಿಗೆಯ ಅಜ್ಜಿಯ ಬೆದರು ರೂಪ ಮನಸ್ಸಿನೆಳೆಯನ್ನು ಎಳೆದು ಜಗ್ಗುತ್ತಲೂ ಅಚ್ಚರಿಯ ಸಾಮ್ರಾಜ್ಯದಲ್ಲಿ ಮುಳುಗಿದ್ದ ಮನಸ್ಸು ವಾಸ್ತವ ಜಗತ್ತಿಗೆ ಸರ್ರನೆ ಹರಿದು ಬಂತು. ಅತ್ತಿತ್ತ ನೋಡದೆ ಹಾದಿಯ ನೇರಕ್ಕೆ ನಡೆಯುತಿದ್ದಾಳೆ ಅಜ್ಜಿ. ಟಪ, ಟಪ, ಟಪ, ಟಪ.

ಹಚ್ಚೆ...! ಹಚ್ಚೆ ಕುಕ್ಕುವ ಅಜ್ಜಿ !

ತಣ್ಣೀರಿನಲ್ಲಿ ಮಿಂದಂತೆ ಮೈಯಲ್ಲಿ ಕಂಪನದ ಅಲೆ ಹರಿದಾಡಿ ಹೋಯಿತು. ಹಚ್ಚೆ ಕುಕ್ಕುವ ಅಜ್ಜಿ ಈ ಕಡೆ ಬಂದಾಗಲೆಲ್ಲ "ಹುಡುಗಿಗೆ ಹನ್ನೆರಡು ತುಂಬಿತು. ಇನ್ನೂ ಹಚ್ಚೆ ಹೊಯ್ಯಿಸಲಿಲ್ಲವಲ್ಲಾ ?" ಎಂದು ಕೇಳದ ದಿನವೇ ಇರಲಿಲ್ಲ. ಹಠಗಾತಿಯಾದ ಅಜ್ಜಿ ಪೌರುಷೇಯವಾಗಿ ದಿಡು ದಿಡು ನಡೆದು ಬಂದಳೆಂದರೆ ಎಲ್ಲಿಲ್ಲದ ಹೆದರಿಕೆ. ಗಂಗಮ್ಮನಿಗೆ ಜೋರು ಮಾಡಿ ಹುಡುಗಿಗೆ ಹೆದರಿಸಿ ಸಂಪ್ರದಾಯದ ಬಗ್ಗೆ ದೊಡ್ಡ ಭಾಷಣ ಮಾಡಿ ಛೀಮಾರಿ ಮಾಡಿಯೇ ತೀರಬೇಕು. ಆಗಲೇ ಅವಳಿಗೆ ಸಂತೃಪ್ತಿ. ಅಷ್ಟಕ್ಕೂ ಬಿಡದೆ ಮುದ್ದಣ್ಣನಿಗೂ ಒತ್ತಾಯಪೂರ್ವಕ

ವಾಗಿ ಹೇಳಿ ತನ್ನ ಹಿರಿತನವನ್ನು ಸ್ವಚ್ಛಂದವಾಗಿ ಪ್ರದರ್ಶನ ಮಾಡಿಯೇ ಹೋಗುತ್ತಿದ್ದಳು. ಅಜ್ಜಿ. ಊರ ಹಿರಿಯರೂ ಹಾಗೆಯೇ ಅನ್ನುತ್ತಿದ್ದರು. "ಕಿವಿ ಮೂಗು ಚುಚ್ಚಿಕೊಂಡು ಹೆಣ್ಣುಮಕ್ಕಳು ಗೌರಮ್ಮನಂತಿರ ಬೇಕು !"

ಅದರಂತೆ ಕೂಗಿ ಚೀರಾಡಿದರೂ ಬಿಡದೆ ಕಿವಿ ಮೂಗುಗಳನ್ನು ಚುಚ್ಚಿ ಅಗ್ಗದ ಆಭರಣಗಳನ್ನು ಹಚ್ಚಿಯೂ ಆಗಿತ್ತು. ಇನ್ನು ಹಚ್ಚೆ ಹೊಯ್ಯುವುದೊಂದು ಬಾಕಿ.

ಅಯ್ಯೋ, ಅದೆಷ್ಟು ಭಯಂಕರ....!

ತಿಮ್ಮಿ, ನಂಜಿ, ಕೆಂಪಿ, ಗೌರಿ, ಗಂಗುರವರಿಗೆ ಹಚ್ಚೆ ಹೊಯ್ಯಿಸಿದುದನ್ನು ಕಣ್ಣಾರೆ ಕಂಡಿದ್ದ ರಾಧೆಗೆ ಅದರ ಭಯಂಕರ ನೆನಪು ಮೂಡಿ ಆಪಾದಮಸ್ತಕವೂ ಮೆಲ್ಲನೆ ಜುಮುಜುಮುಗುಟ್ಟಿತು. ಹುಡುಗಿಯರು ಅತ್ತು ಕರೆದು ಗೋಳಾಡಿದರೂ ಬಿಡದೆ ಎರಡಾಳಿನಿಂದ ಹಿಡಿಸಿಕೊಂಡು ಹಚ್ಚೆಹೊಯ್ಯಿಸಿದ್ದರು ಹಿರಿಯರು. ಅದೇ ಅಂದು ನಾಗು ತೋರಿದ ಧೈರ್ಯ ನಿಜಕ್ಕೂ ಆಶ್ಚರ್ಯ. ನೋಡಿದರೆ ಅವಳೂ ಚಿಕ್ಕವಳು ! ಒಂದು ಹನಿ ಕಣ್ಣೀರೂ ಹಾಕದೆ ಏಳೆಂಟು ಹಚ್ಚೆ ಒಂದೇ ಬಾರಿ ಹೊಯ್ಯಿಸಿಕೊಂಡಳಲ್ಲ. ಅಬ್ಬಾ ! ನಿಜವಾಗಿಯೂ ಧೈರ್ಯಗಾತಿ !

ವಿಷಯ ಮೈ ನವಿರೇಳಿಸಿತು.

ಅಯ್ಯಪ್ಪ ! ನನಗದು ಬೇಡವೇ ಬೇಡ...ಅಂತರ್ವಾಣಿ ಚೀರಿತು.

ದಿಟ್ಟೆಯ ನೇರಕ್ಕೆ ಹೋಗುತ್ತಾ ಹೋಗುತ್ತ ಸಣ್ಣಗೆ ಕರಿಯ ಕಡಿಯಂತೆ ಚಿಕ್ಕದಾಗಿ ಅಜ್ಜಿಯ ದೇಹ ದೂರದಲ್ಲಿ ಇನ್ನೇನು ನಶಿಸಿ ಹೋಗಲಿತ್ತು. ಕಣ್ಮರೆಯಾಗುತಿದ್ದ ಅವಳನ್ನು ನೋಡುತಿದ್ದಂತೆ ಬಾಯಿ ಸೊಟ್ಟ ಮಾಡಿ 'ಸದ್ಯ, ತೊಲಗಿದಳಲ್ಲಾ !' ಎಂದುಕೊಂಡಳು ರಾಧ.

ಅಜ್ಜಿ ಕಣ್ಮರೆಯಾಗುತ್ತಲೂ ನೋಟ ನೆರಮನೆ ಕಡೆ ಹೊಳೆತು. ಇನ್ನೂ ಕೆಲವು ಒಗೆದು ಹಿಂಡಿದ ರಂಗಿನ ಬಟ್ಟೆಗಳನ್ನು ಹರಡುತಿದ್ದಳು ಕುಂತಿ. ಕೈ ತುಂಬ ಹಸರು ಹಚ್ಚೆ !

ಕುಂತಿ ಬಲು ಧೈರ್ಯಗಾತಿ ! ಇಲ್ಲದಿದ್ದಲ್ಲಿ ಅಷ್ಟೊಂದು ಹಸುರು ಹಚ್ಚೆ !

ಅಂದು ಕೆಂಪಿ ತಾಯಿ ಅಂದದ್ದು "ಹೆಣ್ಣಾಗಿ ಹುಟ್ಟಿ ಹಚ್ಚೆ ಹೊಯ್ಸಿ ಕೊಳ್ಳದೆ ಇರುವುದೇಕೆ ? ಹಚ್ಚೆ ಇಲ್ಲದೆ ಅನ್ನದ ಗಡಿಗೆಗೆ ಕೈಯಿಡಬಾರದು ಹೆಣ್ಣುಮಕ್ಕಳು !"

ಹಾಗಾದರೆ .. ?

"ಉಹೂ ನಾವೊಲ್ಲೆ ಅವ್ವಾ ! ಬಹಳ ನೋವು !"

"ಹಾಗೆಂದವರುಂಟೇ ? ನಾವೆಲ್ಲಾ ಹುಯ್ಸಿಕೊಳ್ಳಲಿಲ್ಲವೇ ? ಇದೆಂಥ ನೋವು ? ಇರುವೆ ಕಚ್ಚಿದಂತಾಗುತ್ತದೆ ಅಷ್ಟೆ. ಹೆಣ್ಣಾಗಿ ಹುಟ್ಟಿ ಹೆದರಿಕೊಂಡರೆ ಹೇಗೆ ? ಇನ್ನು ಮುಂದೆ ಎಂಥೆಂಥ ನೋವು ಗಳಿವೆಯೋ ?"

"ಅಯ್ಯೋ, ದೇವರೇ ! ನನಗೆ ಹಚ್ಚೇನೂ ಬೇಡ, ನೋವೂ ಬೇಡ, ಏನೂ ಬೇಡ."

"ಹ್ಞ ... ಹ್ಞ ! ಹಾಗಂತಿರು. ಬದುಕು-ಬಾಳು ಅಂದರೆ ಅಷ್ಟು ಸುಲಭ...?"

"ಏನಾದರೂ ಆಗಲಿ, ನನಗಂತೂ ಬೇಡವೇ ಬೇಡ."

ಸ್ತ್ರೀ ಸಂಕುಲವೆಲ್ಲಾ ಕಿಲಕಿಲ ನಕ್ಕಿತು.

ದಿನಗಳೇನೋ ಉರುಳಿದುವು. ಮಧ್ಯೆ ಮಧ್ಯೆ ಒತ್ತಾಯವೂ ನಡೆದಿತ್ತು. ಎಳೆಯ ಮನದಲ್ಲಿ ಭಯದ ಭಯಂಕರ ಅಡ್ಡಗೋಡೆಯೊಂದಿಲ್ಲ ದಿದ್ದಲ್ಲಿ ಮುಖ ಮೈಗಳನ್ನು ಹಸುರು ಹಚ್ಚೆಗಳು ನಿರಾಳವಾಗಿ ಅಲಂಕರಿಸುತಿದ್ದುವು.

ಅಯ್ಯೋ ದೇವರೇ ! ಅದು ಹೇಗಾದರೂ ತಪ್ಪಿ ಹೋದರೆ ಸಾಕು.

ಅಂದು ಶಂಕರ ಹೇಳಿದ್ದ "ಇಸ್ಸಿಸ್ಸಿ ! ನಮ್ಮ ಜನ ನೋಡಿದರೆ ವಾಕರಿಕೆ ಬರುತ್ತೆ. ಇನ್ನೂ ಹಳೇ ಹಾಳು ಹವ್ಯಾಸ ! ಹಚ್ಚೆ ಹೊಯ್ಯಿಸಿ ಕೊಳ್ಳುವುದು ! ಕಿವಿ ಮೂಗು ಚುಚ್ಚಿಕೊಳ್ಳುವುದು ! ಆ ಕಿಲುಬು ಹತ್ತಿದ ಬೆಂಡೋಲೆ, ಮೂಗುತಿಗಳಿಲ್ಲದಿದ್ದರೆ ಆಗದೇ ? ಮೈಸೂರಿನಲ್ಲಿ ಓದುವ ಹುಡುಗಿಯರನ್ನು ನೋಡು. ಒಂದೇ ತರಹ ಬಟ್ಟೆ. ಒಡವೆ

ವಸ್ತುಗಳ ಸುಳಿವೇ ಇಲ್ಲ. ಎಷ್ಟು ಅಚ್ಚುಕಟ್ಟಾಗಿರುತ್ತಾರೆ ಗೊತ್ತಾ ? ನೀವಿನ್ನೂ ನಮ್ಮ ತಾತ ಮುತ್ತಾತಂದಿರ ಗೋಳೀ ಹಚ್ಚಿಕೊಂಡಿದ್ದೀರಿ. ಸ್ವಲ್ಪವಾದರೂ ನಮ್ಮ ನಾಜೂಕು ಬೇಡವೇ ?"

"ನಾಜೂಕು...? ಹಾಗೆಂದರೆ ?"

"ಅಯ್ಯೋ, ಹುಡುಗಿ" ಶಂಕರ ನಕ್ಕ.

"ಸರಿಯಾಗಿ ಹೇಳಪ್ಪಾ, ಹಾಗೆಂದರೆ ?"

ಬಾಲ ಸಹಜವಾದ ಮುಗ್ಧವಾಣಿ ಹೊರಬಿತ್ತು. ಕಣ್ಣರಳಿಸಿ ನಿಂತಳು ಹುಡುಗಿ.

"ಹೌದು ಮತ್ತೆ. ರೂಪ ಅಂದ ಚೆಂದ ಅಚ್ಚುಕಟ್ಟು ಯಾವುದೂ ಇಲ್ಲ. ಹೀಗಿದ್ದರೆ ಅಚ್ಚುಕಟ್ಟು ಬರುವುದಾದರೂ ಹೇಗೆ ? ನಿಜವಾಗಿಯೂ ಅಸಹ್ಯ !"

"ಓ ಒಳ್ಳೆ ದೊಡ್ಡ ಮನುಷ್ಯ ಕಣಪ್ಪ ! ಹೊಟ್ಟೆಗೆ ಹಿಟ್ಟಿಲ್ಲ ದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂವು ! ಎಂದಂತಾಯಿತು." ಕಿಲಕಿಲ ನಕ್ಕಳು ರಾಧೆ.

"ಪರವಾಯಿಲ್ಲ, ನಿನಗೆ ಗಾದೆ ಹೇಳುವಷ್ಟು ಗೊತ್ತಿದೆ ! ಕಾಲಕ್ಕೆ ತಕ್ಕಂತೆ ಸ್ವಲ್ಪ ನಾಜೂಕಾಗಿರುವುದನ್ನೂ ಕಲಿಯಬೇಕು ರಾಧಾ !"

"ನೋಡೋಣ, ನಿನಗೆ ಬರುವ ಹೆಣ್ಣು ಹೇಗಿರುತ್ತಾಳೆ ಅಂತ !"

"ಏ—ಹುಡುಗಿ ! ನಾನೇನೋ 'ಪಾಪ' ಅಂತ ನಾಜೂಕು ಹೇಳಿ ಕೊಟ್ಟರೆ ನನಗೇ ತಿರುಮಂತ್ರ ಹೇಳುತ್ತಿ !"

"ಹೌದಪ್ಪಾ ! ನಿನ್ನವಳು ನಾಜೂಕಾದರೆ ನಮಗೆ ನಾಜೂಕು ಬರುತ್ತೆ."

ಅಂದಿನ ಚಿತ್ರ ಸ್ಮರಣೆಯ ಹಾದಿಯಲ್ಲಿ ಸಾಗಿ ಹೋಗುತ್ತಲೂ ಸಣ್ಣ ನಗುವುಕ್ಕಿ ಬಂತು. ತಣ್ಣನೆಯ ತಂಗಾಳಿ ತಾನೇ ತಾನಾಗಿ ನುಗ್ಗಿ ಬಂತು. ಹಿಂದೆಯೇ ಮಲ್ಲಿಗೆಯ ನಲ್ಗಂಪು ಮನೆಯೊಳಗೆ ನುಗ್ಗಿ ಬಂತು.

...ಘಮ...ಘಮ....ಘಮ...ಘಮ !

ನೆರೆಮನೆಯಂಗಳದಲ್ಲಿ ಕುಂತಿ ಹಸುರು ಸೀರೆಯನ್ನು ಹಗ್ಗದ ಮೇಲೆ ಹರುವಿ ಹಾಕುತ್ತಿದ್ದಾಳೆ.

ನನಗೂ ಒಂದು ಅಂತಹ ಸೀರೆಯಿದ್ದಿದ್ದರೆ? ಬಾಲ ಸಹಜವಾದ ಹಿರಿಯಾಸೆ ಕಣ್ಣು ಕೆನ್ನೆಗಳಲ್ಲಿ ಮಿಂಚಿತು. ನೋಟ ಮತ್ತೆ ಮತ್ತೆ ಅದನ್ನೇ ನಿಟ್ಟಿಸಿತು.

ಶಂಕರ ಅಂದೇ ಅಂದಿದ್ದ "ನೀವೆಲ್ಲಾ ಮೈಸೂರಿಗೆ ಬರುವುದೆಂದು? ಮಹಾರಾಜರನ್ನು ಎಷ್ಟು ಬಾರಿ ನೋಡಿದರೂ ಕಣ್ದಣಿಯುವುದಿಲ್ಲ. ಸಾಕ್ಷಾತ್ ದೇವರೇ ಧರೆಗಿಳಿದು ಬಂದಿದ್ದಾರೋ ಎಂಬತಿದ್ದಾರೆ! ಸಾವಿರ ಜಾತ್ರೆ ನೋಡಿದರೂ ಮೈಸೂರು ದಸರ ನೋಡಿದಂತಾಗುವುದಿಲ್ಲ. ಓಹ್! ಅರಮನೆ, ಆನೆ, ಕುದುರೆ, ಕಾಲಾಳು, ಚಾಮುಂಡಿ ಬೆಟ್ಟ, ಮೃಗಾಲಯ ಇನ್ನೂ ಏನೆಲ್ಲಾ ಇವೆ. ನೀವು ಎರಡು ವಾರ ಇದ್ದರೂ ನೋಡಿ ಮುಗಿಸುವಹಾಗಿಲ್ಲ.

ಅವನೇನೋ ಹಾಗೆಂದ. ಆದರೆ ನನಗೊಂದು ಕಿರುಗೆಯೂ ಇಲ್ಲ. ವಲ್ಲಾ—ಯೋಚನೆ ಬಂದೊಡನೆ ಮುಖ ಕಿರಿದಾಯಿತು. ಕಿರುಗೆ ಇಲ್ಲ ದಿದ್ದರೆ ಹೋಗಲಿ. ಮೈಸೂರು ನೋಡಿ ಬಂದರೆ ಸಾಕು. ದೇವರಿದ್ದಂತೆ ಇದ್ದಾರೆ ರಾಜರು ಎಂದಿದ್ದಾನೆ ಶಂಕರ. ಅವನೊಂದಿಗೆ ಹೋಗಿದ್ದಿದ್ದರೆ ಎಲ್ಲಾ ತೋರಿಸುತ್ತಿದ್ದ.

ಎಳೆಯ ಮನಸ್ಸು ಶಂಕರ ಹೇಳಿದ ರೀತಿಯಲ್ಲಿ ಮೈಸೂರಿನ ಹಿರಿಮೆ ಗಳನ್ನು ಮೆಲುಕು ಹಾಕಿತು.

"ರಾಧಾ!"

ತಾಯಿಯ ದನಿಗೆ ಓಗೊಟ್ಟರೂ ಯಾಕೋ ಹೋಗಲು ಮನಸ್ಸಿಲ್ಲ. ನೋಟವನ್ನು ಸೀರೆಗಳು ಸೆರೆಹಿಡಿದಿದ್ದಂತೆಯೇ ಕಿವಿಗೆ ಕೋಗಿಲೆಯ ಮಧುರ ದನಿ ತಾಗಿತು.

ಕುಹೂ, ಕುಹೂ, ಕುಹೂ, ಕುಹೂ!

ಮಂದಮಾರುತದೊಡನೆ ಕೋಗಿಲಿಯ ಇನಿದನಿಯೂ ಮಲ್ಲಿಗೆಯ ನಲ್ಗಂಪೂ ಸರಸ ಹೂಡಿದ ಮಧುರ ವಾತಾವರಣವನ್ನು ಸವಿಯುತ್ತಾ ಮರು ದನಿ ಕೊಟ್ಟಳು ರಾಧಾ "ಬಂದೆ ಮಾ!"

"ಎಷ್ಟು ಬಾರಿ ಕರೆಯಲಿ ಹೇಳು? ಒಂದಿಷ್ಟು ಬೇಗನೆ ಬರ ಬಾರದೇ?"

ರಾಧಾ ಒಳಗೋಡಿದಳು. ತಾಯಿ ಅಡುಗೆಯ ಮನೆಯಲ್ಲಿರಲಿಲ್ಲ. ಒಲೆಯ ಮೇಲೆ ಅನ್ನ ಕೊತ ಕೊತ ಕುದಿಯುತಿತ್ತು. ಅಲ್ಲಿಂದ ಹಿತ್ತಿಲಿನ ಜಗಲಿಗೆ ಹೋದರೆ ಅಲ್ಲೂ ಇಲ್ಲ. ಹಿತ್ತಿಲ ಬಾಗಿಲಲ್ಲಿ ಕತ್ತು ಆನಿಸಿ ಅಂಗಳದ ಕಡೆ ನೋಡಿ "ಏನಮ್ಮಾ" ಎಂದಳು ರಾಧಾ.

"ಅನ್ನ ಬೆಂದಿರಬಹುದು ನೋಡು ರಾಧೀ !"

ಗಂಗಮ್ಮ ನೆಲಕ್ಕೆ ಗೋಣಿ ಚೀಲ ಹಾಸಿಕೊಂಡು ಅಕ್ಕಿ ಹಸನು ಮಾಡುತಿದ್ದಳು. ರಾಧಾ ಅನ್ನವನ್ನು ನೋಡುವ ಮೊದಲೇ ಮೈಯೆಲ್ಲ ಮನಸ್ಸಾಗಿ ಉತ್ಸುಕತೆಯಿಂದ ಕೇಳಿದಳು "ಸೋಮಣ್ಣನ ಮನೆಯಲ್ಲಿ ಜರೀ ಸೀರೆ ಬಿಸಿಲಿಗೆ ಹಾಕಿದ್ದಾರೆ ನೋಡಿದಿರಾ ?"

"ಇಲ್ಲವಲ್ಲಾ, ಅದೇಕೋ ?"

"ನನಗೂ ಗೊತ್ತಿಲ್ಲ."

"ಅದಿರಲಿ, ಅನ್ನ ಬೆಂದಿರಬಹುದು. ಮೊದಲು ನೋಡು."

ಅಡುಗೆ ಮನೆಗೋಡಿ ಒಂದೇ ಗಳಿಗೆಯಲ್ಲಿ ಹಿಂತಿರುಗಿದ ರಾಧಾ– "ಇನ್ನೂ ಬೇಯಲಿಲ್ಲ."

ಅಕ್ಕಿಯಿಂದ ಹೆಕ್ಕಿ ತೆಗೆದ ಕಲ್ಲುಗಳಲ್ಲಿ ಬೆರಳಾಡಿಸುತ್ತ ಕೇಳಿದಳು ಗಂಗಮ್ಮ "ನೀನು ಆಗಿನಿಂದ ಅಲ್ಲೇ ಏನು ಮಾಡು ತಿದ್ದೆ ?"

"ಏನಿಲ್ಲ....ಅವರು ಏಕೆ ಸೀರೆ ಒಣಹಾಕಿದ್ದಾರೆ ಕೇಳಿಕೊಂಡು ಬರಲೆ ?" ಆಸಕ್ತಿಯಿಂದ ಕೇಳಿದಳು ರಾಧಾ.

"ಎಲ್ಲಿಗಾದರೂ ಹೊರಟಿದ್ದಾರೇನೋ !" ಒಂದು ಗಳಿಗೆ ಯೋಚಿಸಿ "ಈಗಂತೂ ಮದುವೆ ಜಾತ್ರೆ ಯಾವುದೂ ಇಲ್ಲ. ಬಹುಶಃ ಪೆಟ್ಟಿಗೆ ಯಲ್ಲೇ ಇದ್ದೂ ಇದ್ದೂ ಮುಗ್ಗಿದ್ದುವೇನೋ. ಅದರಿಂದ ಬಿಸಿಲಿಗೆ ಹಾಕಿರ ಬಹುದು."

"ಕೇಳಿ ನೋಡುವೆ."

"ಬೇಗನೆ ಬಾ ರಾಧೀ ! ನೀರು ತುಂಬುವುದಿದೆ." ಮಂದಹಾಸ ಬೀರಿ ನುಡಿದಳು ಗಂಗಮ್ಮ.

ರಾಧಾ ಓಡಿದಳು. ಬೀಸುಗಾಳಿಯನ್ನು ಭೇದಿಸಿಕೊಂಡು ಓಡಿ

ಬಂದ ಅವಳನ್ನು ಮೆಟ್ಟಿಲ ಮೇಲೆ ಜೂಪಗೆ ಕುಳಿತಿದ್ದ ಕುಂತಿ ನಗುಮುಖ ದಿಂದ ಸ್ವಾಗತಿಸಿದಳು.

"ನೀನೇಕೆ ಓಡಿಬಂದೆ ಹೇಳಲೇ ?" ಕಣ್ಣರಳಿಸಿದಳು ಕುಂತಿ. "ಸೀರೆ ನೋಡಿಯೇ ಓಡಿಬಂದೆ. ಅಲ್ಲವೇ ?"

ಹೌದೆಂಬಂತೆ ತಲೆಯಾಡಿಸುತ್ತಾ "ಏಕೆ ಹರಡಿದ್ದಿ ಕುಂತಿ ?"

"ಓ ! ನಿನಗೆ ಗೊತ್ತಾ ? ನಾವು ಮೈಸೂರಿಗೆ ದಸರಾ ಹಬ್ಬಕ್ಕೆ ಹೊರಟ್ಟಿದ್ದೇವೆ ! ಮೊದಲು ಬಸ್ಸು ! ಅನಂತರ ರೈಲು ! ಗುಜು ಗುಜು ಪಯಣ ಗೊತ್ತಾ ?" ಮೈಯೆಲ್ಲಾ ಸಂತಸದ ಬೀಡಾಗಿ ಹೃದಯವು ಬಾಯಿಗೆ ಬರುವಂತೆ ನಿಗಿ ನಿಗಿ ನಲಿಯುತ್ತಾ ನುಡಿದಳು ಕುಂತಿ.

"ಆ್ಞ ! ನಿಜವಾಗಿ ?" ಅಚ್ಚರಿಯ ದನಿಯಲ್ಲಿ ಕೇಳಿದಳು ರಾಧಾ.

"ಹೌದು ರಾಧೀ ! ನಾವೆಷ್ಟು ಪುಣ್ಯ ಮಾಡಿದ್ದೆವೋ ! ಆ ದೇವರಿಗೆ ಎಷ್ಟು ಕೈಮುಗಿದರೂ ಸಾಲದು !" ಸಂತೋಷವೇ ತಾನಾಗಿ ನುಡಿದಳು ಕುಂತಿ.

"ನಿಜವಾಗಿಯೂ....? ಖಂಡಿತ ನಿಜ ಹೇಳು....ಹೋದ ಸಲವೂ ನೀನು ಹಾಗೇ ಅನ್ನುತ್ತಿದ್ದೆ !"

"ಸುಳ್ಳಾದರೆ ಸೀರೆ ಬಟ್ಟೆ ಹೊರ ಬರಬೇಕೆ ? ಅಮ್ಮ ರಾಗಿ ರೊಟ್ಟಿ ತಟ್ತಿದಾರೆ. ಹೋಗಿ ನೋಡು, ಬೇಕಾದರೆ."

"ನಮಗೂ ಹೋಗಿ ಬರುವ ಆಸೆ ಅಷ್ಟಿಷ್ಟಲ್ಲ."

"ಅಯ್ಯೋ, ಹುಡುಗಿ ! ನಿನ್ನ ಕಣ್ಣಲ್ಲೇಕೆ ನೀರು ? ಅತ್ತೇನು ಫಲ ?"

"ಏನಿಲ್ಲ ಕುಂತೀ !"

ಅವಳ ಕಣ್ಣು ತಪ್ಪಿಸಿಕೊಳ್ಳುವ ಸಲುವಾಗಿ ಸೀರೆಯ ಕಡೆ ನೋಟ ಹೊರಳಿಸಿದರೆ ಅದು ಮನವನ್ನು ನಿಜವಾಗಿಯೂ ಸೆಳೆಯಿತು. ಹತ್ತಿರ ಹೋಗಿ ಕೈಯಿಂದ ಮುಟ್ಟಿ ಮುಟ್ಟಿ ಮನಕ್ಕಾನಂದ ತಂದುಕೊಂಡಳು. ಹಳೆಯದಾದರೂ ಹಸುರು ಕಕ್ಕುತ್ತಿದೆ ಸೀರೆ !

"ನಿಜವಾಗಿಯೂ ಹೋಗುತ್ತೀರಾ ಕುಂತಿ ?" ಆಶಾಪೂರ್ಣ ಲೋಚನಗಳಿಂದ ನೋಡುತ್ತ ಕೇಳಿದಳು ರಾಧಾ.

"ಹೌದು ಕಣೆ!" ಎಂದ ಕುಂತಿ ರಾಧೆಯ ಕೈಯನ್ನು ಅದುಮಿ ಹಿಡಿದುಕೊಂಡು "ಅಪ್ಪ ನಾಲ್ಕು ದಿನ ಇರೋಣ ಅಂತಿದಾರೆ. ನಮಗೆ ಹತ್ತು ದಿನವೂ ಇರೋಣನೆಂದು ಮನಸ್ಸು. ಒಮ್ಮೆ ಹೋದೆವೆಂದರೆ 'ಜಪ್ಪಯ್ಯ' ಅಂದರೂ ಪೂರ್ತಿ ದಸರ ಮುಗಿಸದೆ ಹೊರಡುವುದಿಲ್ಲ. ಹತ್ತು ದಿನಗಳಿಗಾಗುವಷ್ಟು ರೊಟ್ಟಿ ಕಟ್ಟಿಕೊಂಡೇ ಹೊರಡುತಿದ್ದೇವೆ. ಏನಾಗುತ್ತೋ ನೋಡಬೇಕು."

ರಾಧಾ ಒಂದು ಘಳಿಗೆ ಮರವಟ್ಟಂತೆ ನಿಂತಳು. ಸುದ್ದಿ ಹೌದೋ ಅಲ್ಲವೋ ಅನುಮಾನವು ತೋರಿತು. ತನ್ನನ್ನು ಗೋಳು ಹುಯ್ಯಲೆಂದು ಸುಳ್ಳು ಹೇಳಿರಬಾರದೇಕೆ ? ಎಂಬ ಯೋಚನೆಯೂ ಮೂಡಿತು. ಸುದ್ದಿಯನ್ನು ಖಚಿತಪಡಿಸಿಕೊಳ್ಳಲು ಒಳಗಡೆ ಹೋಗಿ ಹಣಿಕಿದರೆ ಜಾನಕಮ್ಮ ಒಂದೇ ಸಮನೆ ರೊಟ್ಟಿ ತಟ್ಟುತಿದ್ದಾರೆ !

ಹೇಗೆ ಒಳ ಹೋದಳೋ ಹಾಗೆಯೇ ಹೊರಬಂದಳು. ರಾಧಾ ಉಕ್ಕಿಬಂದ ದುಃಖದ ಒತ್ತಡದಿಂದ ಮುಖ ಕೆಂಪು ತಳೆಯಿತು. ಅವಳ ಸ್ಥಿತಿಯನ್ನು ನೋಡಿ ಅನುನಯದಿಂದ ನುಡಿದಳು ಕುಂತಿ "ಹಗಲೂ ರಾತ್ರಿ ಮುದ್ದಣ್ಣನಿಗೆ ಕಾಟ ಕೊಡು. ನಮಗೀ ಭಾಗ್ಯ ಸುಮ್ಮನೆ ಬಂತೇ? ನಾವೆಲ್ಲರೂ ವರ್ಷಾನುಗಟ್ಟಲೆ ಬ್ರಹ್ಮಾಂಡ ಕಾಟ ಕೊಟ್ಟು ಬಂದಿದೆ. ಇಲ್ಲದಿದ್ದರೆ ನಾವೂ ಆಕಾಶ ನೋಡಬೇಕಾಗಿತ್ತು !"

ರಾಧಾ ಏನೋ ಹೇಳಬಯಸಿದ್ದರೂ ತುಟಿಗಳು ಬಿರಿಯಲಿಲ್ಲ. ಸಣ್ಣಗೆ ಬೆಳ್ಳಿಯ ಗೆರೆಯಂತೆ ನೀರಾಡಿತು.

"ಅಳಬೇಡ. ಮುದ್ದಣ್ಣನನ್ನು ಕೇಳು. ಇಷ್ಟಕ್ಕೂ ಇಲ್ಲಿ ಅಳುವುದಕ್ಕಿಂತ ಮುದ್ದಣ್ಣನ ಮುಂದೆ ಅತ್ತರೆ ಪ್ರಯೋಜನವುಂಟು !"

ನಿಜ.......

ಕುಂತಿಗೆ ಹೇಳುವುದನ್ನು ಮರೆತು ರಾಧಾ ಗುಡುಗುಡು ಓಡಿದಳು.

"ಅಮ್ಮಾ!"

ಗಂಗಮ್ಮ ಓಗೊಡುವುದರೊಳಗಾಗಿ ಮಗಳು ಬಳಿಗೆ ಚಿಮ್ಮಿ ಬಂದಾಗಿತ್ತು. ಕಣ್ಣು ಮೂಗು ಕೆನ್ನೆಗಳಲ್ಲಿ ಚಂದನವೊರೆದಂತೆ ರಂಗು ಮೂಡಿದೆ ಕಣ್ಣುಗಳಲ್ಲಿ ಹನಿಗಳು ಫಳ ಫಳ ಹೊಳೆಯುತ್ತಿವೆ. ಅವಳು

ಓಡಿಬಂದ ರೀತಿಯನ್ನು ಅಲ್ಲಿಂದಲೇ ಗಮನಿಸಿದಾಗ ಯಾವುದೋ ಸಂತೋಷ ವಾರ್ತೆ ನುಗ್ಗಿ ಬರುತ್ತಿದೆ ಎನಿಸಿತು. ಆದರೆ ದುಃಖದ ಮೂಟೆಯಾಗಿ ಬಂದಿದ್ದಾಳೆ ರಾಧಾ.

"ಏನಾಯ್ತು ರಾಧಿ ? ಬಿದ್ದೆಯಾ ಹೇಗೆ ?"

"....ಊ...ಊ....ಊ...ಊ !"

"ಏನು ಹೇಳು ...ಏಕೆ ಅಳುತ್ತಿದ್ದಿ ? ಎಲ್ಲಿ ಬಿದ್ದೆ ?"

"ಬೀಳಲಿಲ್ಲ....ಏನಿಲ್ಲ" ಸಿಡುಕಿದಳು ರಾಧಾ.

"ಮತ್ತೇನು ?"

"ಅವರೆಲ್ಲಾ ದಸರಕ್ಕೆ ಹೊರಟಿದ್ದಾರೆ...ಊ ..ಊ"

ಹೌದಾ ?"

"ನಾವು ಹೋಗುವುದು ಯಾವಾಗಮ್ಮ ?"

"ನನ್ನನ್ನು ಕೇಳಿದರೆ ನಾನು ಏನು ಹೇಳಿಯೇನು ?"

"ಅಪ್ಪನಿಗೆ ಹೇಳಿ ನೋಡಿರಿ....ನಾವು ಹೋಗಿ ಬರೋಣ."

"ನಾನು ಹೇಳಿದರೆ ಅವರು ಒಪ್ಪುವುದುಂಟೆ ?"

"ಅಮ್ಮಾ !" ಗೋಗರೆದಳು ರಾಧಾ.

"ನಾನು ಹೇಳುವುದಕ್ಕಿಂತ ನೀವು ಹೇಳಿದರೆ ಬೆಲೆ ಹೆಚ್ಚು."

ತಾಯಿಯ ಯಾವ ಬೇಡಿಕೆಗೂ ಅಪ್ಪ 'ಅಸ್ತು' ಎನ್ನುತ್ತಿರಲಿಲ್ಲವಾದುದರಿಂದ ತಾನೇ ಹೇಳುವುದು ಒಳ್ಳೆಯದು ಎನ್ನಿಸಿದರೂ ಪ್ರಸ್ತಾಪಿಸಲು ತುಂಬ ಭಯ. ಕಂಬನಿ ಮಿಡಿದು ಗೋಗರೆದಳು ರಾಧಾ. "ನೀವೇ ಹೇಳಿ."

ಗಂಗಮ್ಮ ಎಷ್ಟೋ ಬಾರಿ...."ನಾವು ತಪ್ಪು ಮಾಡಿ ಹುಟ್ಟಿದ್ದೇವೆ ರಾಧೀ" ಎನ್ನುತಿದ್ದುದುಂಟು. ಅವಳು ಹಾಗೆಂದರೂ ಬಾಲಿಶವಾದ ಬುದ್ಧಿಗೆ ಅದೇನೆಂಬುದು ಇದುವರೆವಿಗೂ ಅರ್ಥವಾಗಿರಲಿಲ್ಲ. ಸನ್ನಿವೇಶ ಮನವನ್ನು ಅರಳಿಸಿತು. ಈಗ ನಿಜವಾಗಿಯೂ ನಾವು ತಪ್ಪು ಮಾಡಿದ್ದೇವೆ ಎಂದುಕೊಂಡಳು ರಾಧಾ. ಕಣ್ಣುಗಳು ತುಂಬಿ ಬಂದುವು.

"ಇನ್ನೇನು ಅವರು ಊಟಕ್ಕೆ ಬರುವ ಹೊತ್ತು. ಉಂಡು ಕುಳಿತಾಗ ಕೇಳು ರಾಧೀ !"

ರಾಧಾ ಏನೂ ಹೇಳದೆ ಕಿಟಕಿಯ ಬಳಿಗೆ ಹೋದಳು. ನೋಟ ನೆರೆಮನೆಯ ಕಡೆ ಹೊರಳಿತು. ಕಿಟಕಿಯಲ್ಲಿ ಮುಖ ಕಾಣಿಸುತ್ತಲೂ ಅಲ್ಲಿಂದಲೇ ಕರೆದಳು ಕುಂತಿ "ಬಾ ರಾಧೀ !"

ರಾಧೆಗೆ ದನಿ ಕಿವಿಗೆ ಬಿದ್ದುದೇ ಸಾಕಾಗಿತ್ತು. ದುಡು ದುಡು ಓಡಿದಳು.

"ಏನಂದ್ರು ಮುದ್ದಣ್ಣ ?"

"ಅವರಿನ್ನೂ ಮನೆಗೆ ಬಂದಿಲ್ಲ. ಬಂದರೂ ಏನಂತಾರೋ ನನಗದೇ ಭಯ."

"ಒಪ್ಪುವವರೆಗೂ ಬಿಡಬೇಡ."

ಅಗಲವಾದ ಕಣ್ಣುಗಳನ್ನು ಇನ್ನಷ್ಟು ಅರಳಿಸಿ "ಸಧ್ಯ, ಅಪ್ಪ ಒಪ್ಪಿದರೆ ಸಾಕಾಗಿದೆ."

"ನಮಗಿರುವುದು ಈ ಎರಡೇ ಸೀರೆ. ಇವುಗಳಲ್ಲೇ ಹತ್ತು ದಿನ ಕಳೆಯಬೇಕು ರಾಧೀ !"

"ಹೋಗಲಿ ಬಿಡು. ಅವು ದಸರಕ್ಕಿಂತ ಹೆಚ್ಚಲ್ಲ."

"ನಿಜ......"

"ನೀವು ಎಷ್ಟೆಂದರೂ ಪುಣ್ಯವಂತರು........!" ಮುಸು ಮುಸು ಅತ್ತಳು ರಾಧಾ.

"ಸುಮ್ಮನಿರು. ಈಗಲೇ ಅತ್ತು ಎಲ್ಲಾ ಪೂರೈಸಬೇಡ. ಮುದ್ದಣ್ಣ ಬಂದಾಗ ಪುನಃ ಅಳುವುದಿದೆ. ಆಗ ಹೀಗೆ ಮೆಲ್ಲಗೆ ಮುಸು ಮುಸು ಅತ್ತರೆ ಸಾಲದು. ಜೋರಾಗಿ ಅಳಬೇಕು !"

ಇಬ್ಬರ ಮುಖದಲ್ಲೂ ನಗುವಿನ ಚಿಲುಮೆ ಉಕ್ಕಿ ಹರಿಯಿತು. ಅಳುತ್ತಳುತ್ತಲೇ ನಕ್ಕಳು ರಾಧಾ. ಕಚಗುಳಿಯಿಟ್ಟಂತೆ ನಗುತ್ತ ನುಡಿದಳು ಕುಂತಿ.

"ನಮ್ಮ ಕೈಯಲ್ಲಿ ದುಡ್ಡೇ ದುಗ್ಗಾಣಿಯೆ ? ಅಥವಾ ನಾವೇನು ಗಂಡುಮಕ್ಕಳೇ ಹಾಗೇ ಹೋಗೋಣ ಅನ್ನಲಿಕ್ಕೆ ? ಹೋಗಿ ನೋಡಬೇಕು ಅಂದರೆ ಕಾಡಿ ಬೇಡುವುದೊಂದೇ ದಾರಿ. ಎಷ್ಟು ಕೊಳಗ ಕಣ್ಣೀರು ಕರೆದರೆ ಅಷ್ಟು ಬದುಕು ಸರಾಗ ?"

"ಸರಿ, ಬಿಡಮ್ಮಾ. ನಿನಗೇನೋ ತಮಾಷೆ! ನನಗೆ ಸಂಕಟ."

"ಆ ಸಂಕಟ ಪರಿಹಾರಕ್ಕಾಗಿಯೇ ನಾನು ಉಪಾಯ ಹೇಳಿ ಕೊಟ್ಟಿದ್ದು."

ಇಬ್ಬರೂ ಪುನಃ ನಗೆಗಡಲಲ್ಲಿ ಮುಳುಗಿದರು.

"ಶಂಕರ ಅಂದೇ ಹೇಳಿದ್ದ. "ಮಹಾರಾಜರು ಒಡವೆ-ವಸ್ತ್ರ ತೊಟ್ಟು ಹೊರಟರು ಅಂದರೆ ಸಾಕ್ಷಾತ್ ದೇವರೇ ಹೊರಟಂತೆ ಕಾಣು ತ್ತದೆ ಅಂತ. ನೀವೆಲ್ಲಾ ಎಷ್ಟು ಪುಣ್ಯ ಮಾಡಿದ್ದೀರೋ ಕಣ್ತುಂಬ ನೋಡಿಕೊಂಡು ಬರುತ್ತೀರಿ!" ಗದ್ಗದ ದನಿಯಲ್ಲಿ ಬಿತ್ತರಿಸಿದಳು ರಾಧಾ.

"ಹುಲಿ, ಕರಡಿ, ಸಿಂಹ, ಹಾವುಗಳೂ ಇವೆಯಂತೆ! ಸಾಕುವ ವರಿಗೆ ಯಮ ಧೈರ್ಯವೇ ಇರಬೇಕು. ಅಬ್ಬಬ್ಬ! ಎಷ್ಟೊತ್ತಿಗೆ ಎಲ್ಲಾ ನೋಡಿಯೇನು ಎನಿಸುತ್ತಿದೆ."

ಅವಳು ಹಾಗೆನ್ನುತ್ತಿದ್ದರೆ ಇವಳಿಗೆ ಅಳು.

"ಮತ್ತೇಕೆ ರಾಧೀ? ಎಲ್ಲಾ ದೇವರ ಮೇಲೆ ಭಾರ ಹಾಕಿ ಮುದ್ದಣ್ಣನಿಗೆ ಕಾಟ ಕೊಡು."

ರಾಧಾ ಮಾತಾಡಲಿಲ್ಲ. ಹೂ ಮುಖ ಬಾಡಿತು.

"ನಿನ್ನ ಮುಖ ನೋಡುವುದಕ್ಕಾಗುವುದಿಲ್ಲ ರಾಧಿ. ಒಂದ್ಸಲ ಅಳುತ್ತಿ ಇನ್ನೊಂದ್ಸಲ ನಗುತ್ತಿ. ನಿನಗಿನ್ನೂ ಹನ್ನೆರಡು ವರುಷ. ನನ್ನಷ್ಟು ಬೆಳೆಯುವಾಗ ನಿನಗೂ ನೋಡುವ ಕಾಲ ಬಂದೀತು. ಏಕೆ ದುಃಖ? ಬಿಡು, ಬಿಡು ನೀವೇನು ಕೊಳ್ಳೆ ಹೊಡೆಯಲಿಲ್ಲ. ದೊಂಬಿ ಎಬ್ಬಿಸಲಿಲ್ಲ. ಮತ್ತೇಕೆ ದೇವರು ಕೊಡ? ಧರ್ಮ ಕರ್ಮ ಅಷ್ಟೂ ನಡೆಸುವುದಿಲ್ಲವೇ ಈ ಕಾಲದಲ್ಲಿ?" ದನಿ ಎದೆಯಾಳದಿಂದ ಹರಿದು ಬಂತು.

"ಓ—ಹಾಗಾದರೆ ?

"ನಿನ್ನ ವಯಸ್ಸೆಷ್ಟು ಕುಂತಿ ?"

"ಈ ದೀಪಾವಳಿಗೆ ಹದಿನಾರು ತುಂಬುತ್ತದಂತೆ. ನಾನೂ ಅಗ್ರಹಾರ ಜೋಯಿಸರ ಮಗಳೂ ಒಂದೇ ದಿನ ಹುಟ್ಟಿದ್ದು. ರುಕ್ಮಿಣಿ

ಯಮ್ಮ ಮೊನ್ನೆ ಮೊನ್ನೆ ಹೇಳಿದರು ನನಗೆ ಹದಿನಾರು ತುಂಬುತ್ತದೆ ಅಂತ. ಹಾಗಾದರೆ ನನಗೂ ಹದಿನಾರಷ್ಟೆ ?"

"ಓ"

"ನಿನಗಿನ್ನೂ ಬೇಕಾದಷ್ಟು ಕಾಲವಿದೆ. ಎಂದಾದರೂ ದೇವರು ಒಲಿದಾನು ಸುಮ್ಮನಿರು." ಸಂತೈಸಿದಳು ಕುಂತಿ. ದನಿಯಲ್ಲಿ ಸಕ್ಕರೆಯ ಸವಿಯಿತ್ತು.

ಕುಹೂ‌ಊಊ !

"ಅದರ ದನಿ ಎಷ್ಟು ಮುದ್ದಾಗಿದೆ ಅಲ್ವಾ ?"

ಬೇಲಿಡೆಗೆ ಸೆಳೆದಳು ಕುಂತಿ.

"ನಾನು ಯೋಚಿಸುವುದೇನು ಗೊತ್ತಾ ?"

"ಏನು ಹೇಳು."

"ನಾನೂ ಹಕ್ಕಿಯಾಗಿದ್ದಿದ್ದರೆ ಅಂತ."

"ಗಿಡಗನ ಪಾಲಾಗುತ್ತಿದ್ದೆ !"

ಇಬ್ಬರ ಮುಖದಲ್ಲೂ ಎಳೆ ನಗು ನಲಿದಾಡಿತು.

ಹೂಮನಸ್ಸಿಗೆ ನಮ್ಮಲ್ಲೂ ಹಿರಿಯ ಗಿಡಗಗಳಿವೆ ಎಂಬುದರ ಅರಿವಾಯಿತೇನೋ. ಮುಖಮುದ್ರೆ ಗಂಭೀರವಾಯಿತು.

"ನಾವು ಈ ಜನ್ಮದಲ್ಲಿ ಪುಣ್ಯ ಮಾಡಿದರೆ ನಮಗೆ ಮುಂದಿನ ಜನ್ಮದಲ್ಲಾದರೂ ದೇವರು ಮೈಸೂರು ದಸರಾ ತೋರಿಸಿಯಾನೇನೋ !"

"ಅಯ್ಯೋ....ಪಾಪ ! ಮುಂದಿನ ಜನ್ಮದ ಕತೆ ಮುಂದಿನ ಜನ್ಮಕ್ಕೆ. ಈ ಜನ್ಮದ್ದು ಈ ಜನ್ಮಕ್ಕೆ. ಈ ಜನ್ಮದಲ್ಲೊಮ್ಮೆ ಮೈಸೂರು ದಸರ ನೋಡಿಬಿಡಿ. ಮುದ್ದಣ್ಣ ಸಾಮಾನ್ಯಕ್ಕೆ ಒಪ್ಪುವವನಲ್ಲ. ಒಪ್ಪುವ ತನಕ ಬಿಡದೆ ಕಾಟ ಕೊಡು. ಅದಕ್ಕಿಂತ ಉತ್ತಮ ಮದ್ದು ಇಲ್ಲವೇ ಇಲ್ಲ."

"ನಮ್ಮಪ್ಪನಿಗೆ ದೇವರೇ ಒಳ್ಳೆ ಬುದ್ಧಿ ಕೊಡಲಿ !" ಗಗನದೆಡೆಗೆ ನಿಟ್ಟಿಸಿ ನೋಡಿ ಹೂ ಹಸ್ತಗಳನ್ನು ಜೋಡಿಸಿದಳು ರಾಧಾ.

ಕುಂತಿ ಅವಳ ತಲೆಯನ್ನು ನೇವರಿಸಿ "ಪಾಪ ರಾಧಿ !"

"ಅಪ್ಪ ಮನೆಗೆ ಬರುವ ಹೊತ್ತು, ಹೋಗಿ ಕೇಳುವೆ. ನಾನಿನ್ನೂ ಊಟ ಮಾಡಲಿಲ್ಲ. ಅಮ್ಮ ಕಾಯುತ್ತಿರಲಿಕ್ಕೂ ಸಾಕು."

ರಾಧಾ ಕುಂತಿಗೆ ಹೇಳಿಕೊಂಡು ಒಂದೇ ಉಸುರಿಗೆ ಮನೆಯ ಕಡೆ ಧಾವಿಸಿದಳು. ಮಣ್ಣಿನ ಗೋಡೆಯ ಸೊಟ್ಟಪಟ್ಟ ಮನೇ ಸ್ವಾಗತ ನೀಡಿತು.

ಬೀಸುಗಾಳಿ ಜೋರಾಗಿ ಬೀಸುತಿತ್ತು. ಹಗ್ಗದ ಮೇಲಿನ ಸೀರೆಗಳು ಹಾಗಿಂದ್ಹೀಗೆ ತೂರಾಡುತಿದ್ದುವು. ಅಂಗಳಕ್ಕೆ ಕಾಲಿಡುತ್ತಲೂ ಮಲ್ಲಿಗೆಯ ಕಂಪು ಮೂಗಿಗೆ ಧಾಳಿಯಿಟ್ಟಿತು.

....ಘಮ...ಘಮ...ಘಮ...ಘಮ !

ಂ ಂ ಂ ಂ ಂ

ಕುಂತಿಯ ನುಡಿ ಕಿವಿಯಲ್ಲಿ ಮರ್ಮರಿಸಿತು.

...ನಿನಗಿನ್ನೂ ಹನ್ನೆರಡು ವರ್ಷ. ನನ್ನಷ್ಟು ಬೆಳೆಯುವಾಗ ನಿನಗೂ ನೋಡುವ ಕಾಲ ಬಂದೀತು. ಏಕೆ ದುಃಖ ? ಬಿಡು, ಬಿಡು. ನೀನೇನು ಕೊಳ್ಳಿ ಹೊಡೆಯಲಿಲ್ಲ. ದೊಂಬಿ ನಡೆಸಲಿಲ್ಲ. ಮತ್ತೇಕೆ ದೇವರು ಕೊಡ ? ಧರ್ಮ ಕರ್ಮ ಅಷ್ಟೂ ನಡೆಸುವುದಿಲ್ಲವೇ...

ಹಾಗೆಂದರೆ ಕೊನೆಯ ಪಕ್ಷ ನಾಲ್ಕೈದು ವರ್ಷಗಳೊಳಗಾಗಿ ನೋಡುವ ಅವಕಾಶವಾದರೂ ಬರಲೇಬೇಕಲ್ಲ ? ಉಹೂ, ಅಷ್ಟು ಕಾಲ ಕಾಯುವುದೆಂದರೆ ಸಾಧ್ಯವೇ ಇಲ್ಲ. ನಾನಂತೂ ನೋಡಿಯೇ ತೀರಬೇಕು.

ಅಕ್ಕಿಯನ್ನು ಹರಿವೆಯಲ್ಲಿ ತುಂಬಿಡುತಿದ್ದ ಗಂಗಮ್ಮ ಇತ್ತಲೇ ನೋಡುತ್ತಾ "ರಾಧೀ ? ನಿನ್ನ ಮುಖ ಏಕೆ ಹೀಗಾಗಿದೆ ? ಬಾಳೆಯೆಲೆ ಬಾಡಿಸಿದಂತಾಗಿದೆಯೆಲ್ಲಾ ?"

"ಏನಿಲ್ಲ." ಮುಖವನ್ನ ತೀಡಿಕೊಳ್ಳುತ್ತಲೇ ನುಡಿದಳು ರಾಧಾ "ಅವರೆಲ್ಲಾ ಮೈಸೂರಿಗೆ ಹೊರಟಿದ್ದಾರೆ. ನಾವೂ ಹೋಗೋಣ, ಅಮ್ಮ."

"ನನ್ನ ಬಳಿ ಹೇಳಿದರೆ ಏನು ಪ್ರಯೋಜನ ? ಹೇಳುವುದನ್ನೆಲ್ಲಾ ಅಕ್ಕನ ಬಳಿ ಹೇಳಮ್ಮ. ಅವರೊಪ್ಪಿದರೆ ಹೊರಡುವುದು ಎಷ್ಟೊತ್ತಿನ ಕೆಲಸ ?"

"ಅಮ್ಮ..." ನುಡಿ ಹೊರಬೀಳುವುದರೊಳಗಾಗಿ ದುಃಖದ ಒತ್ತಡದಿಂದ ಮುಖ ಕೆಂಪು ತಳೆಯಿತು. ಕಣ್ಣುಗಳಲ್ಲಿ ರಂಗು ಮೂಡಿ ಹನಿಗಳು ತುಳುಕಾಡಿದುವು.

"ಅವರು ಪುಣ್ಯವಂತರು—" ಮಾತು ಅರ್ಧಕ್ಕೆ ತುಂಡುಗಡಿಯಿತು. ಗಂಗಮ್ಮ ಅಕ್ಕಿಯನ್ನು ತುಂಬಿಟ್ಟು ಕತ್ತೆತ್ತಿ ಮಗಳ ಕಡೆ ನೋಡಿದಾಗ ಅವಳು ಹಿತ್ತಿಲಿಗೆ ಹೋಗಿಯಾಗಿತ್ತು. ತಣ್ಣೀರಿನಲ್ಲಿ ಮುಖ ಮಜ್ಜನ ಮಾಡಿಕೊಂಡು ಬಂದರೂ ಕಂಬನಿಯಾರಿರಲಿಲ್ಲ.

"ಏನು ಮಾಡೋಣ ರಾಧೀ ? ನನಗೂ ಹೋಗಿ ಬರೋಣವೆಂಬ ಆಸೆ ಬಹಳವುಂಟು. ಹಾಗೆಂದು ಅದನ್ನೇ ಪಟ್ಟು ಹಿಡಿದರೆ ಆದೀತೇ ?"

ಹೇಗೂ ತಮ್ಮ ಅಭಿಲಾಷೆಗೆ ಪುರಸ್ಕಾರ ದೊರೆಯುವುದಿಲ್ಲವೆಂಬುದನ್ನು ಎಂದೋ ಮನಗಂಡಿದ್ದ ಗಂಗಮ್ಮ ಮಗಳ ಹುಚ್ಚು ಆಸೆಯ ಪ್ರವಾಹಕ್ಕೆ ಅಡ್ಡಗಟ್ಟೆ ಹಾಕಿದಳು. ಹುಡುಗಿ ದಿನವೆಲ್ಲಾ ಅಳುತ್ತಾ ಕೂತರೇನು ಗತಿ ಎಂಬ ಭಯವು ಮನವನ್ನು ಆವರಿಸಿತ್ತು. ಪುನಃ ಸಂತೈಸುವ ಧಾಟಿಯಲ್ಲಿ ನುಡಿದಳು. "ಅವರು ಬಂದನಂತರ ಕೇಳಿದರಾಯಿತು. ಈಗೊಂದಿಷ್ಟು ಊಟ ಮಾಡು."

ಗಂಗಮ್ಮ ಮಗಳನ್ನು ಮುದ್ದಿಸಿ ಕಂಬನಿಯನ್ನು ಸೆರಗಿನಿಂದ ತೀಡಿ ಸಂತೈಸಿದಳು.

"ಈ ಸಲವೇ ಹೋಗೋಣ."

"ಮೊದಲು ಊಟ ಮಾಡು....ಅನಂತರ ಎಲ್ಲಾ."

"ಅಮ್ಮಾ....ಉ...ಊ...."

"ದಸರೆ ಅಂದರೆ ಯಾರಿಗೆ ಬೇಡ ? ಕರಕೊಂಡು ಹೋಗುವವರಿದ್ದರೆ ಈಗಲೇ ಹೋಗೋಣ ಏಳು...ಅದಕ್ಕೂ ನಾವು ಪಡೆದುಕೊಂಡು ಬಂದಿರಬೇಕು ರಾಧೀ !"

ಮಗಳು ಸಮಾಧಾನಗೊಳ್ಳದಿದ್ದರೂ ತಾಯಿ ಬಿಡಲಿಲ್ಲ. ಮುದ್ದುಗೈದು ಬಲವಂತದಿಂದ ಉಣಬಡಿಸಿದಳು. ನೀರು ಕುಡಿದು ತುತ್ತು ನುಂಗಿದಳು ರಾಧಾ. ಮಗಳ ಸ್ಥಿತಿ ತಾಯಿಯ ಕಣ್ಣುಗಳಲ್ಲೂ ಕಂಬನಿ

ತರಿಸಿತ್ತು. ಕತ್ತಲೆಯ ಪರಿಸರದಲ್ಲಿ ಮಗಳ ಗಮನಕ್ಕದು ಬೀಳದಂತೆ ಹಿಡಿಕೊಂಡಳು ಗಂಗಮ್ಮ.

ವರ್ಷೇ ವರ್ಷೇ ಕಾಡಿಬೇಡಿದರೂ ಮುದ್ದಣ್ಣ ಒಪ್ಪದುದರಿಂದ ಮೈಸೂರನ್ನು ನೋಡುವಾಸೆಯು ಮೊಳಕೆಯಲ್ಲೇ ಮೋಟಕಾಗಿ ಪುನಃ ಕಾಡಿ ಬೇಡುವ ಹವ್ಯಾಸ ಬೇಡವಾಗಿತ್ತು ಗಂಗಮ್ಮನಿಗೆ. ಶಂಕರ ಬಾಯಿ ತುಂಬ ಮೈಸೂರನ್ನು ಬಣ್ಣಿಸುವಾಗ ಆನಂದದಿಂದ ಕುಳಿತು ಕೇಳುವುದೊಂದೇ ದಾರಿ. ಆದರೆ—ರಾಧಾ ?

ತಾಯಿ ತನ್ನ ಆಸೆಗೆ ಪುಷ್ಟೀಕರಣ ಕೊಡದಿದ್ದುದರಿಂದ ರಾಧೆಗೆ ಏನೋ ಒಂದು ಬಗೆಯ ಸಿಟ್ಟು, ನಿರಾಸೆ, ಕಿನಿಸಿಗೆ, ಬೇಸರ, ದುಃಖ ದುಗುಡ. ಹೇಗೋ ಹಾಗೆ ಊಟದ ಶಾಸ್ತ್ರವನ್ನು ಮಾಡಿ ಮುಗಿಸಿದಳು. ಹೊಟ್ಟೆಯ ಹಸಿವೆ ಇಲ್ಲದಿದ್ದರೆ ಅದೂ ಬೇಡವಾಗುತಿತ್ತೇನೋ. ಕೈತೊಳೆದು ಉಟ್ಟ ಲಂಗದಿಂದಲೇ ಕೈಬಾಯಿ ಹಿಡಿಕೊಂಡು ಕೇಳಿದಳು ರಾಧಾ "ಅಪ್ಪನಿಗೆ ಖಂಡಿತವಾಗಿಯೂ ಹೇಳುತ್ತೀರಾ ?"

"ಅವರು ಸಮಾಧಾನವಾಗಿದ್ದಾಗ ನೀನೇ ಮೊದಲು ಹೇಳು. ಏನೆನ್ನುತ್ತಾರೋ ನೋಡೋಣ. ಅನಂತರ ಬೇಕಾದರೆ ನಾನು ಹೇಳುವೆ."

"ಅಮ್ಮಾ !" ಗೋಗರೆದಳು ರಾಧಾ.

"ಒಂದು ವೇಳೆ ನಾನು ಕಳುಹಿಸಿ ಎಂದರೂ ಅವರು ಕಳುಹಿಸಿಯಾರೇ ? ಸುಮ್ಮನೆ ಇಲ್ಲದ್ದು ಮನಸ್ಸಿಗೆ ಹಚ್ಚಿಕೊಳ್ಳಬೇಡ. ತೇರು ತೌರು, ಹಬ್ಬ ಹುಣ್ಣಿಮೆಗಳಿಗೆ ನಮಗೆ ಅವಕಾಶವಿಲ್ಲ. ಇನ್ನು ಮೈಸೂರೆಲ್ಲಿ ? ಭಗವಂತ ಕಣ್ತೆರೆದಾಗ ಹೋಗಿ ಬರೋಣ. ಈಗಿಂದೀಗಲೇ ಎಂದರೆ ಹೇಗಾದೀತು ಹೇಳು."

ಹೊರ ಅಂಗಳದಲ್ಲಿ ಮುದ್ದಣ್ಣ ಕೆಮ್ಮಿದ ಸದ್ದು ಕೇಳಿಬಂತು. ಗಂಗಮ್ಮ ಒಡನೆ ಬೆಳ್ಳಗೆ ಬೆಳಗಿದ ತಂಬಿಗೆಯಲ್ಲಿ ನೀರು ತಂದು ಅಣಿ ಮಾಡಿದಳು. ಮುದ್ದಣ್ಣ ಒಂದಾದ ಮೇಲೊಂದರಂತೆ ನಾಲ್ಕಾರು ತಂಬಿಗೆ ನೀರು ಸುರಿದು ಕೈಕಾಲು ತೊಳೆದುಕೊಂಡು ಉಸ್ಸೆನ್ನುತ್ತಾ ಉಣ್ಣಲು ಕುಳಿತ. ಅನ್ನ, ಹುಳ್ಳಿಕಟ್ಟು, ಉಪ್ಪಿನಕಾಯಿ ಒಂದೆರಡು ತುತ್ತು ನುಂಗಿ ಮುಖದಲ್ಲಿ ಅಸಮಾಧಾನ ಸೂಚಿಸಿ "ಒಂದಿಷ್ಟು ಚಟ್ನಿ

ಅರೆಯುಬಾರದಿತ್ತೆ ? ಏನು ಮಾಡುತಿದ್ದೆ ಇಷ್ಟೊತ್ತು ?—ಗದ್ದೆಗೂ ಬರಲಿಲ್ಲ ?"

"ಅಕ್ಕಿ ಮಾಡುವುದಿತ್ತು. ಬಿಡುವಾಗಲಿಲ್ಲ—" ಏನೋ ಹೇಳಲು ತೊಡಲಿನಳು ಗಂಗಮ್ಮ.

"ಬೆಳಗಿನಿಂದ ಕಡಿದಿದ್ದೇನು ?" ಮುದ್ದಣ್ಣ ಸಿಟ್ಟಿನಿಂದ ತಟ್ಟೆಯನ್ನತ್ತ ನೂಕಿ ಎದ್ದು ಹೋದ.

ನೋಡಿದರೆ ನಾಲ್ಕು ತುತ್ತೂ ಉಂಡಿಲ್ಲ. ಬಟ್ಟಲನ್ನು ಬದಿಗಿಟ್ಟು ಗಂಗಮ್ಮ ಓಡಿಹೋಗಿ ಗಿಡದಿಂದ ನಾಲ್ಕು ಹಸಿಮೆಣಸಿನಕಾಯಿ ಕಿತ್ತು ಖಾರವಾಗಿ ಚಟ್ನಿ ರುಬ್ಬಿ ಅಣಿಮಾಡಿದರೂ ಇನ್ನು ಉಣ್ಣುತ್ತಾರೋ ಇಲ್ಲವೋ ಎಂಬ ತಳಮಳ ತುಂಬಿಕೊಂಡು ಊಟಕ್ಕೆ ಕರೆದಳು.

ಬೆಳಗಿನ ರಭಸವದಿಂದ ಒಂದೇ ಸಮನೆ ಕೈಹಚ್ಚಿದ್ದರೂ ಕೆಲಸ ಮುಗಿದಿರಲಿಲ್ಲ. ಕೆಲಸಕ್ಕೆ ಹೋಗುವಾಗ ಮುದ್ದಣ್ಣ ಕಳೆ ಕೀಳಲು ಗದ್ದೆಗೆ ಬರಹೇಳಿ ಹೋಗಿದ್ದ. ಅಕ್ಕಿ ಕೇರುವುದಿದ್ದುದರಿಂದ ಗದ್ದೆಗೆ ಹೋಗಲೂ ಆಗಲಿಲ್ಲ. ಏನು ಗತಿ ಎಂಬ ತಳಮಳ ತುಂಬಿಕೊಂಡಿತ್ತು ಮನಸ್ಸು ಇದುವರೆವಿಗೆ ಹಾಗೆ ಅರ್ಧಕ್ಕೆ ಊಟವನ್ನು ಬಿಟ್ಟು ಹೋದಾಗ. ಲೆಲ್ಲಾ ಅವನು ಪುನಃ ಬಂದು ಊಟ ಮಾಡಿರಲಿಲ್ಲ. ಬಹುಶಃ ಇಂದು ಬಹಳ ಹಸಿವಾಗಿತ್ತೋ ಅಥವಾ ಇನಿತು ಸಮಾಧಾನ ಮುನಿಸಿನ ಹೆಗಲೇರಿತ್ತೋ ದೇವರೇ ಬಲ್ಲ. ಅಂತೂ ಬುಸುಗುಡುತ್ತಲೇ ಬಂದು ಉಂಡು ಮುಗಿಸಿದ. ಜಗಲಿಯಲ್ಲಿ ಹಾಸಿದ ಚಾಪೆಯ ಮೇಲೆ ವೀಳೆದೆಲೆಯ ಸಣ್ಣ ಬುಟ್ಟಿ ಅಣಿಯಾಗಿತ್ತು. ವೀಳೆದೆಲೆ ಜಗಿಯುತ್ತಲೇ ಚಾಪೆಯ ಮೇಲೆ ಅಡ್ಡಾದ. ಅದಾವ ಮಾಯದಿಂದಲೋ ನಿದ್ದೆ ಅ ಕ್ಷಣ ಆವರಿಸಿತು.

ರಾಧಾ ಮೈಸೂರಿನ ಹಂಬಲದಲ್ಲಿ ಮುಳುಗಿದ್ದರೂ ಮುದ್ದಣ್ಣನ ರೀತಿಯಲ್ಲಿ ಕೇಳಲು ಮನಸ್ಸಾಗದೆ ಹಿತ್ತಿಲಲ್ಲಿ ಮುಸುರೆ ಉಜ್ಜ ತೊಡಗಿದಳು. ಕಣ್ಣುಗಳಲ್ಲಿ ಕಂಬನಿ ತುಂಬಿ ದೃಷ್ಟಿ ಮಂಜು ಮಂಜಾಯಿತು.

ಉಂಡು ತಟ್ಟೆಯೊಡನೆ ಕೈ ತೊಳೆಯಲು ಹೊರಬಂದ ಗಂಗಮ್ಮ— "ರಾಧೀ, ಸ್ವಲ್ಪ ಚಟ್ನಿ ಉಳಿದಿದೆ ಮಧ್ಯಾಹ್ನ ನಿನಗೆ ರಾಗಿ ರೊಟ್ಟಿಗಾಗುತ್ತೆ ಇಟ್ಟಿದ್ದೇನೆ."

"ನೀವು ಊಟಕ್ಕೆ ಹಾಕಿಕೊಳ್ಳಬಾರದಿತ್ತೆ ?"

"ಇರಲಿ, ಪರವಾಯಿಲ್ಲ."

ತಟ್ಟೆ ತೊಳೆದು ಬಾಯಿ ಮುಕ್ಕಳಿಸಿ ಅತ್ತ ಉಗಿದು, "ಬಿಡು ರಾಧಾ ! ಮಸಿ ಹತ್ತಿದ ಪಾತ್ರೆ ನಿನ್ನಿಂದ ಉಜ್ಜುವುದಕ್ಕಾಗುವುದಿಲ್ಲ."

ರಾಧಾ ಮರು ನುಡಿಯದೆ ಬಸಬಸ ಉಜ್ಜ ಹತ್ತಿದಳು. ಗಂಗಮ್ಮ ಇನ್ನುಳಿದ ಮುಸುರೆ ಪಾತ್ರೆಗಳನ್ನು ಒಟ್ಟುಗೂಡಿಸಿ ಹೊರತಂದಳು. ಇಬ್ಬರೂ ಒಟ್ಟುಗೂಡಿ ಕೈಹಚ್ಚಿದರು.

"ನೀವು ಆಗಲೇ ಹೇಳಿದ್ದರೆ ನಾನೇ ಒಂದಿಷ್ಟು ಕುರೆಸಾಣಿ ಚಟ್ನಿ ಅರೆದು ಇಡುತಿದ್ದೆ. ಈಗ ಅಪ್ಪನಿಗೆ ಸಿಟ್ಟು ಬಂದಿದೆ. ಇನ್ನು ದಸರ ವಿಚಾರ ಕೇಳಿದರೆ ಮುಗಿದೇ ಹೋಯಿತು !"

"ಅವರ ವಿಚಾರ ಬಿಡು, ದಿನಕ್ಕೊಂದು ರೀತಿ. ಒಟ್ಟಿನಲ್ಲಿ ರೇಗಲು ಕಾರಣ ಬೇಕಿತ್ತು !" ದನಿಯಲ್ಲಿ ದುಗುಡವಿತ್ತು. ಒಂದು ಗಳಿಗೆ ತಡೆದು ಪುನಃ ಮುಂದುವರಿದಳು ಗಂಗಮ್ಮ. "ಒಂದಿನ ಎರಡು ಬಗೆಯೇಕೆಂದು ರೇಗಿದರೆ ಇನ್ನೊಂದಿನ ಏಕೆ ಇಲ್ಲವೆಂದು ರೇಗುವುದು, ಹೀಗಾದರೆ ಅದಕ್ಕೆ ಕೊನೆಯೇ ಇಲ್ಲ."

ಮತ್ತೆ ಸ್ವಲ್ಪ ಹೊತ್ತು ಮೌನ.

"ಇನ್ನು ಹೋಗಿ ಬೈಗುಗಪ್ಪುಗವಿಯುವವರೆಗೂ ಕಳೆ ಕಿತ್ತ ರಾಯಿತು. ನಾನೂ ಬರುವೆ." ಬಾಲವಾಣಿ ಮೆಲು ನುಡಿಯಿತು. ತಲೆಯಲ್ಲಿ ಮೈಸೂರಿನ ವೈಭವ ಹುಚ್ಚೆದ್ದು ನರ್ತಿಸುತಿದ್ದಂತೆ ಕೈ ಯಾಂತ್ರಿಕವಾಗಿ ಉಜ್ಜುತಿತ್ತು. ಅಂತರಂಗದ ದುಗುಡವೆಲ್ಲಾ ಹನಿಹನಿಯಾಗಿ ಕಣ್ಣಂಚಿನಲ್ಲಿ ಸುರಿಯಿತು. ತೊಳೆದ ಪಾತ್ರೆಗಳನ್ನು ಒಂದೊಂದಾಗಿ ಒಳಗೊಯ್ದು ಇಡುತಿದ್ದ ಗಂಗಮ್ಮನಿಗೆ ತಲೆಬಾಗಿ ಉಜ್ಜುತ್ತಿದ್ದ ಮಗಳ ಕಂಬನಿ ಕಾಣಿಸಲಿಲ್ಲ. ಕೈಕಾಲು ತೊಳೆಯುವಾಗ ಮುಖವನ್ನೂ ತೊಳೆದು ಕೊಂಡು ಕಂಬನಿಯ ಕಲೆಯನ್ನು ನಿವಾರಿಸಿಕೊಂಡು ಒಳಬಂದಳು ರಾಧಾ.

ಮುದ್ದಣ್ಣ ಮಲಗಿದ್ದ ಚಾಪೆಯ ಕಡೆ ತುಸು ಹಣಿಕಿ ನೋಡಿದಳು ಹುಡುಗಿ. ಅವನು ಒಂದೇ ಸಮನೆ ಗೊರಕೆ ಹೊಡೆಯುತಿದ್ದ. ಹೆಜ್ಜೆಯ

ಮೇಲೆ ಹೆಜ್ಜೆಯಿಟ್ಟು ಹೊರಬಂದಳು. ದೂರ ದಿಗಂತದಲ್ಲಿ ಕಪ್ಪನೆಯ ಕಾರ್ಮೋಡಗಳು ದಂಡೆತ್ತಿ ಮೇಲಾಯ್ದು ಬರುತ್ತಿವೆ ನೋಡು ನೋಡುತಿದ್ದಂತೆ ಬಿಳಿಯ ಮೋಡಗಳನ್ನು ಕಬಳಿಸುತ್ತಲೇ ಮುಂದುವರಿದವು–ಅವು.

ಜಗತ್ತೇ ಹಾಗೆ ! ಒಂದು ಇನ್ನೊಂದಕ್ಕೆ ಮಾರಕ.

"ರಾಧೀ !"

ಪಿಸು ದನಿಯಲ್ಲಿ ಕರೆ ಹೊರಬಿತ್ತು. ಯಾವುದೋ ಗಮನದಲ್ಲಿ ಓಗೊಡಬೇಕೆಂದು ಬಾಯ್ದೆರೆದ ರಾಧಾ ಹಾಗೇ ನಾಲಿಗೆ ಕಚ್ಚಿಕೊಂಡಳು. ಅಪ್ಪ ಇಲ್ಲೇ ಮಲಗಿದ್ದು ಮರೆತೇ ಹೋಗಿತ್ತು ಎಂದುಕೊಳ್ಳುತ್ತ ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ಒಳಹೋಗಿ ಕೇಳಿದಳು "ಏನಮ್ಮಾ ?"

"ಇಂದು ಜಡೆ ಹೆಡೆಯುವುದಕ್ಕೂ ಸಮಯ ದೊರೆಯಲಿಲ್ಲ."

ರಾಧಾ ಮಾತಾಡದೆ ಬಳಿಯಲ್ಲಿ ನಿಂತು ತಲೆ ಬಾಚಿಸಿಕೊಂಡಳು.

"ಗದ್ದೆ ಕಳೆ ಕೀಳುವುದಿದೆ. ಬಾಳೆ ತೋಟದ ಆಗತೆ ಮಾಡಿ ಬಂದಿದ್ದಾರೆ. ಅದರ ಸರಬು ಕೊಯ್ಯುವುದೂ ಇದೆ."

"ನಾನೂ ಬರುವೆ. ಕೂಡಿ ಮಾಡೋಣ. ಅಪ್ಪನಿಗೆ ರಾಗಿ ರೊಟ್ಟಿ ಅನ್ನದ ತಿಳಿ ಒಲೆಯ ಬಳಿ ಮುಚ್ಚಿಟ್ಟರಾಯಿತು."

"ನೀನೇಕೆ ರಾಧಿ ?"

ಆದರೆ ರಾಧೆಯ ಯೋಚನೆಯೇ ಬೇರೆ. ಸೋಮಣ್ಣ ಹೊರಡಲು ಇನ್ನೂ ನಾಲ್ಕು ದಿನಗಳಿವೆ. ಅಷ್ಟರೊಳಗಾಗಿ ಕಳೆ ಕಿತ್ತುಬಿಟ್ಟರೆ ಅನುಕೂಲ. ಅನಂತರವಾದರೂ ಅಪ್ಪನನ್ನು ಧೈರ್ಯವಾಗಿ ಕೇಳಬಹುದಲ್ಲಾ. ಯೋಚನೆಯನ್ನವಲೋಕಿಸುತ್ತಲೇ ನುಡಿದಳು ರಾಧಾ "ನಾನೂ ಬರುವೆ. ಬೇಗನೆ ಮುಗಿಸಿದರೆ ಅನುಕೂಲ ಅಲ್ಲವೇ ?"

ಗಂಗಮ್ಮ ಮುಗುಳು ನಗೆ ಬೀರಿ ಸಮ್ಮತಿ ಸೂಚಿಸಿದಳು. ಒಬ್ಬಳೇ ಹೋಗಿ ಕೀಳುವುದು ಬೇಸರವೆನಿಸಿದುದರಿಂದ ಅವಳೆಂದುದು ಹಿತವಾಗಿ ತೋರಿತು. ಉಪ್ಪು ಸೇರಿಸಿದ ತಿಳಿಯನ್ನೂ ರಾಗಿ ರೊಟ್ಟಿಯನ್ನೂ ಒಲೆಯ ಬಳಿ ಬೆಚ್ಚಗೆ ಮುಚ್ಚಿಟ್ಟು ಸದ್ದಾಗದಂತೆ ಹಿತ್ತಿಲ ಕದ ಮುಚ್ಚಿಕೊಂಡು ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ರಾಧೆಯೊಡನೆ ಹೊರಬಿದ್ದಳು.

ಗುಡಿಸಿಲ ನೇರಕ್ಕೆ ಬತ್ತದ ಗದ್ದೆ. ಒಂದು ಗಣ್ಣ ಬಾಳೆ. ಮುರಿದ ಬಾಳೆಗಳಿಗೆ ಕಂಬ ಕೊಟ್ಟು ನಿಲ್ಲಿಸುವುದು, ಒಣಗಿದೆಲೆಯ ಸರಬನ್ನು ಕೊಯ್ಯುವುದು ಹೀಗೆ ತಾಯಿ ಮಗಳ ಕೆಲಸ ಸಾಗುತಿತ್ತು. ಕತ್ತಿಯಿಂದ ಒಣಗಿದ ಸರಬನ್ನು ಕೊಯ್ಯುತ್ತಾ ರಾಧಾ"ಮಾ..."

ದನಿ ಗಾಳಿಯಲ್ಲಿ ಅಲೆಅಲೆಯಾಗಿ ತೂರಿಹೋಯಿತು "ಮಾ !"

"ಏನು ರಾಧೀ ?"

"ಅಮ್ಮಾ. 'ದಮ್ಮಯ್ಯ' ಅಂತೀನಮ್ಮಾ ಹೇಗಾದರೂ ಮಾಡಿ ಅಪ್ಪನನ್ನು ಒಪ್ಪಿಸಿರಿ. ನಾವೂ ಹೋಗಿ ಬರೋಣ."

"ಕತ್ತಿ ಹರಿತವಾಗಿದೆ. ಕೈ ಜೋಕೆ ! ಈ ಯೋಚನೆಯಲ್ಲಿ ಇನ್ನೇನಾದರೂ ಆದೀತು !" ಎಚ್ಚರಿಸಿದ ನಂತರ "ಏಕೆ ಅಷ್ಟೊಂದು ಆಸೆ ಪಡುವೆ ರಾಧೀ ? ಅವರೊಪ್ಪಿದರೆ ಗಗನದಿಂದ ಹೂ ಮಳೆ ಬಿದ್ದೀತು !"

"ನೀನೇ ಹಾಗೆಂದರೆ..." ಮಾತನ್ನು ಅಷ್ಟಕ್ಕೆ ತುಂಡುಗಡಿದು ಎರಡು ಕ್ಷಣ ನಿಟ್ಟಿಸಿ ನೋಡಿ ಪುನಃ ತನ್ನ ಕೆಲಸ ಮುಂದುವರಿಸಿದಳು. ಕತ್ತರಿಸಿದ ಎಲೆಗಳು ಅಡ್ಡಾದಿಡ್ಡಿ ಬಿದ್ದಿದ್ದುವು. ಅಂದೇ ಮುದ್ದಣ್ಣ ಅಗತೆ ಮಾಡಿದುದರಿಂದ ಕಲ್ಲು ಮಣ್ಣು ಏರುಪೇರಾಗಿದ್ದು ಕಾಲಿಟ್ಟಲ್ಲಿ ಮಣ್ಣು ಕೆಳಗಡೆ ಕುಸಿಯುತಿತ್ತು. ಕತ್ತರಿಸಿದ ಸರಬನ್ನು ನೆಲದ ಮೇಲೆ ಹರವಿ ಕಲ್ಲು ಮುಳ್ಳುಗಳಿಗೆ ತಡೆಹಾಕಿ ಕೆಲಸ ಮುಂದುವರಿಸಿದರು. ಮಣ್ಣು ಕುಸಿದು ಮುಳ್ಳು ತುಳಿದು ಒಂದೆರಡು ಬಾರಿ ಮುಗ್ಗರಿಸಿದಳು ರಾಧಾ.

"ಕಾಲಿನ ಕೆಳಗೆ ಮುಳ್ಳುಗಳ್ಳು ಇದ್ದೀತು. ನೋಡಿಕೊಂಡು ಹೆಜ್ಜೆ ಹಾಕು ರಾಧೀ !"

ತಾಯಿ ಪುನಃ ಎಚ್ಚರಿಕೆ ನೀಡಿದಳು. ಆದರೆ ಮಗಳ ಮನೋ ಗತಿಯೇ ಬೇರೆ. ಕೊಯ್ದ ಸರಬನ್ನು ಅತ್ತ ಹಾಕಿ "ಮಾ ..."

"ನಿಂದು ಅದೇ ಹಾಡಾಯ್ತಲ್ಲ, ನಾನು ಕರೆದೊಯ್ಯುವಂತಿದ್ದರೆ ಯೋಚನೆಯೇ ಇರಲಿಲ್ಲ." ಒಂದು ಗಳಿಗೆ ತಡೆದು "ಸಂಜೆಯ ಹೊತ್ತಿನಲ್ಲಿ ಅವರು ಒಲೆಯ ಬಳಿ ಬೆಚ್ಚಗೆ ಕೂತಾಗ ನೀನೇ ಕೇಳು. ಮಗಳು ಕೇಳಿದರೆ ಒಪ್ಪಿದರೂ ಒಪ್ಪಬಹುದು."

ರಾಧಾ ಮಾತಾಡಲಿಲ್ಲ. ಅದೇ ವಿಚಾರವನ್ನು ಮನದಲ್ಲಿ ಮೆಲುಕು ಹಾಕಿದಳು.

"ನಾನು ಕೇಳಿದರೆ ಏನೆಂದಾರು ಗೊತ್ತಾ? ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಮಜಾ ಮಾಡುವ ಮನಸ್ಸು ಎಂದಾರು! ನೀನಾದರೆ ಚಿಕ್ಕ ಹುಡುಗಿ. ಆಸೆ ಇರುವುದು ಸಹಜ. ಅದೇನೂ ತಪ್ಪಾಗದು."

ರಾಧಾ ಒಂದು ಗಳಿಗೆ ಯೋಚಿಸಿದಳು. ತಾಯಿಯ ಮಾತು ಅಕ್ಷರಶಃ ಸತ್ಯವಾಗಿ ತೋರಿ ಮುಖ ಖಿನ್ನವಾಯಿತು. ಮನದ ದುಗುಡ ವೇಃದ್ದರೂ ಕೆಲಸ ಬಿರುಸಾಗಿ ಸಾಗಿತು. ಸರಬು ಕೊಯ್ದು ಮುಗಿದ ನಂತರ ತಾಯಿ ಮಗಳು ಗದ್ದೆಗಿಳಿದರು.

"ಮಾ, ಬಾಳೆಯ ಸರಬು ಕೊಯ್ದು ಮುಗಿಯಿತು. ಗೊನೆಗಳು ಇನ್ನೂ ಬಹಳ ಎಳಸು. ಫಸಲು ಕಾಯುವ ತೊಂದರೆಯಿಲ್ಲ. ಗದ್ದೆ ಕಳೆ ಕಿತ್ತುಬಿಟ್ಟರೆ ಅಪ್ಪ ಇನ್ನೇನು ಸಬೂಬು ಹೇಳಿಯಾರು?"

"ದುಡ್ಡು-ಕಾಸು?"

"ನಾನು ನೋಡಿದೇನೆ, ಪೆಟ್ಟಿಗೆಯಲ್ಲಿದೆ!" ಕಣ್ಣರಳಿಸಿದಳು ರಾಧಾ.

ಗಂಗಮ್ಮ ಫಕಫಕನೆ ನಕ್ಕುಬಿಟ್ಟಳು. ಆ ನಗುವಿನಲ್ಲಿ ಯಾವ ರಸವಿತ್ತು? ಅಸಹಾಯಕತೆ ಇತ್ತೆ? ತಿರಸ್ಕಾರವಿತ್ತೆ? ಕಟು ಸತ್ಯವಿತ್ತೆ? ಸಾಮಾಜಿಕ ವಿಧಾಯಕವಿತ್ತೆ? ಹೂಂ, ಯಾವುದೋ ಇತ್ತು. ಅದರ ಸತ್ಯವನ್ನು ಗ್ರಹಿಸಲಾರದ ಕುಸುಮಸದೃಶ ರಾಧೆಯು ತಾಯಿಯ ಮುಖವನ್ನು ಒಂದು ಗಳಿಗೆ ನಿಟ್ಟಿಸಿ ನೋಡಿದಳು. ಮಗಳನ್ನು ನೋಡಿ ಏನನ್ನಿಸಿತೋ! ಒಂದು ಗಳಿಗೆ ಯೋಚಿಸಿ ನೋಡಿ ಮಗಳ ಗಮನವನ್ನು ಬೇರೆಡೆಗೆ ಎಳೆದಳು ಗಂಗಮ್ಮ.

"ಇನ್ನೂ ಗದ್ದೆ ಕಳೆ ಕೀಳುವುದು ಮೂರು ದಿನಕ್ಕೂ ಮೇಲಾಗುತ್ತದೆ."

"ಬಿಡದೆ ಕಿತ್ತರೆ ಮೂರು ದಿನಗಳಲ್ಲಿ ಮುಗಿಯುತ್ತೆ ಮಾ."

ಮಗಳ ಆಸೆ ಕರುಳನ್ನು ಇರಿಯಿತು. ಅವರು ಒಪ್ಪಿದರಂತೂ ಆಯಿತೂ. ಇಲ್ಲದಿದ್ದರೆ?

"ರಾಧೀ! ಮೇಲೆ ನೋಡು, ಕಪ್ಪು ಮೋಡ ಕುಸಿದು ಬೀಳು

ವಷ್ಟು ಹೆಪ್ಪುಗಟ್ಟಿವೆ. ಸ್ವಲ್ಪ ಹೊತ್ತಿನೊಳಗಾಗಿ ಮಳೆ ಬೀಳಬಹುದು. ಮನೆಗೆ ಹೋಗಿ ಎರಡು ಗೋಣಿಚೀಲ ತಂದಿದ್ದರೆ ಒಳ್ಳೆಯದಿತ್ತು."

"ಮಳೆ ಹೆಚ್ಚು ಬರಲಾರದು ಸುಮ್ಮನಿರಿ. ಅಷ್ಟರೊಳಗಾಗಿ ಇನ್ನಿಷ್ಟು ಕೀಳಬಹುದು."

ಮಳೆರಾಯನನ್ನು ಬಡಿದೋಡಿಸಲು ಬೀಸುಗಾಳಿಯು ಹೋರಾಟಕ್ಕಿಳಿಯಿತು. ಉಟ್ಟ ಬಟ್ಟೆ, ಮುಡಿಗಟ್ಟಿದ ಕೂದಲು ಮುಖಕ್ಕಡರಿ ಕೈಗಳಿಗೆ ತೊಡಕಾದರೂ ತಾಯಿ ಮಗಳ ಕೆಲಸ ಮುಂದುವರಿಯಿತು. ಕಿತ್ತ ಕಳೆಯನ್ನು ಗದ್ದೆಯಂಚಿನ ಮೇಲೆ ಅಲ್ಲಲ್ಲಿ ರಾಶಿ ಹಾಕುತಿದ್ದ ರಾಧಾ "ಏನಾದರೂ ಆಗಲಿ, ಮೂರು ದಿನಗಳೊಳಗಾಗಿ ನಾಲ್ಕು ಗಣ್ಣಗಳನ್ನೂ ಮುಗಿಸಿಬಿಡೋಣ ಮಾ. ಮಳೆಗಂಜಿಕೊಂಡರೆ ಮೈಸೂರಿಗೆ ಹೋಗುವಂತಿಲ್ಲ !"

ಮಗಳ ಹುಮ್ಮಸ್ಸನ್ನು ಕಣ್ತುಂಬ ನೋಡಿದಳು ಗಂಗಮ್ಮ. ಹೆಂಗರುಳು ಚುರುಚುರುಗುಟ್ಟಿತು.

ತಟಪಟ ತಟಪಟ ತಟಪಟ ಅಲ್ಲೊಂದು ಇಲ್ಲೊಂದು ಮಳೆಹನಿ ಬೀಳಹತ್ತಿತು. ಕತ್ತೆತ್ತಿ ನೋಡಿ ಮತ್ತೆ ಕೆಲಸದ ಕಡೆ ಗಮನ ಕೊಟ್ಟರು.

ವಿಾ, ವಿಾ, ವಿಾ, ವಿಾ.

ಮಿಂಚುಳ್ಳಿಯೊಂದು ಕೂಗುತ್ತ ಹಾರಿಹೋಯಿತು. ಬೆಳ್ಳಕ್ಕಿಗಳ ಹಿಂಡು ಒಟ್ಟುಗೂಡಿ ನೀಲಾಂಬರದಲ್ಲಿ ಅಖಂಡ ರೇಖೆಯ ವಿನ್ಯಾಸವನ್ನು ಒರೆಗೆ ಹಚ್ಚಿ ಮೋಲ್ಡೆಯ ಚೆಲುವನ್ನು ಚೆಲ್ಲಿ ಹಾರಿಹೋದುವು.

"ಅಮ್ಮಾ, ಅಪ್ಪ ಒಪ್ಪಿದರೆ ನನಗೊಂದು ಲಂಗವೂ ಇಲ್ಲ. ಕಿರುಗೆಯೂ ಇಲ್ಲ."

ಅವರೊಪ್ಪಿದರೆ ತಿಮ್ಮೀದೊಂದು ಗಂಗುದೊಂದು ಲಂಗ ಈಸಿಕೊಂಡು ಹೋಗೋಣ ಸುಮ್ಮನಿರು." ಸಾಂತ್ವನಗೈಯ್ಯುವ ದನಿಯಲ್ಲಿ ನುಡಿದಳು ಗಂಗಮ್ಮ.

"ನಾನು ದಿನವೂ ದೇವರಲ್ಲಿ 'ಅಪ್ಪನಿಗೆ ಒಳ್ಳೆ ಬುದ್ಧಿ ಕೊಡು' ಎಂದು ಬೇಡುತಿದ್ದೇನೆ !"

"ಅಯ್ಯೊ. ರಾಧೀ ! ಆಸೆಪಟ್ಟು ಅದು ಫಲಿಸದಿದ್ದರೆ ಮತ್ತಷ್ಟು

ಗೋಳು. ಹೆಣ್ಣಾಗಿ ಹುಟ್ಟಿ ಅದೂ ಇದೂ ಬಯಸಿದರೆ ಹೇಗಾದೀತು ಹೇಳು ?"

ಗಂಗಮ್ಮನ ಮಾತಿನ ಸರಣಿ ಮುಗಿಲಿನೆತ್ತರಕ್ಕೆ ಏರಿ ನಿಂತಿದ್ದ ಎಳೆ ಮನಸ್ಸಿನೆಳೆಯನ್ನು ಎಳೆದು ಜಗ್ಗಿತು. ಒಂದೇ ಉಸುರಿಗೆ ಅವಳಂದಳು "ಮೊಟ್ಟಮೊದಲೇ ಅಮಂಗಳ ನುಡಿಯಬೇಡೀಮಾ."

ಗಂಗಮ್ಮನ ಎದೆಯಾಳದಿಂದ ನಿಟ್ಟುಸಿರುಗೊಂದು ಮೆಲ್ಲನೆ ತಪ್ಪಿಸಿ ಕೊಂಡಿತು.

"ರಾಗಿ ಹಿಟ್ಟು ಬೀಸಿದ್ದಿಲ್ಲ. ಹಿಟ್ಟು ಬೀಸಿ ರೊಟ್ಟಿ ತಟ್ಟಿಟ್ಟು ಕೊಂಡರೆ ಕೊನೆಯ ಗಳಿಗೆಯಲ್ಲಿ ಅಪ್ಪ ಒಪ್ಪಿದರೂ ಹೊರಡುವುದು ಸುಲಭ."

"ಇಷ್ಟೊಂದು ಆಸೆ ಇಟ್ಟುಕೊಂಡಿದ್ದಿ. ನಿನ್ನ ಅದೃಷ್ಟ ಹೇಗೆ ಇದೆಯೋ ಏನೋ ?

"ಮಾ....ನಾನು ಒಳ್ಳೆ ಗಳಿಗೆಯಲ್ಲಿ ಹುಟ್ಟಲಿಲ್ಲವೇ ?"

"ಅದೆಲ್ಲಾ ಯಾರಿಗೆ ಗೊತ್ತು ? ನಮಗೇನು ವಿದ್ಯೇನಾ ? ಬುದ್ಧೀನಾ ? ನನಗೆ ನೆನಪಿದ್ದ ಹಾಗೆ ನೀನು ಹುಟ್ಟಿದಾಗ ಹೊತ್ತು ಮುಳುಗುತಿತ್ತು. ಹುಟ್ಟಿದ್ದು ಶನಿವಾರ, ಹೆಣ್ಣು ಮಕ್ಕಳು ಶನಿವಾರ ಹುಟ್ಟಿದರೆ ಹುಟ್ಟಿದ ಮನೆಗೆ ಬಡತನವಂತೆ. ಅದಕ್ಕೆ ನಿಮ್ಮಪ್ಪ ಅನ್ನು ವುದು ಹದಿನಾಲ್ಕಾದರೆ ಸಾಕು, ರಾಧಿಗೆ ಮದುವೆ ಮಾಡಿಬಿಡುವೆ !... ಅಂತ. ನಿನಗ್ಗೊತ್ತೆ ? ಶನಿವಾರ ಹುಟ್ಟಿದ ಹೆಣ್ಣು ಮಕ್ಕಳಿಗೆ ಗಂಡನ ಮನೆಯಲ್ಲಿ ಐಶ್ವರ್ಯ ತುಂಬಿ ತುಳುಕುತ್ತದೆಯಂತೆ !" ಹುಬ್ಬೆತ್ತಿ ಮಗಳನ್ನೇ ನಿಟ್ಟಿಸಿದಳು ಗಂಗಮ್ಮ. ಮುಖದಲ್ಲಿ ಮಂದಹಾಸ ನಲಿಯಿತು.

ರಾಧೆಯ ಚೆಂಗೆನ್ನೆಗಳು ರಂಗೇರಿದುವು. "ಹ್ಞೂ ಹ್ಞೂ.... ಅಪ್ಪನಿಗೇನು ?"

ಕುಹೂ ಕುಹೂ ಕುಹೂ ಕುಹೂೂ !

ದನಿ ಬಂದತ್ತ ಇಬ್ಬರ ಕಣ್ಣುಗಳೂ ಹೊರಳಿದುವು. ಕಣ್ಗೋಚರಿ ಸಿದುದು ಮರದ ನೆತ್ತಿಯ ಮೇಲಿನ ಕೆಂದಳಿರು.

ತಟ ಪಟ ಹನಿಗಳು ದಪ್ಪ ದಪ್ಪಗೆ ಬಿದ್ದುವು. ಮೊದಮೊದಲು

ಅಲ್ಲೊಂದು ಇಲ್ಲೊಂದು ಹನಿ. ಅನಂತರ ಧಾರಾಕಾರವಾಗಿ ಸುರಿಯ ಹತ್ತಿತು ಮಳೆ.

ಅದೇ ಸಮಯದಲ್ಲಿ ಮುದ್ದಣ್ಣ ಸಿಹಿ ಗೆಣಸನ್ನು ಬೇಯಲಿಕ್ಕಿಟ್ಟಿದ್ದ.

೦ ೦ ೦

"ಅಪ್ಪಾ...!"

"ಏನು ರಾಧಿ ?"

"........"

ಮುದ್ದಣ್ಣ ನೋಡಿದ ನೋಟ ಪುನಃ ಕೇಳಿತು "ಏನು ರಾಧಿ ?"

"ನೀವೇನಂತಿರೋ ಏನೋ."

"ನೆಗಡಿಯಾಗಿಡೆಯೇನು ? ನಿನ್ನ ಮುಖ ಮೂಗುಗಳಲ್ಲೇಕೆ ಕೆಂಬಣ್ಣ ?"

"ಮೂರು ದಿನದಿಂದಲೂ ಮಳೆಯಲ್ಲಿ ನೆನೆಯುವುದೇ ಆಗಿದೆ. ಅದರಿಂದಲೇ ನೆಗಡಿ" ಮೃದು ಮಧುರ ದನಿಯಲ್ಲಿ ನುಡಿದಳು ರಾಧಾ.

"ಅದೇನು ಬರುತ್ತೆ ಹೋಗುತ್ತೆ ಬಿಡು." ಅಸಡ್ಡೆಯಿಂದ ನುಡಿದ ಮುದ್ದಣ್ಣ.

ಒಲೆಗೆ ಇನ್ನಷ್ಟು ಜಿಗ್ಗು ಹಾಕಿ ಹೊಗೆಯೆದ್ದ ಬೆಂಕಿಯನ್ನು ಊದಿ ಊದಿ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು "ನನ್ನಿಂದಾಗದಪ್ಪಾ" ಎಂದಳು ರಾಧಾ.

ಹೊಗೆಯುಟ್ಟಿ ಕಣ್ಣು ಮೂಗುಗಳಲ್ಲಿ ನೀರು ತುಂಬಿತು. ಉಟ್ಟ ಬಟ್ಟೆಯಿಂದ ಕಂಬನಿಯನ್ನು ಒರಿಸಿಕೊಂಡಳು ರಾಧಾ.

"ಜಿಗ್ಗು ಮಳೆಯಲ್ಲಿ ನೆಂದು ಒದ್ದೆಯಾಗಿದೆ. ಮಳೆ ಬೀಳುವ ಮೊದಲೇ ಎತ್ತಿಡಬೇಕಿತ್ತು."

"ಮಳೆ ಬಂದಾಗ ನಾವು ಗದ್ದೆಯಲ್ಲಿದ್ದೆವು."

ಮುದ್ದಣ್ಣ ಯೋಚಿಸಿದ. ಅವಳೆಂದುದು ನಿಜವಾಗಿತ್ತು. ಅಂದು ತಾನೇ ಮನೆಯಲ್ಲಿದ್ದರೂ ಗಮನಿಸಿರಲಿಲ್ಲ. ಆದರೂ ಗೊಣಗಿದ "ಒಲೆಯ ಬುಡದಲ್ಲಿಟ್ಟು ಒಣಗಿಸಬೇಕಾಗಿತ್ತು."

ಊರ ಬಾವಿಗೆ ನೀರು ತರಲು ಹೋದ ಗಂಗಮ್ಮ ಇನ್ನೂ ಬಂದಿರಲಿಲ್ಲ. ಅನ್ನಕ್ಕೆ ಎಸರಿಟ್ಟು ಪುನಃ ಗೋಗರೆದಳು ರಾಧಾ "ಅಪ್ಪಾ....!"

"ಏನೇ ಅದು, ಸರಿಯಾಗಿ ಹೇಳಬಾರದೇ ?"

"ಸೋಮಣ್ಣನ ಮನೆಯವರು ಮೈಸೂರಿಗೆ ಹೋಗುತ್ತಾರಂತೆ !"

"ಹೋಗಲಿ, ನಮಗೇನಂತೆ ?"

"ನಾವೂ....ಹೋಗೋಣ....ಪ್ಪಾ !"

"ದುಡ್ಡು ಕಾಸು ಇದ್ದವರಿಗೆ ಅದೆಲ್ಲ. ನಮಗೇಕೆ ಹೇಳು ?"

"ನಿಮ್ಮ ಹತ್ತಿರ ಇರುವ ದುಡ್ಡೇ ಸಾಕಲ್ಲ."

"ಓಹೋ !" ಮುದ್ದಣ್ಣ ಗಟ್ಟಿಯಾಗಿ ನಕ್ಕು ನುಡಿದ. "ಮೈಸೂರಿಗೆ ಹೋಗಿ ಮಜ ಮಾಡಿ ಬಂದರೆ ಬೆಳೆ ಬರುವ ತನಕ ಉಣ್ಣುವುದೇನು ? ನಮ್ಮಪ್ಪ ಎಲ್ಲಾ ಸುಖಪಡಲಿ ಅಂತ ಗದ್ದೆ ತೋಟ ಧಾರಾಳವಾಗಿ ಮಾಡಿಟ್ಟಿದ್ದಾನೇನು ?"

"ಯಾವಾಗಲೂ ನೀವು ಅನ್ನುವುದೇ ಹಾಗೇ. ಸೋಮಣ್ಣ ಇರುವುದು ಸಹ ನಮ್ಮ ಹಾಗೆಯೆ. ಆದರೂ ಹೊರಟಿದ್ದಾರೆ."

"ಅದೆಲ್ಲ ನಮಗೆ ಬೇಡವೇ ಬೇಡ. ಸುಮ್ಮನಿರು."

"ನಾವು ಇದುವರೆಗೆ ರೈಲು ನೋಡಲಿಲ್ಲ."

"ರೈಲು ಇಲ್ಲಿಗೆ ಬರ್ತ್ತದಂತೆ ! ಅನಂತರ ದಿನವೂ ನೋಡಿದರಾಯಿತು ಬಿಡು."

"ಇಲ್ಲಿಗೆ....?" ಕಣ್ಣುಗಳನ್ನು ಅರಳಿಸಿದಳು ರಾಧಾ.

"ಹ್ಞೂ...ರಾಧೀ !"

"ಮಾದೇನಹಳ್ಳಿಗೆ ?" ಮೈಯೆಲ್ಲಾ ಅಚ್ಚರಿಯ ಬೀಡಾಗಿ ಪ್ರಶ್ನಿಸಿದಳು ರಾಧಾ.

"ತಿಪ್ಪೇನಹಳ್ಳಿ ಸಂಗನೂರು ಕಡೆಯಿಂದ ರೈಲು ಹಾದಿ ಸರ್ವೆ ಮಾಡುತಿದ್ದಾರೆ. ಅಲ್ಲಿಂದ ನಮ್ಮೂರಿನನಲ್ಲಿ ಹೊಳೆಯಂಚಿನಲ್ಲಿಯೇ ಹೋಗುತ್ತದಂತೆ ರೈಲು !"

ಎಂತಹ ಸುದ್ದಿ....?

ರಾಧೆಯುಯ ಸ್ಥಿತಿ ಒಮ್ಮೆಲೇ ಹುಳಿ ಹೆಂಡ ಕುಡಿದಂತಾಯಿತು.

ನೂರ್ಮಡಿಯ ಉತ್ಸಾಹದಿಂದ ಒಂದೇ ಉಸುರಿಗೆ ಕೇಳಿದಳು "ನಿಜ ವಾಗಿಯೂ ಮಾದೇನಹಳ್ಳಿಗೆ ರೈಲು ?"

"ಹ್ಞೂ....ರಾಧೀ ! ನಿಜವಾಗಿಯೂ ಬರುತ್ತೆ."

ಮುಖದ ಮೇಲಿನ ಅಸಂಖ್ಯಾತ ರೇಖೆಗಳ ನಡುವೆ ಎಳೆನಗುವನ್ನು ತೇಲಿಸಿ ಪುನಃ ನುಡಿದ ಮುದ್ದಣ್ಣ "ನಮ್ಮೂರಿಗೆ ರೈಲು ಬಂದರೆ ಚೆಂದ ಅಲ್ವಾ ? ನೀನೂ ದಿನಾ ಹೊಳೆ ಅಂಚಿಗೆ ಹೋಗಿ ಕಣ್ತುಂಬ ನೋಡ ಬಹುದು."

"ಅಷ್ಟಾದರೆ ಸಾಕಪ್ಪ."

ಸಂತಸದ ಕುಂಡದಲ್ಲಿ ಮುಳುಗಿ ನಿಗಿ ನಿಗಿ ನಲಿದಳು ರಾಧಾ.

ಪ್ರಸಕ್ತ ಸಮಯದಲ್ಲಿ ಅವಳ ಮನಃಪಟಲದಿಂದ ಮೈಸೂರು ದಸರ ಆನೆ ಕುದುರೆ ಜಂಬೂ ಸವಾರಿ ಅಳಿಸಿಯೇ ಹೋದುವು. ದೃಢವಾಗಿ ಕುತೂಹಲಕಾರಿಯಾಗಿ ಆಸಕ್ತಿಮಯವಾಗಿ ಆಕ್ರಮಿಸಿದುದೆಂದರೆ... ಮಾದೇನಹಳ್ಳಿಗೆ ರೈಲು !

"ರೈಲು ಯಾವಾಗ ಬರುತ್ತೆ ? ಬಂದರೆ ಅದು ಇಲ್ಲೆ ಇರು ತ್ತದೆಯೆ ?"

"ಮೊದಲು ರೈಲು ಹಾದಿ ತಯಾರಾಗಲಿ, ಆಮೇಲೆ ಅದೆಲ್ಲಾ."

ಶಂಕರ ಹೇಳಿದ್ದ "ಒಂದರಿಂದ ಒಂದಕ್ಕೆ ಕೊಂಡಿ ಜೋಡಿಸಿ ಬಹಳ ಉದ್ದ ಮಾಡಿರುತ್ತಾರೆ. ಹಿಂದುಗಡೆಯಿಂದ ಒಂದು ಎಂಜಿನ್ ತಳ್ಳುತೆ ! ಮುಂದುಗಡೆಯಿಂದ ಇನ್ನೊಂದು ಎಂಜಿನ್ ಎಳೆಯುತ್ತೆ ! ದೂರದಿಂದ ನೋಡಿದರೆ ಕರಿಯ ಹೆಬ್ಬಾವು ಬುಸುಗುಡುತ್ತಾ ಹೋಗು ತ್ತಿರುವಂತೆ ಕಾಣಿಸುತ್ತದೆ ರಾಧಾ !"

ಅದು ಹೇಗಿದ್ದಿರಬಹುದು ? ಎಂತಹ ಆಶ್ಚರ್ಯ ?

"ಅದು ಬುಸುಗುಡುತ್ತಾ ಎಳೆಯುವುದನ್ನು ನೋಡಿದರೆ ಎದೆ ಯೊಡೆಯುವಂತಾಗುತ್ತದೆ ! ರೈಲು ಅಂದರೆ ಸಾಮಾನ್ಯವೇ ? ಸಾವಿರಾರು ಮಂದಿ ಕೂಡಬಹುದು ಅದರಲ್ಲಿ !" ಕಣ್ಣರಳಿಸಿ ಬಾಯಿ ಕಿಸಿದು ಹೇಳಿದ್ದ ಶಂಕರ.

ವಿಷಯ ನೆನಪರಿಕೆಯಾದೊಡನೆ ಮೈಯೆಲ್ಲಾ ಮನಸ್ಸಾಗಿ ಬಿತ್ತರಿ

ಸಿದಳು ರಾಧಾ "ಹೊಳೆಯಂಚಿನಲ್ಲಿ ಹೋಗುವುದಾದರೆ ಇಲ್ಲಿಗೆ ಅರ್ಧ ಫರ್ಲಾಂಗಷ್ಟೆ ? ನಾವು ಎಷ್ಟು ಸುಖವಾಗಿ ನೋಡಬಹುದು ?"

"ಸರಿ ಬಿಡು, ರೈಲು ಬಂತೆಂದರೆ ನೀನು ಹೊಳೆದಂಡೆ ಬಿಟ್ಟು ಕದಲುವುದೇ ಇಲ್ಲ ?"

"ನೀರಿಗೆ ಹೋಗಿದ್ದ ಗಂಗಮ್ಮ ಎರಡು ಗಡಿಗೆ ನೀರಿನೊಂದಿಗೆ ಒಳ ಬಂದಳು. ಎರಡು ಗಡಿಗೆಗಳನ್ನೂ ಇರಿಕೆಯ ಮೇಲೆ ಜೋಡಿಸಿಟ್ಟು ಮೇಲುಸಿರು ಬಿಡುತ್ತಾ "ಅಚ್ಚುಕಟ್ಟಾಗಿ ಬಳಸು ರಾಧಾ. ನಾನಿನ್ನು ಹೊರಲಾರೆ. ನನಗೆ ಸಾಕಾಗಿಬಿಟ್ಟಿದೆ."

ತಾಯಿಯ ಮಾತನ್ನು ಇನಿತೂ ಗಮನಿಸದೆ ಒಂದೇ ಉಸುರಿಗೆ ನುಡಿದಳು ರಾಧಾ "ಮಾ, ಮಾದೇನಹಳ್ಳಿಗೆ ರೈಲು ಬರ್ತದಂತೆ !"

"ಯಾರಂದದ್ದು ?"

"ಅಪ್ಪ !"

"ಸರಿ, ಅವರು ಅನ್ನುವುದೇ ಹಾಗೆ."

ಮುದ್ದಣ್ಣ ನಡುವೆ ಬಾಯಿ ಹಾಕಿದ "ಏಳೆಂಟು ವರ್ಷದ ಕೆಳಗೂ ಒಮ್ಮೆ ಈ ಗುಲ್ಲು ಎದ್ದಿತ್ತು. ಆದರೆ ಈಗ ಹಾಗಲ್ಲ. ನಿಜವಾಗಿಯೂ ಹಾದಿ ಸರ್ವೆ ಮಾಡುತಿದ್ದಾರೆ !"

"ಹೌದಾ ?" ಅಚ್ಚರಿಯಿಂದ ನಿಟ್ಟಿಸಿದಳು ಗಂಗಮ್ಮ. ಕಣ್ಣಿನ ಭಾವ ಕೂಗಿ ಕೇಳಿತು "ಹೌದಾ ?"

"ಹೌದಂತೆ ! ತಿಪ್ಪೇನಹಳ್ಳಿಯ ಕಡೆಯಿಂದ ಹಾದಿ ಸರ್ವೆ ಮಾಡುತ್ತಿದಾರೆ."

"ಹೋಗಲಿ, ಇಲ್ಲಿಂದಲೇ ಕಣ್ತುಂಬ ನೋಡಿದರಾಯಿತು."

"ಅದೇ ನಾನು ಹೇಳುತ್ತಿರುವುದು" ದನಿಗೂಡಿಸಿದ ಮುದ್ದಣ್ಣ.

ಮುದ್ದಣ್ಣ ಹಾಕಿದ ಪೀಠಿಕೆ ಗಂಗಮ್ಮನಿಗೆ ಅರ್ಥವಾಗಲಿಲ್ಲ. ಸೀರೆಯ ಮೇಲೆ ಚೆಲ್ಲಿದ್ದ ನೀರನ್ನು ಹಿಂಡಿಕೊಳ್ಳುತ್ತಾ "ಕತ್ತಲೆಯಲ್ಲಿ ಕಾಣದೆ ಕಲ್ಲೆಡವಿ ನೀರು ಚೆಲ್ಲಿಕೊಂಡೆ."

"ಸದ್ಯ ಬೀಳಲಿಲ್ಲವಲ್ಲ." ಮಗಳೆಂದಳು.

"ಬಿದ್ದಿದ್ದರೆ ಎರಡು ಗಡಿಗೆಗಳೂ ಗಂಗಮ್ಮನ ಪಾಲಾಗುತಿದ್ದುವು."

ಉಟ್ಟ ಸೀರೆಯನ್ನು ಆರಿಸಿಕೊಳ್ಳಲು ಸಣ್ಣಗೆ ನಡುಗುತ್ತಾ ಒಲೆಯ ಮುಂದೆ ನಿಂತ ಹೆಂಡತಿಯನ್ನು ಕುರಿತು ಮುದ್ದಣ್ಣ ಅಂದ "ಸೋಮಣ್ಣನ ಮನೆಯವರು ಮೈಸೂರಿಗೆ ಹೋಗುತ್ತಾರಂತೆ. ಈ ಹುಡುಗಿಗೆ ಅದರ ಗೀಳು ಹತ್ತಿದೆ ನೋಡು !"

"ಪಾಪ, ಮಕ್ಕಳಿಗೆ ಆಸೆ !". ನುಡಿಯಲಾರದೆ ನುಡಿಯಿತು ಗಂಗಮ್ಮನ ದನಿ.

"ಸರಿ, ಸರಿ, ನೀನು ಹಾರುವ ಮಂಗನಿಗೆ ಏಣಿ ಹಾಕು ?" ಮುದ್ದಣ್ಣ ಒಮ್ಮೆಲೇ ಹೌಹಾರಿದ.

ಗಂಗಮ್ಮ ಮಾತಾಡದೆ ಮಗಳ ಕಡೆ ಓರೆಗಣ್ಣ ನೋಟ ಬೀರಿ. ಹರಿದ ಕುಕ್ಕೆಯೊಂದಕ್ಕೆ ಹೊಸ ಅಲಗು ಸೇರಿಸಿ ಸರಿ ಮಾಡುವ ಕಾರ್ಯ ದಲ್ಲಿ ಮಗ್ನಳಾದಳು. ಮನದಾಳದಲ್ಲಿ ಯೋಚನೆಯಲೆಗಳೆಲ್ಲಾ ಅಲೆ ಯಲೆಯಾಗೆದ್ದುವು. ಅತ್ತ ಪೋದರೆ ಪುಲಿ, ಇತ್ತ ಪೋದರೆ ದರಿ ಎಂಬಂತಾಯಿತು ಗಂಗಮ್ಮನ ಸ್ಥಿತಿ.

ಕತ್ತಲೆಯ ಕಾಳಗಪ್ಪು ಇಳೆಯನ್ನು ತೆರೆತೆರೆಯಾಗಿ ಮುಸುಗುತಿತ್ತು.

ರಾಗಿ ಹಿಟ್ಟು ಬೀಸಲು ಅಣಿಮಾಡಿಕೊಳ್ಳುತಿದ್ದ ರಾಧಾ ಮೆಲ್ಲಗೆ ರಾಗ ತೆಗೆದಳು. "ಅಪ್ಪಾ ! ಅವರೊಂದಿಗೆ ನಾನು ಮೈಸೂರಿಗೆ ಹೋಗಿ ಬರಲೇ ?"

"ಆ ಸುದ್ದಿ ಎತ್ತಲೇಬೇಡ." ಏರಿದ ದನಿಯಲ್ಲಿ ನುಡಿದ ಮುದ್ದಣ್ಣ.

"ಅಪ್ಪಾ ! ರೈಲುಭತ್ತೆ ಹತ್ತು ರೂಪಾಯಿ ಕೊಟ್ಟರೆ ಸೋಮಣ್ಣನೇ ಕರೆದುಕೊಂಡು ಹೋಗುತ್ತಾರಂತೆ !"

"ಹತ್ತು ರೂಪಾಯಿ ! ಹತ್ತು ರೂಪಾಯಿ ಖರ್ಚು ಮಾಡಿ ಮೈಸೂರು ತನಕ ಹೋಗಿ ಬಂದರೆ ಏನು ಬಂದ ಹಾಗಾಯಿತು ?"

"......."

"ಇನ್ನು ದಸರದ ಗೀಳೇಕೆ ? ಮನೆ ಬಾಗಿಲಿಗೆ ರೈಲು ಬರುತ್ತೆ. ಅದು ದಸರಕ್ಕಿಂತ ಹೆಚ್ಚಾಯಿತು."

"........"

"ಹೋಗಲಿ ಬಿಡು, ನಮ್ಮಂತಹವರು ಏಕೆ ಆಸೆಪಡುವುದು ? ಹೆಣ್ಣು ಮಕ್ಕಳನ್ನು ಕಂಡವರೊಡನೆ ಕಳುಹಿಸುವುದೂ ಸರಿಯಲ್ಲ." ಮಗಳನ್ನು ಸಮಾಧಾನಪಡಿಸುವ ಸಲುವಾಗಿ ಕಾರಣವೊಂದನ್ನು ಹುಡುಕಿದಳು ಗಂಗಮ್ಮ. ಆದರೆ ಮುದ್ದಣ್ಣನಿಗೆ ಅದೇ ಮಂಗ ಮುಷ್ಟಿಯಾಯಿತು. ಒಂದೇ ನಿರ್ಧಾರದಿಂದ ಅವನೆಂದ "ಹೆಣ್ಣು ಮಕ್ಕಳು ಕಂಡವರೊಡನೆ ಅಷ್ಟು ದೂರ ಹೋಗುವುದಂಟೇ ? ನಾಳೆ ನಿನ್ನನ್ನು ಕಟ್ಟಿಕೊಂಡವನು ಪುಣ್ಯವಂತನಾದರೆ ಎಲ್ಲಾ ತೋರಿಸುತ್ತಾನೆ. ಚಿಂತೆಯೇಕೆ ?"

ರಾಧೆಯ ಕಣ್ಣುಗಳು ಕಂಬನಿ ಸೂಸಿದುದನ್ನು ಕತ್ತಲೆಯಲ್ಲಿ ಯಾರೂ ನೋಡಲಿಲ್ಲ. ಕುಕ್ಕೆಯೊಳಗನ್ನು ಸೇರಿಸಿ ತೂತು ಮುಚ್ಚಿ ಎತ್ತಿಟ್ಟಳು ಗಂಗಮ್ಮ. ಉಟ್ಟ ಸೀರೆ ಇನ್ನೂ ಆರಿರಲಿಲ್ಲ. ಹಾಗೇ ಮುದುಡಿ ಕುಳಿತು ಮಗಳೊಂದಿಗೆ ರಾಗಿ ಬೀಸಲು ಕೈಹಚ್ಚಿದಳು. ಹಲಸಿನ ಬೀಜಗಳನ್ನು ಜೆಂಕಿಗೆ ಹಾಕಿ ಸುಡುತ್ತಾ ಮುದ್ದಣ್ಣ ಅಂದ. "ಸೋಮಣ್ಣನಿಗೆ ಕೈಲಿ ನಾಲ್ಕು ಕಾಸು ಕೂಡಿತು ಅಂದರೆ ಸಾಕು. ಹೋಗಿ ಪುಡಿ ಹಾರಿಸಿ ಬರುತ್ತಾನೆ. ಸಾಯುವ ಕಾಲದಲ್ಲಿ ಗಂಜಿ ಇಲ್ಲದಿದ್ದಾಗ ಅರ್ಥವಾದೀತು ಈ ವ್ಯರ್ಥ."

ತಾಯಿ ಮಗಳು ಮಾತಾಡದೆ ಗರಗರ ಬೀಸಿದರು.

ಮುದ್ದಣ್ಣನ ವಿಚಾರಧಾರೆ ಮುಂದುವರಿಯಿತು. "ಈ ಹಳ್ಳಿ ಹುಂಬರಿಗೆ ಮೈಸೂರು ದಸರ ಷೋಕಿ ಹತ್ತಿದರೆ ಮುಗಿಯಿತು. ನಾಳೆ ಮಕ್ಕಳೂ ಅತ್ತಲೇ ಹತ್ತಿಬಿಟ್ಟಾರು ! ಸೋಮಣ್ಣ ಸಾಯುವುದಕ್ಕೆ ಹಾಸಿಗೆ ಹತ್ತಿದಾಗ ಮಕ್ಕಳು ಮೈಸೂರಿನಲ್ಲಿ ದೌಲತ್ ಮಾಡದಿದ್ದರೆ ಕೇಳು ! ಮರುಳು...ಶುದ್ಧ ಮರುಳು !"

"......"

"ಈ ಸೋಮಣ್ಣನಿಗೆ ಬುದ್ಧಿ ಏಕಿಲ್ಲ ? ಕಾಲ ಕೆಟ್ಟಾಗ ಬುದ್ಧಿ ಓಡುವುದಿಲ್ಲವಂತೆ. ಹಾಗಾಗಿರಬೇಕು ಇವನ ಪಾಡು ! ಒಂದು ಸಲ ಹುಡುಗರಿಗೆ ಪೇಟೆ ಪಟ್ಟಣಗಳ ರುಚಿ ತೋರಿಸಿದರೆ ಮುಗಿಯಿತು. ಅನಂತರ ನೋಡಿಕೊ ಹೇಗಾಗುತ್ತಾರೆ ಅಂತ ! ನಾಳೆ ಇವನ ಮಕ್ಕಳು

ಮನೆ ಮಠ ಮಾರಿ ಜಮೀನು ಅಡವಿಟ್ಟು, ಮೈಸೂರು ದಸರ ಜಂಬೂ ಸವಾರಿ ನೋಡಿ, ಮಜಾ ಮಾಡಿ, ಹೊಟ್ಟೆಗೆ ಹಿಟ್ಟು ಇಲ್ಲದೆ ಭಿಕ್ಷೆ ಬೇಡ ದಿದ್ದರೆ ಕೇಳು !"

ಹಲಸಿನ ಬೀಜವನ್ನು ಮೆಲ್ಲುತ್ತ ಪಚಪಚ ನುಡಿದ ಮುದ್ದಣ್ಣ.

ಹಿಟ್ಟು ಬೀಸುವ ಗರಗರ ಸದ್ದಿನಲ್ಲಿ ಮುದ್ದಣ್ಣನ ವಿಚಾರಧಾರೆ ಕಿವಿಗೆ ಬೀಳದಿದ್ದರೂ ಅವನು ಹೇಳತೊಡಗಿದ. ಮುದ್ದಣ್ಣನಿಗೆ ಅತಿ ಸಮೀಪವಾಗಿದ್ದ ರಾಧಾ ಅಲ್ಪಸ್ವಲ್ಪ ಕೇಳಿಸಿಕೊಂಡರೂ ಕೇಳಿಸಿಕೊಳ್ಳ ದವಳಂತೆ ಗರಗರ ಗರಗರ ಬೀಸಿದಳು. ತನುಮನಗಳ ಆ ವೇಗದಲ್ಲಿ ವಿಷಯ ಬೇಡವಾಗಿದ್ದರೂ ಕಿವಿಯ ಮೇಲೆ ಬೀಳುತಿತ್ತು.

"ಸೋಮಣ್ಣ ಮೊದಲು ನಾಲ್ಕು ದಿನ ಅಂದುಕೊಂಡಿದ್ದನಂತೆ ಮನೆಯವರಾರೂ ಒಪ್ಪದುದರಿಂದ ಆರು ದಿನ ಅಂದುಕೊಂಡನಂತೆ ! ಅಲ್ಲಿಗೂ ಮಕ್ಕಳೂ ಮರಿ ಒಪ್ಪದೆ ಹೋದುದರಿಂದ ಹತ್ತು ದಿನವೂ ಇದ್ದು ನೋಡಿಕೊಂಡು ಬರುತ್ತಾನಂತೆ ! ಇಲ್ಲಿ ಗದ್ದೆ ಗಣ್ಣಗಳೆಲ್ಲಾ ದನಗಳ ಪಾಲಾಗುವುದೇ ಸೈ. ಆಮೇಲೆ ಏನು ತಿಂದಾನು ? ಈಗ ನನಗೆ ಬಂತು ಗೋಳು. ನೋಡು ನೋಡುತ್ತಾ ಸುಮ್ಮನೆ ಕೂಡು ವಂತಿಲ್ಲ ?"

"......"

"ಪಾಪ, ಆ ಕಾಳಜ್ಜನನ್ನು ಮನೆಯ ಕಡೆ ನೋಡುವುದಕ್ಕೆ ಗೊತ್ತುಮಾಡಿದ್ದಾರೆ ! ಕಣ್ಣು ಕಾಣದ ಮುದುಕನಿಗೆ ಹಗಲೂ ಒಂದೇ, ರಾತ್ರಿಯೂ ಒಂದೇ."

"ರಾತ್ರಿ ಕಾವಲಿಗೆ ಬೇರೆ ಮಾಡಿದ್ದಾರಂತಪ್ಪ !"

"ಓ ಹೋ ಹೋ...!

"ಬಿಡು, ಮನೆ ಹಾಳಾಯ್ತು ! ಎರಡಾಳಿಗೆ ಸಂಬಳ ! ಮೈಸೂರಿ ನಲ್ಲಿ ಮಜಾ !" ಏರಿದ ದನಿಯಲ್ಲಿ ಅಂದ ಮುದ್ದಣ್ಣ.

ತಾಯಿ ಮಗಳು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಇಬ್ಬರ ತುಟಿಯೂ ಬಿರಿಯಲಿಲ್ಲ, ಹಿರಿಯಾಸೆಯ ಮೇಲೆ ಹೆಗ್ಗಲ್ಲು ಬಿತ್ತು. ತನುಮನಗಳ ನೋವು ಹನಿಹನಿಯಾಗಿ ಕಣ್ಣುಗಳಲ್ಲಿ ಸುರ

ಯಿತು. ಉದುರಿದ ಕಂಬನಿಗಳನ್ನು ಉಟ್ಟ ಬಟ್ಟೆ ಹೀರಿತು. ರಾಧಾ ಎದ್ದು ಹೋಗಿ ಹಿತ್ತಿಲಲ್ಲಿ ಮುಖ ತೊಳೆದುಕೊಂಡು ಕಂಬನಿಗಳನ್ನು ನಿವಾರಿಸಿಕೊಂಡು ಒಳಬಂದಳು. ಗಂಗವ್ವನೆಂದ ನುಡಿ ಕಿವಿಯಲ್ಲಿ ಮೆಲ್ಲನೆ ಮರ್ಮರಿಸಿತು.

....ಹೆಣ್ಣಾಗಿ ಹುಟ್ಟಿ ಅದೂ ಇದೂ ಬಯಸಿದರೆ ಹೇಗಾದೀತು ಹೇಳು."

....ಹೆಣ್ಣಾಗಿ ಹುಟ್ಟಿ ಹೆದರಿಕೊಂಡರೆ ಹೇಗೆ ? ಇನ್ನು ಮುಂದೆ ಎಂಥೆಂಥ ನೋವುಗಳಿವೆಯೋ ?

ಮರುದಿನ ಜಾನಕಮ್ಮ ಸೋಮಣ್ಣ ಬಂದು ಮನೆಯ ಕಡೆ ನೋಡಿ ಕೊಳ್ಳಲು ಕೇಳಿಕೊಂಡು ಹೋಗುವಾಗ ರಾಧಾ ಹಿತ್ತಿಲಲ್ಲಿ ನೀರವವಾಗಿ ಕಂಬನಿಗರೆದಳು. ಜಾನಕಮ್ಮ ರಾಧೆಗಾಗಿ ಒಳಗೆಲ್ಲ ನೋಡಿ ಕಾಣಿಸ ದಿರಲು ಗದ್ದೆಯ ಕಡೆ ಹೋಗಿರಬಹುದೇನೋ ಎಂದುಕೊಂಡಳು. ಮೂರು ದಿನಗಳು ಸದ್ದಿಲ್ಲದೆ ಉರುಳಿದುವು. ಸೋಮಣ್ಣ ಹೊರಡುವ ಗಳಿಗೆ ಬಳಿ ಸಾರಿ ಬಂತು. ಪಾರಿಜಾತದ ಗಿಡದ ಬುಡದಲ್ಲಿ ನಿಂತು ಕುಂತಿ ಕರೆದಳು "ರಾಧೀ...ರಾಧೀ !"

ರಾಧಾ ಇಲ್ಲಿಂದಲೇ ಓಗೊಟ್ಟಳು.

"ಬಾ ರಾಧಿ ಇಲ್ಲಿ."

ಬಳಿಗೆ ಹೋಗುತ್ತಲೂ ರಾಧಾ "ಕುಂತಿ, ನೀನಲ್ಲಿಂದ ಬಂದ ಮೇಲೆ ಎಲ್ಲವನ್ನೂ ಚಾಚೂ ತಪ್ಪದೆ ಹೇಳು ಆಯಿತೇ ?"

ಒಮ್ಮಿಂದೊಮ್ಮೆಲೇ ಕಣ್ಣುಗಳು ಕಟ್ಟೆಯೊಡೆದ ಕೆರೆ ಯಂತಾದುವು.

"ಸುಮ್ಮನಿರು ಚಿನ್ನಾ ! ಈ ವರ್ಷ ಆಗದಿದ್ದರೇನು ? ಇನ್ನೆಂದೂ ಆಗದೇ ? ನಾನು ಬಂದನಂತರ ನಿನಗೆಲ್ಲಾ ಹೇಳುವೆ."

"ನಾನು ಗಂಡಾಗಿ ಹುಟ್ಟಿದ್ದರೆ ನಿಮ್ಮ ಜೊತೆ ಖಂಡಿತವಾಗಿಯೂ ಬರುತಿದ್ದೆ. ಎಲ್ಲಾದರೂ ಕೂಲಿ ನಾಲಿ ಮಾಡಿ ಸಾಲ ತೀರಿಸುತಿದ್ದೆ."

"ಹೋಗಲಿ ಬಿಡು ರಾಧಾ. ಮತ್ತೇಕೆ ಆ ಸುದ್ದಿ ?"

"ಹೆಣ್ಣು ಹುಡುಗಿಯನ್ನು ಕಂಡವರ ಜೊತೆ ಕಳುಹಿಸುವುದೇ

ಎಂದರು ಅಪ್ಪ ಅಮ್ಮ. ಅಯ್ಯೋ, ನಾನು ಗಂಡಾಗಿದ್ದಿದ್ದರೆ ನಿಮ್ಮ ಜೊತೆ ಸುಖವಾಗಿ ಬರಬಹುದಾಗಿತ್ತು ಅಲ್ವಾ ?"

"ಓ...ಹೋ...ಹೋ ! ನೋಡಿದರೆ ಇನ್ನೂ ಹನ್ನೆರಡು ವರುಷ, ಅಷ್ಟರೊಳಗಾಗಿ ಹೆಣ್ಣಾಗಿಬಿಟ್ಟೆ !" ಮುಗುಳು ನಕ್ಕಳು ಕುಂತಿ.

ರಾಧಾ ಮಾತಾಡಲಿಲ್ಲ.

"ನಾವು ಬರುವವರೆಗೆ ದನ ಕರ ಕುರಿ ಕೋಳಿಗಳನ್ನು ಒಂದಿಷ್ಟು ನೋಡಿಕೊಳ್ಳುತ್ತಿರು ರಾಧಿ ! ಕಾಳಜ್ಜನಿಗೆ ಕಣ್ಣು ಬಹಳ ಮಂದ. ಆಯಿತೆ ?"

"ಹ್ಞೂ..." ಎಂದಳು. ಅಂತರಂಗ ಚೀರಿತು....ನೀವು ಆನೆ ಕುದುರೆ ನೋಡಿದರೆ ನಾವು ದನ ಕುರಿನಾದರೂ ನೋಡಬೇಕಲ್ಲ ?

ಕುಂತಿ ಹೇಳಿಕೊಂಡು ಹೊರಟಳು. ನೆರೆಮನೆಯಂಗಳದಲ್ಲಿ ಎತ್ತಿನ ಗಾಡಿ ಸಜ್ಜಾಗಿ ನಿಂತುದುದನ್ನು ನೋಡಲಾರದೆ ನೋಡಿ ಒಳಬಂದಳು ರಾಧಾ. ನೆರೆಮನೆಯವರು ಹೊರಡುತ್ತಾರೆಂದು ಬಾಗಿಲಲ್ಲಿ ಗಂಗಮ್ಮ ಕಾದು ನಿಂತಿದ್ದಳು. ರಾಧಾ ಬಳಿಗೆ ಬರುತ್ತಲೂ ಕೈಗಳು ಅವಳನ್ನು ಬಳಸಿದುವು. ನೋಡಿದರೆ ಮೈ ಕಾದ ಹೆಂಚಿನಂತೆ ಸುಡುತ್ತಿದೆ.

"ನಿನ್ನೆ ಮೊನ್ನೆಯೆಲ್ಲಾ ನೆಗಡಿ ಇತ್ತು. ಇವತ್ತು ಜ್ವರವೇ ಬಂದಿದೆ. ಮಳೆಯಲ್ಲಿ ನೆನೆಯಬೇಡ ಎಂದರೆ ಕೇಳಲಿಲ್ಲ." ಗಾಬರಿಯಿಂದ ನುಡಿದಳು ಗಂಗಮ್ಮ.

ನೆರೆಮನೆಯಂಗಳದಿಂದ ಭರ್ತಿ ಗಾಡಿ ಗೈಲು ಗೈಲೆಂದು ಗೆಜ್ಜೆಗಳ ಮಧುರ ದನಿಗೈಯುತ್ತಾ, ಗಡಬಡ ಸದ್ದನ್ನೊಳಗೊಂಡು ಹೊರಟಿತು.

ರಾಧೆಯ ಕಣ್ಣಂಚಿನಲ್ಲಿ ತುಂಬಿ ತುಳುಕುತಿದ್ದ ಕಂಬನಿ ಧಾರಾಕಾರವಾಗಿ ಕೆನ್ನೆಯ ಮೇಲಿಳಿಯಿತು.

o o o o

ಹೊತ್ತು ಮೆಲ್ಲನೆ ಮೇಲೇರುತಿತ್ತು. ಹಳ್ಳಿಯ ವಾತಾವರಣ ತಣ್ಣಗೆ ತಂಪಾಗಿತ್ತು.

ಅಚ್ಚನಹಳ್ಳಿಯಿಂದ ಶಂಕರ ಬಂದಾಗ ಹೊತ್ತು ಇನ್ನೂ ಮೇಲೇರಿರಲಿಲ್ಲ. ಸೋದರಳಿಯನನ್ನು ನೋಡುತ್ತಲೂ ಗಂಗಮ್ಮ ಆತ್ಮೀಯತೆಯಿಂದ

ಬಲವಮಾಡಿಕೊಂಡಳು. ಶಂಕರ ಸಾಲ್ಕಾರು ವರ್ಷಗಳಿಂದ ಮೈಸೂರಿನಲ್ಲಿ ಓದುತ್ತಿದ್ದ. ದಸರ ರಜೆಗಾಗಿ ಊರಿಗೆ ಬಂದವನು ಸೋದರತ್ತೆಯನ್ನು ನೋಡಿ ಹೋಗಲು ಮಾದೇನಹಳ್ಳಿಗೆ ಬಂದಿದ್ದ. ಗಂಗಮ್ಮ ಬೆಳಗಿದ ತಂಬಿಗೆಯಲ್ಲಿ ಕೈಕಾಲು ತೊಳೆಯಲು ನೀರು ಕೊಟ್ಟು ಯೋಗಕ್ಷೇಮ ವನ್ನು ವಿಚಾರಿಸಿಕೊಂಡಳು.

ಹಿಂದಣ ಅಂಗಳದಲ್ಲಿ ಆಡುತಿದ್ದ ರಾಧಾ ಶಂಕರನ ದನಿಯನ್ನು ಕೇಳುತ್ತಲೂ ಓಡಿಬಂದು ಮೈಯೆಲ್ಲಾ ಅಚ್ಚರಿಯ ಬೀಡಾಗಿ ಕೊರಳು ಕೊಂಕಿಸಿ ನಿಂತು "ಇದೇನು ಶಂಕರೂ ?" ಎಂದಳು.

ಅವಳ ಹೊಸ ರೀತಿಯನ್ನು ನೋಡಿ ಶಂಕರನಿಗೂ ಅಚ್ಚರಿ ಮೂಡಿತು. ನಗುತ್ತಾ ಅವನೆಂದ "ಏನು ವಿಶೇಷ ?"

"ನೀನೆಲ್ಲಿಂದ ಬಂದೆ ?"

"ಅಚ್ಚನಹಳ್ಳಿಯಿಂದ."

"ಮೈಸೂರಿನಿಂದ ಯಾವಾಗ ಬಂದೆ ?"

"ನಿನ್ನೆ ಮಧ್ಯಾಹ್ನ."

"ಇದೇನಾಶ್ಚರ್ಯ ?" ತುಟಿಯ ಮೇಲೆ ಬೆರಳಿಟ್ಟು ಕಣ್ಣುಗಳ ನ್ನರಳಿಸಿ ನಿಂತಳು ಹುಡುಗಿ.

ಶಂಕರನಿಗೆ ಅವಳ ಮಾತಿನ ಸರಣಿ ಅರ್ಥವಾಗಲಿಲ್ಲ. ಮಿಕಿ ಮಿಕಿ ನೋಡಿ "ಏನೇ ಅದು ?" ಎಂದ. ಮುಖಬಿಂಬದಲ್ಲಿ ಎಳೆನಗು ಲಾಸ್ಯ ವಾಡಿತು.

"ಶಂಕರೂ, ಇಲ್ಲಿಯವರೆಲ್ಲಾ ಅಲ್ಲಿಗೆ ಹೋಗಿದ್ದಾರೆ. ನೀನಲ್ಲಿಂದ ಇಲ್ಲಿಗೆ ಬಂದಿದ್ದಿ, ಆಶ್ಚರ್ಯ ಅಲ್ಲವೇ ?"

"ಇಲ್ಲಿಯವರು ಅಲ್ಲಿಗೋದರೆ ನಾನ್ಯ ಬರಬಾರದೇ ?"

"ನಿನಗೆ ದಸರ ನೋಡುವ ಆಸೆ ಇಲ್ಲವೆ ? ದಸರ ಸಮಯದಲ್ಲಿ ಅಲ್ಲಿಂದ ಇಲ್ಲಿಗೆ ಬಂದಿದ್ದೀ ! ನಿಜವಾಗಿಯೂ ಇದೊಂದು ಹೊಸ ಸುದ್ದಿ !"

"ನೋಡಿದ್ದನ್ನೇ ಏನು ನೋಡುವುದು ?"

"ಸರಿ ಬಿಡಪ್ಪಾ, ಇದೊಳ್ಳೆ ಚೆನ್ನಾಗಿದೆ !" ಹುಬ್ಬೆತ್ತಿ ಹಸನಾದ

ನಗೆ ಬೀರಿ ನಿಂತಳು ಹುಡುಗಿ. ಕಣ್ಣು ಮುಖಗಳಲ್ಲಿ ಅಚ್ಚರಿಯ ಮುದ್ರೆ ತಾನೇ ತಾನಾಗಿತ್ತು. "ಇಲ್ಲಿಂದ ಹೋಗುವುದಾದರೆ ಬೇಡ. ನೀನು ಅಲ್ಲಿಂದ ಇಲ್ಲಿಗೆ ಬಂದಿದ್ದೀಯಲ್ಲಾ ಅದೇ ಆಶ್ಚರ್ಯ!"

"ಅಯ್ಯೋ ಹೆಣ್ಣೆ!" ಕಿಲಕಿಲ ನಕ್ಕ ಶಂಕರ.

"ಅಲ್ಲಪ್ಪಾ, ಇಲ್ಲಿಯವರೆಲ್ಲಾ ಸಡಗರದಿಂದ ಅಲ್ಲಿಗೆ ಹೋಗಿದ್ದಾರೆ!"

"ಇವರು ದಸರ ನೋಡಲಿಲ್ಲ, ಹೋಗಿದ್ದಾರೆ. ನಾನೇಕೆ ಅಲ್ಲಿರಲಿ? ಇಲ್ಲಿ ವರ್ಷವೂ ಮಾರಿ ಜಾತ್ರೆಯಾಗುತ್ತದೆಯಷ್ಟೆ? ನೀನು ಸಲಸಲವೂ ಹೋಗುತ್ತೀಯೇನು?"

"ಇಲ್ಲಿ ಇನ್ನೇನುಂಟು? ಕಥೆ, ಪುರಾಣ ಜಾತ್ರೆ ಯಾವುದೂ ಇಲ್ಲ. ಈ ಊರವರಿಗೆ ಮಾರಿ ಜಾತ್ರೇನೇ ಸ್ವರ್ಗ! ಮಾರಿ ಜಾತ್ರೆಗೆ ಹೋದರೆ ನನ್ನ ಹೂವಿನ ಲಂಗ ಈಚೆಗೆ ಬರುತ್ತೆ. ಇಲ್ಲದಿದ್ದರೆ ಅದು ಪೆಟ್ಟಿಗೆಯಲ್ಲೇ ನಾನಿಲ್ಲೇ!" ರಾಗವಾಗಿ ನುಡಿದಳು ರಾಧಾ.

"ಹೋಗಲಿ ಬಿಡು. ನಿಮಗೆಷ್ಟು ಹೂವಿನ ಲಂಗ ಇವೆ ಈಗ?"

"ಇನ್ನೆಷ್ಟು ಇರಬಹುದು ಹೇಳು? ನಂಜಯ್ಯನ ಮಗಳ ಮದುವೆಯಲ್ಲಿ ಕೊಂಡು ತಂದದ್ದು ಒಂದೇ ಲಂಗ. ಅದಕ್ಕೂ ಎಷ್ಟು ಅತ್ತು ಕಣ್ಣೀರು ಕರೆಯಬೇಕಾಯಿತು ಗೊತ್ತಾ?"

"ಹೆಣ್ಣೆ! ಲಂಗ ಬರುವುದಾದರೆ ಏಕೆ ಕಣ್ಣೀರು ಕರೆಯಬಾರದು? ಇನ್ನಷ್ಟು ಕರೆದರೆ ಇನ್ನೊಂದು ಲಂಗ ಬರುತ್ತದೆ!"

"ಓಹೋ.... ಹಾಗೆಲ್ಲಾ ಬರುವ ಹಾಗಿದ್ದರೆ ಎಷ್ಟಾದರೂ ಕಣ್ಣೀರು ಕರೆಯಬಹುದಾಗಿತ್ತು. ಮೈಸೂರಿಗೆ ಕಳುಹಿಸಿ ಅಂತ ಅತ್ತು ಕರೆದು ಎಲ್ಲಾ ಆಯಿತು ನಮ್ಮ ಭಾಗಕ್ಕೆ 'ಅಯ್ಯೋ' ಎನ್ನುವವರಿಲ್ಲ."

"ಪಾಪ... ಹುಡುಗಿ!"

"ನೀನೂ ಹಾಗೇ ಅಂದು ಬೆಣ್ಣೆಯಂಥಾ ಮಾತಾಡಿ ನುಣುಚಿಕೊಂಡು ಬಿಡು."

ಶಂಕರ ನಕ್ಕುಬಿಟ್ಟ.

"ನೀನೇ ಪುಣ್ಯವಂತ ಶಂಕರಾ."

"ಅಯ್ಯೋ, ನನ್ನ ಪುಣ್ಯ ನನಗೆ. ನಿನ್ನ ಪುಣ್ಯ ನಿನಗೆ. ಒಂದು ಹೊತ್ತು ಕೂಳು ತಿಂದು ಓದುತ್ತಿದ್ದೇನೆ. ಹೊಟ್ಟೆ ಹಸಿದಷ್ಟು ನೀರು ಕುಡಿಯುವುದೇ ನನ್ನ ಪುಣ್ಯ."

"ರಾಜರಿರುವ ಊರಿನಲ್ಲಿದ್ದಿ ! ರಾಜಕುಮಾರ ಬಂದ ಹಾಗೆ ಬರುತ್ತಿ ! ಆ ಪುಣ್ಯ ಸಾಲದೇ ?"

"ಓ....ಹೋ...ಹೋ !" ಶಂಕರ ಗಟ್ಟಿಯಾಗಿ ನಕ್ಕುಬಿಟ್ಟ. ರಾಧೆಯ ಇನಿದನಿಯೂ ಒಂದುಗೂಡಿ ಹರಿಯಿತು.

"ನಿನ್ನಂತೆ ನಾನೂ ಗಂಡು ಹುಡುಗನಾಗಿದ್ದಿದ್ದರೆ ಸುಖವಾಗಿ ದಸರ ನೋಡಬಹುದಾಗಿತ್ತು !" ಸಪ್ಪೆ ಮೋರೆಯಿಂದ ನುಡಿದಳು ರಾಧ.

"ಶುದ್ಧ ಪೆದ್ದಿ ! ಹೆಣ್ಣಾದರೇನು ? ಗಂಡಾದರೇನು ? ದೇವರು ಕಣ್ಣು ಕೊಡಲಿಲ್ಲವೇ ?"

"ದೇವರು ಕಣ್ಣು ಕೊಟ್ಟಿದ್ದಾನೆ, ಹೌದು ! ಆದರೆ ವರ ಕೊಡಲಿಲ್ಲ."

ಇಬ್ಬರ ಮುಖದಲ್ಲೂ ನೀರಸ ನಗೆ ಅರಳಿತು.

ಶಂಕರನ ಬಳಿಗೆ ಸರಿದು ಕುಳಿತುಕೊಂಡೇ ಕೇಳಿದಳು ರಾಧೆ. "ಮೈಸೂರಿಗೆ ರೈಲು ಬರುತ್ತದಂತಲ್ಲಾ, ಅದು ಅಲ್ಲೇ ಇರುತ್ತದೆಯೇ ?" ಪ್ರಶ್ನೆ ಹೊರಬಿದ್ದಾಗ ಕಣ್ಣುಗಳಲ್ಲಿ ಆಸಕ್ತಿ ಒಡೆದು ಮೂಡಿತು.

"ಇಲ್ಲ, ಮುಂದಿನೂರಿಗೆ ಹೋಗುತ್ತದೆ."

"ಅದೇಕೆ ಅಲ್ಲಿ ಇರುವುದಿಲ್ಲ ?"

"ಅದು ಅಲ್ಲಿದ್ದು ಮಾಡುವುದೇನು ? ಅದಕ್ಕೆ ದಸರ ನೋಡ ಬೇಕಾಗಿದೆಯೇ ? ಹೋಗುತಿದ್ದರೆ ಜನರನ್ನಾದರೂ ಒಯ್ಯಬಹುದಲ್ಲ ?"

ನಕ್ಕು ನುಡಿದಳು ರಾಧಾ "ನಾನೇ ರೈಲಾಗಿದ್ದಿದ್ದರೆ ಊರೆಲ್ಲಾ ಸುತ್ತಬಹುದಾಗಿತ್ತು."

"ನಿಜ ಕಣೆ, ಸೊಗಸಾದ ಯೋಚನೆ ; ನಾನೂ ನಿನ್ನ ಮೇಲೆ ಸವಾರಿ ಮಾಡಬಹುದಾಗಿತ್ತು !"

ಒಡನೆ ನಗುವಿನಲೆ ಉಕ್ಕಿ ಹರಿಯಿತು.

"ನನಗೆ ಮೈಸೂರು ನೋಡೋಣವೆಂದು ಬಲು ಆಸೆ. ನಮ್ಮಂತಹ ವರು ಆಸೆಪಟ್ಟೇನು ಪ್ರಯೋಜನ ಹೇಳು ?"

"ಸರಿ, ಸರಿ. ದಿನಾ ಹೋಗಬೇಕೆ? ಒಂದ್ಸಲ ಹೋಗಲಿಕ್ಕೆ ಎಷ್ಟು ಖರ್ಚಾದೀತು? ಮಾವನನ್ನು ಕೇಳಿನೋಡು."

"ನೀನೊಂದು ಸಲ ಹೇಳಿ ನೋಡು ಶಂಕರೂ" ಒಡನೆ ಗೋಗರೆದಳು ರಾಧಾ.

"ನಾನು ಹೇಳಿದರೆ ಕೇಳಿಯಾರೆ? ನೀನೇ ಹೇಳಬೇಕು."

"ಅವರೊಪ್ಪುವುದಿಲ್ಲ."

"ನಾನಲ್ಲಿದ್ದಾಗ ಬಂದರೆ ಇಡೀ ಮೈಸೂರನ್ನು ತೋರಿಸುವೆ."

"ನೀನೇನೋ ತೋರಿಸುತ್ತಿ. ನಾನು ಇಲ್ಲಿಂದ ಹೊರಡುವ ಪಾಡು ಹೇಳು."

ಗಂಗಮ್ಮ ಹುರಿಗಾಳನ್ನೂ ಬಿಸಿ ಕಾಫಿಯನ್ನೂ ತಂದು ಮುಂದಿಟ್ಟು "ನಿನ್ನೆ ನೆರೆಯುವವರು ಮೈಸೂರಿಗೆ ಹೋದರೆ ಹಗಲೆಲ್ಲಾ ಕಣ್ಣೀರು ಕರೆದಿದ್ದಾಳೆ. ಅವಳನ್ನು ಸಂತೈಸುವುದಕ್ಕಾಗಿ ಹುರಿಗಾಳು ಹುರಿದುಕೊಟ್ಟೆ ಶಂಕರೂ."

"ಅಯ್ಯೋ, ಹುಡುಗಿ! ಹುರಿಗಾಳು ತಿಂದು ಸುಮ್ಮನಾದೆ....?"

"ತಿನ್ನುವುದಕ್ಕಿದ್ದರೆ ಅಳು ಹೋಗಲೇಬೇಕಲ್ವಾ?" ತುಟಿಗಳಲ್ಲಿ ನಗು ಮೂಡಿದರೂ ಕಣ್ಣುಗಳು ರಂಗು ತಳಿದುವು. ಮಳೆ ಬಿಸಿಲು ಒಮ್ಮೆಲೆ ಮೂಡುವಂತೆ.

"ಮಾದೇನಹಳ್ಳಿಗೆ ರೈಲು ಬರುತ್ತೆ ಎನ್ನುತ್ತಾರಲ್ಲಾ. ಅದು ನಿಜವೇ ಶಂಕರೂ?" ಗಂಗಮ್ಮ ಆಸಕ್ತಿಯಿಂದ ಕೇಳಿದಳು.

"ಯಾರು ಹೇಳಿದ್ದು?"

"ಅಪ್ಪ ಹಾಗೆಂದರು. ನಿಜವಾಗಿಯೂ ಬರುತ್ತದೆಯೋ?"

"ದಾರಿ ಸರ್ವೆ ಮಾಡುತ್ತಿದ್ದಾರಂತೆ." ಉತ್ಸಾಹದಿಂದ ನುಡಿದಳು ಗಂಗಮ್ಮ.

"ಹಾಗಾದರೆ ಬಂದೀತು. ನೀವೆಲ್ಲ ಮನೆಬಾಗಿಲಲ್ಲೆ ರೈಲು ನೋಡಬಹುದು." ಶಂಕರ ಕಣ್ಣರಳಿಸಿದ. ತುಟಿಗಳಲ್ಲಿ ಎಳೆನಗು ನಲಿಯಿತು.

"ನನಗೆ ಎಂದಿಗೆ ರೈಲು ನೋಡುವೆನೋ ಎನ್ನಿಸುತ್ತಿದೆ."

"ಮುಂದಿನ ದಸರಕ್ಕೆ ರೈಲಿನಲ್ಲಿ ಹೊರಟುಬಿಡಿ."

"ಅಪ್ಪ ಹೊರಡಬೇಕಲ್ಲ ?"

"ಹೋಗಲಿ ಬಿಡು. ಮಾದೇನಹಳ್ಳಿಗೆ ರೈಲು ಬಂದರೆ ದಿನವೂ ನೋಡಬಹುದು ! ಅದು ದಸರಕ್ಕಿಂತ ಏನು ಕಡಿಮೆಯಾಗಲಿಲ್ಲ." ಒಂದು ಗಳಿಗೆ ತಡೆದು "ಏಳೆಂಟು ವರ್ಷಗಳ ಹಿಂದೆಯೂ ಒಮ್ಮೆ ಗುಲ್ಲು ಹತ್ತಿತ್ತು. ಅನಂತರ ಅದರ ಸದ್ದು ಹಾಗೇ ಅಡಗಿ ಹೋಯಿತು."

"ಇದೆಂಥಾ ವ್ಯವಹಾರವೋ ? ನಮ್ಮಂತಹವರಾಗಿದ್ದರೆ ಅದೆಂದೋ ಮುಗಿದು ಹೋಗುತಿತ್ತು !"

"ಅದ್ಹೇಗೆ ರಾಧೀ ?"

"ಸರಿ, ಇವರಂತೆ ನಾವು ವರ್ಷವೆಲ್ಲಾ ನಾಟಿ ಹಾಕುತ್ತಲೇ ಇದ್ದರೆ ಬೆಳೆ ಕೊಯ್ದೇವಾ ?"

"ನಿಜ ರಾಧಾ !" ಶಂಕರ ಮುಗುಳು ನಕ್ಕ.

"ರೈಲು ನಮ್ಮೂರಿಗೆ ಬರುವುದೆಂದರೆ ನಿಜವಾಗಿಯೂ ಪುಣ್ಯ. ಶಂಕರೂ."

ತಾಯಿ ಮಗಳ ಮುಖದ ಮೇಲೆ ಸಂತಸ ನಲಿಯಿತು.

"ಎಂದೋ ಬರುವ ರೈಲಿಗಾಗಿ ನೀವು ಕಾಯುತ್ತಾ ಕೂಡುವುದು ಬೇಡ. ಮುಂದಿನ ದಸರೆಗೆ ಎಲ್ಲರೂ ಹೊರಟುಬಿಡಿ. ಹೊರಡುವ ಮೊದಲು ನನಗೊಂದು ಕಾಗದ ಬರೆಸಿದರೆ ನಾನಲ್ಲಿ ನಿಮಗಾಗಿ ಕಾಯು ತ್ತಿರುವೆ."

ಆ ಮುಂದಿನ ವರ್ಷ ಈಗಲೇ ಬರಬಾರದೇ ? ಎನಿಸಿತು ರಾಧೆಗೆ. ಮುಂದಿನ ವರ್ಷಕ್ಕೂ ಅವರೊಪ್ಪಬೇಕಲ್ಲ ಎನಿಸಿತು ಗಂಗಮ್ಮನಿಗೆ. ಇಬ್ಬರೂ ಮನದಲ್ಲೇ ಮೆಲುಕು ಹಾಕಿದರು.

"ಮಾವ ನಿನ್ನನ್ನು ದೊಡ್ಡ ಮನಸ್ಸು ಮಾಡಿ ಮೈಸೂರಿಗೆ ಕಳು ಹಿಸಿದ್ದಾರೆ ಅಲ್ವಾ ?"

"ಹ್ಞೂ....ಅವರು ಸುಮ್ಮನೆ ಕಳುಹಿಸಲಿಲ್ಲ. ಗೌಡರ ಮನೆ ಕೃಷ್ಣ ಇಲ್ಲದಿದ್ದರೆ ನಾನೆಲ್ಲಿ ಮೈಸೂರು ಸೇರುತಿದ್ದೆ ? ಅತ್ತೂ ಕರೆದೂ ರಂಪಾಟ ಮಾಡಿದ ಮೇಲೆ ಕಳುಹಿಸಿದ್ದಾರೆ"

"ಹೋಗಲಿ ಬಿಡು, ನೀನು ಅದೃಷ್ಟ ಮಾಡಿದ್ದೆ. ದೇವರೂ

ಕೊಟ್ಟ, ಪೂಜಾರಿಯೂ ಕೊಟ್ಟ. ನಮಗೆ ಯಾವುದೂ ಇಲ್ಲ." ತನ್ನ ಅಳಲನ್ನು ಮನವಾರೆ ತೋಡಿಕೊಂಡಳು ರಾಧಾ.

"ಅದಕ್ಕೊಂದು ಗಳಿಗೆಯೂ ಬರಬೇಕಲ್ಲ ?"

ಗಂಗಮ್ಮನ ದನಿಯಲ್ಲಿ ಆಸೆ ನಿರಾಸೆಗಳು ತುಯ್ಯಲಾಡುತಿದ್ದುವು. ಮಗಳನ್ನು ಸಮಾಧಾನಪಡಿಸುವ ಸಲುವಾಗಿ ನುಡಿದಳು. ಹೃದಯ ಭಾರವಾಗಿತ್ತು.

ಒಂದು ಗಳಿಗೆ ಯೋಚಿಸಿ ಮುಗ್ಧ ದನಿಯಲ್ಲಿ ಕೇಳಿದಳು ರಾಧಾ "ನಾವು ದೇವರಿಗೆ ಹರಕೆ ಹೊತ್ತರೆ ?"

ಶಂಕರ ಗಟ್ಟಿಯಾಗಿ ನಕ್ಕು ನುಡಿದ "ಹಾಗೆಂದು ಯಾರಾದರೂ ಹರಕೆ ಹೊರುತ್ತಾರೇನೇ ?"

"ಇನ್ನೇನಪ್ಪಾ ಮಾಡುವುದು ? ನಮಗೆ ಅದೊಂದೇ ದಾರಿ !"

ಮೂವರ ಮುಖದಲ್ಲೂ ಎಳೆನಗು ಮಿನುಗಿತು.

"ಹಾಗಾದರೆ ಮಾರಿಗೊಂದು ಕೋಳಿ ಕೊಡ್ತೀನಿ ಅಂತ ಹರಕೆ ಹೊತ್ತುಕೊ. ಮೈಸೂರು ದಸರಾ ತೋರಿಸುತ್ತಾಳೆ ಮಾರಮ್ಮ !"

"ಹಾಗಲ್ಲ." ಕಿಲ ಕಿಲ ನಕ್ಕು ನುಡಿದಳು ರಾಧಾ "ಅಚ್ಚನಹಳ್ಳಿ ಶಂಭೋ ಶಂಕರನಿಗೆ ಹೋಳಿಗೆ ಪಾಯಸ ಕೊಡ್ತೀ ಅಂತ !"

ಒಡನೆ ಮೂವರೂ ಕಿಲಕಿಲ ನಕ್ಕರು.

o o o o

ಸುಯ್ ಸಯ್ಯನೆ ಸುಯ್ಯುತಿದೆ ಸುಯ್ಯೆಲರು.

ಚ್ಚೀ ಪ್ಚೀ ಗುಟ್ಟುತ್ತಿವೆ ಚಿಲಿಪಿಲಿ ಹಕ್ಕಿ.

ಬೆಳಗಿನ ಸುಂದರ ವಾತಾವರಣಕ್ಕೆ ಮನತೆತ್ತು, ಶಂಕರ ಗದ್ದೆಯ ಕಡೆ ಹೊರಟ. ರಾಧಾ ಹಿಂಬಾಲಿಸಿದಳು. ಊರ ಮಂದಿ ಕಳೆ ಕೀಳುವ ಕೆಲಸದಲ್ಲಿ ತೊಡಗಿದ್ದರು. ಹೂ ಬಿಸಿಲು ತನುಮನಗಳಿಗೆ ಹರ್ಷವನ್ನೂಡಿಸುತಿತ್ತು. ಶಂಕರನೊಂದಿಗೆ ಅಡ್ಡಾಡುತ್ತಾ ರಾಧಾ ಕೆಲಸದ ತಾವಿಗೆ ಹೋದಳು. ಹೆಂಗಳೆಯರನೇಕರು ಮೈಬಾಗಿ ಕಳೆ ಕೀಳುತಿದ್ದರು. ಅಂಚು ಕಟ್ಟುವ, ನೀರು ಕಟ್ಟುವ ಕೆಲಸದಲ್ಲಿ ಗಂಡಸರು ಮಗ್ನರಾಗಿದ್ದರು.

ಗದ್ದೆಯಂಚಿನಲ್ಲಿ ನಿಂತು ಎಳೆಬಿಸಿಲಿಗೆ ಮೈಗೊಟ್ಟು ಸುತ್ತಮುತ್ತ ಕಣ್ಣಾಡಿಸಿದಳು ರಾಧಾ.

ಪ್ರಕೃತಿಯ್ಯೆಸಿರಿ ಮನದೈಸಿರಿಯನ್ನು ಉಕ್ಕೇರಿಸಿತು.

"ಇಲ್ಲಿಲ್ಲಾ ಅಡ್ಡಾಡುವಂತಿದ್ದರೆ ಮನೆಗ್ಹೋಗಲು ಮನಸ್ಸೇ ಬರುವುದಿಲ್ಲ ಗೊತ್ತಾ ?"

"ನೀನು ನೋಡಿದ್ದೇ ನೋಡಿ ಹೀಗೆನ್ನುತ್ತಿ. ಮೈಸೂರು ದಸರ ನೋಡಿದರೆ ಇನ್ನೇನೆನ್ನುತ್ತೀಯೋ ! ಚಾಮುಂಡಿ ಬೆಟ್ಟದ ಮೇಲೆ ನಿಂತು ಕೆಳಗಡೆ ನೋಡಿದರೆ ರಾತ್ರಿ ಹೊತ್ತು ಹೇಗಿರುತ್ತೆ ಗೊತ್ತಾ ? ನಕ್ಷತ್ರಲೋಕ ಕ್ಕಿಂತಲೂ ಮಿಗಿಲಾಗಿ ತೋರುತ್ತೆ ಮೈಸೂರು ! ನನಗೆ ಬಸ್ಸಿನಲ್ಲಿ ಹೋಗಲು ಕಾಸಿರುವುದಿಲ್ಲ. ವಾರಕ್ಕೊಮ್ಮೆಯಾದರೂ ಬೆಟ್ಟ ಹತ್ತಿ ಹೋಗಿ ಅಲ್ಲಿ ಹೊತ್ತು ಕಳೆದು ಚಾಮುಂಡಿಗೊಂದು ನಮಸ್ಕಾರ ಹಾಕಿ ಬರುವೆ. ಅಲ್ಲಿಗೆ ಹೋಗಿಬರುವುದೆಂದರೆ ಮನಸ್ಸಿಗೆ ಎಷ್ಟು ಹಿತ ಗೊತ್ತಾ ?"

ರಾಧಾ ಒಮ್ಮೆಲೇ ಪುಳಕಿತಳಾದಳು.

ಕೆಲವೇ ಕ್ಷಣಗಳೊಳಗಾಗಿ ಸರಕಾರಿ ಮಂದಿ ರೈಲು ಹಾದಿಯನ್ನು ಸರ್ವೇ ಮಾಡುತ್ತಾ ಅತ್ತಲೇ ಬಂದರು. ನೆರೆಯೂರಿನಲ್ಲಿ ಗದ್ದೆಯ ಮಧ್ಯದಲ್ಲಿ ಹಾದು ಬಂದಿದ್ದ ರೈಲುಹಾದಿ ಈ ಊರಿನಲ್ಲಿ ಹೊಳೆ ಯಂಚಿನಲ್ಲಿ ಸಾಗಲನುವಾಗಿತ್ತು. ಹ್ಯಾಟು ಬೂಟುಗಳಿಂದ ಅಲಂಕೃತ ರಾದ ಅವರನ್ನು ನೋಡಲು ಮಾಡುತ್ತಿದ್ದ ಕೆಲಸವನ್ನು ಅಷ್ಟಕ್ಕೆ ಬಿಟ್ಟು ಉತ್ಸುಕತೆಯಿಂದ ನಿಂತರು ಹಳ್ಳಿಯ ಮಂದಿ. ರಾಧಾ ಬೆಕ್ಕಸಬೆರಗಾಗಿ ಶಂಕರನನ್ನು ಕೇಳಿದಳು. "ಇವರ್ಯಾರು ಶಂಕರೂ ? ಇಲ್ಲಿಗೇಕೆ ಬಂದಿ ದ್ದಾರೆ ?"

"ಓ...ಇವರೇ !" ಅತ್ತಲೇ ಒಂದು ಕ್ಷಣ ನಿಟ್ಟಿಸಿ ನೋಡಿ ಅಂದ "ಓ ...ಇವರೇ ! ಹಾದಿ ಸರ್ವೇ ಮಾಡುತಿದ್ದಾರೆ. ನೋಡು ಅಲ್ಲಿ ! ದುರ್ಬೀನು, ಸರಪಳಿ !"

"ಹೌದಾ ? ಯಾವ ಹಾದಿ ?"

"ಬಹುಶಃ ರೈಲು ಹಾದೀನೇ ಇರಬೇಕು. ಒಂದು ಗಳಿಗೆ ಇರು ರಾಧಾ, ನಾನು ಹೋಗಿ ವಿಚಾರಿಸಿಕೊಂಡು ಬರುವೆ."

ಮರುಕ್ಷಣದಲ್ಲಿ ಶಂಕರ ಅಲ್ಲಿ ಇರಲಿಲ್ಲ. ಒಂದೇ ಉಸುರಿಗೆ ಹೊಳೆಯಂಚಿಗೆ ಓಡಿದ. ಅವರ ಬಳಿ ಸುಳಿದು ಸುತ್ತಾಡಿ ವಿಷಯವನ್ನು ಕಲೆ ಹಾಕಿ ಮೈಯೆಲ್ಲಾ ಮನಸ್ಸಾಗಿ ಓಡೋಡಿ ಬಂದ. ಮುಖ ಹೂವಿನಂತರಳಿತ್ತು.

"ರಾಧೀ ! ಸರ್ವೆ ಆದನಂತರ ಹಳಿ ಹಾಕುತ್ತಾರಂತೆ ! ನಿಜವಾಗಿಯೂ ನಿಮ್ಮೂರಿಗೆ ರೈಲು ಬರುತ್ತೆ !"

ಒಂದೊಂದು ಅಕ್ಷರವೂ ಸ್ವರ್ಗೋಪಮವಾಗಿ ತೋರಿತು ರಾಧೆಗೆ.

ಶಂಕರ ಹಳಿ ಹಾಕುವ ವಿಧಾನ ಮತ್ತು ಅದರ ಮೇಲೆ ರೈಲು ಹರಿದು ಬರುವ ರೀತಿಯನ್ನು ಹೃದಯಂಗಮವಾಗಿ ವಿವರಿಸಿದ. ರಾಧಾ ಅಚ್ಚರಿಯ ಮೂಟೆಯಾಗಿ ನಿಂತಳು. ಮನಸ್ಸು ವಿಷಯವನ್ನು ತುಂಬಿಕೊಳ್ಳುತ್ತಿದ್ದಂತೆ ನೋಟ ನಸುದೂರದಲ್ಲಿ ಹೊರ ಮಂದಿ ನಡೆಸುತಿದ್ದ ಕೆಲಸ ಕಾರ್ಯಗಳನ್ನು ವೀಕ್ಷಿಸುತಿತ್ತು. ಹಾಲ್ಗಲ್ಲದ ಮೇಲೆ ಮುಗುಳು ನಗುವನ್ನು ಸೂಸಿ "ಶಂಕರೂ..." ಎಂದಳು. ಮುಂದೆ ಮಾತು ಹೊರಡಲಿಲ್ಲ. ಉದ್ವೇಗದ ಅಲೆ ಕೊರಳನ್ನು ಹಿಸುಕಿತು.

"ಸರಿ ಬಿಡು. ಕಂಬಿ ಹಾಕಿದರು ಅಂದರೆ ಮುಗಿಯಿತು. ಮನೆ ಬಾಗಿಲಿಗೆ ರೈಲು ಬರುತ್ತದೆ."

ತಮ್ಮ ತಮ್ಮ ಕೆಲಸಗಳನ್ನು ಅಷ್ಟಕ್ಕೆ ಬಿಟ್ಟು ಗಂಡಸರೆಲ್ಲ ಸರ್ವೆ ಮಾಡುವಲ್ಲಿಗೆ ಹೋಗಿಯಾಗಿತ್ತು. ಕಳೆ ಕೀಳುತಿದ್ದ ಹೆಂಗಳೆಯರು ಶಂಕರನನ್ನು ಸುತ್ತುವರಿದು ನಿಂತು ಒಂದೇ ಬಾರಿಗೆ ಪ್ರಶ್ನೆ ಹಾಕಿದರು. "ಏನಂತೆ ?...ಇವರೇನು ಮಾಡುತಿದ್ದಾರೆ, ಇಲ್ಲಿಗೇಕೆ ಬಂದಿದ್ದಾರೆ ?"

ನಾನಾ ದನಿಗಳಲ್ಲಿ ಹತ್ತಾರು ಪ್ರಶ್ನೆಗಳು ಹೊರಬಿದ್ದುವು. ಕಣ್ಣುಗಳು ಆಸಕ್ತಿಯಿಂದ ಅರಳಿದುವು. ತುಂಬುಲದ ರಂಗೊರೆದ ಕೆಂಪು ತುಟಿಗಳು ಒಂದೇ ಬಾರಿಗೆ ಬಿರಿದುವು.

"ಹೋಗಿ ಬಂದೆಯಲ್ಲ, ಏನಾದರೂ ತಿಳಿಯಿತೆ ?"

"ಇವರೆಲ್ಲ, ಸರಕಾರಿ ಮಂದಿ. ರೈಲಿನ ಹಾದಿ ಸರ್ವೆ ಮಾಡುತಿದ್ದಾರೆ. ಮಾದೇನಹಳ್ಳಿಗೆ ಸದ್ಯದಲ್ಲೇ ರೈಲು ಬರುತ್ತೆ.!"

ಎಲ್ಲರೂ ಹರ್ಷೋದ್ಗಾರ ಮಾಡಿದರು. ದನಿ ಅಲೆಅಲೆಯಾಗಿ ಹರಿಯಿತು–ಮೆಲ್ಲೆಲರು ಮಲರುವಂತೆ.

"ಖಂಡಿತವಾಗಿಯೂ ಬರಲಪ್ಪಾ !" ಸಿದ್ದಮ್ಮ ಭಾವಪರವಶಳಾಗಿ ಕೈ ಜೋಡಿಸಿದಳು.

"ಈ ಸಲ ಮಾದಮ್ಮನಿಗೆ ರೈಲಿನ ಹೆಸರಿನಲ್ಲಿ ಒಂದು ಕೋಳಿ !" ಕೆಂಪಿಯ ಹರಕೆ.

"ಒಂದೇ ಏಕೆ ? ಮನೆಗೊಂದು ಕೋಳಿ ಕೊಟ್ಟರೂ ಕೊಡಬಹುದು !" ಗಂಗಮ್ಮನ ಸಲಹೆ.

ರೈಲು ಬಂತು ಅಂದರೆ ಮಾಡುವ ಕೆಲಸ ಬೊಗಸೆಯೆಲ್ಲಾ ಅಷ್ಟಕ್ಕೆ ನಿಂತುಹೋಗಿ. ಜನ ಅದನ್ನೇ ನಿಂತು ನೋಡಲಿಕ್ಕೂ ಸಾಕು !"

"ಮೊದ ಮೊದಲು ಮಾತ್ರ ಹಾಗೆ. ಅನಂತರ ಯಾರಿಗೆ ಬೇಕು ಅದು" ಶಂಕರ ನಕ್ಕ. ನೋಟ ಸರ್ವೆ ಮಾಡುವುದನ್ನು ನಿಟ್ಟಿಸುತ್ತ.

"ಕಂಬಿ ಹಾಕದಿದ್ದರೆ ರೈಲು ಬರುವುದಿಲ್ಲವೇ ?"

ಶಂಕರ ಉತ್ತರಿಸುವುದರೊಳಗಾಗಿ ರಾಧಾ ತಟ್ಟನೆ ತೊಟ್ಟು ಕಳಚಿದಂತೆ ನುಡಿದಳು. "ಉಹೂ, ಅದು ಬಸ್ಸು ಕಾರುಗಳಂತೆ ರಸ್ತೆಯ ಮೂಲಕ ಹರಿಯುವುದಿಲ್ಲ. ಅದಕ್ಕೆ ಕಂಬಿಗಳೇ ಬೇಕು !"

ಶಂಕರ ನಗುನಗುತ್ತ ನಿಂತ.

"ಅದು ಹೇಗಿರುತ್ತೋ ಶಂಕರೂ ?" ಅಜ್ಜಿ ಕೇಳಿತು.

"ಉದ್ದಕ್ಕಿರುತ್ತೆ ಅಜ್ಜಿ ! ದೂರದಿಂದ ನೋಡಿದರೆ ಕರಿಯ ಹೆಬ್ಬಾವಿನಂತೆ ಇರುತ್ತೆ. ಸದಾ ಬುಸುಗುಡುತ್ತಲೇ ಇರುತ್ತೆ !"

ರಾಧೆಯ ವಿವರಣೆಯನ್ನು ಶಂಕರ ನಗುಮುಖದಿಂದ ನಿಟ್ಟಿಸಿದ. ಕಣ್ಣುಗಳಲ್ಲಿ ತುಂಟತನ ನಲಿಯಿತು. "ಪರವಾಯಿಲ್ಲ ಹುಡುಗಿ !"

"ಹತ್ತು ಮಾರು ಉದ್ದವಿರುತ್ತದೆಯೋ ?"

"ಹತ್ತು ಮಾರು ಮಾತ್ರವೇಕೆ ? ಎಷ್ಟು ಉದ್ದ ಬೇಕಾದರೂ ಮಾಡಿಕೊಳ್ಳುತ್ತಾರೆ." ಎಷ್ಟು ಗಿಡ್ಡ ಬೇಕಾದರೂ ಮಾಡಿಕೊಳ್ಳುತ್ತಾರೆ."

"ಇಸ್ಸೀ ! ಇದೆಂಥಾ ಮಾತಾಡುತ್ತಿ ? ಅದೇನು ಕೊಯ್ಯುವುದಕ್ಕಾಗುತ್ತದೆಯೆ ?"

"ಕೊಯ್ದು ಗಿಡ್ಡ ಮಾಡುವುದಿಲ್ಲ ಅಜ್ಜಿ ! ಕೊಂಡಿಗೆ ಕೊಂಡಿ ಸಿಕ್ಕಿಸಿ ಬಂಡಿಗಳನ್ನು ಜೋಡಿಸಿ ಉದ್ದ ಮಾಡುತ್ತಾರೆ." ನಗುನಗುತ್ತಾ ಶಂಕರ ವಿವರಿಸಿದ. ರಾಧಾ ಭಾವೋದ್ವೇಗದಿಂದ ಅವನ ವಿವರಣೆಯನ್ನು ಕೇಳಿದಳು. ಮೈ ಉಲ್ಲಾಸದ ಬೀಡಾಯಿತು. ರೈಲನ್ನು ತರುವವರ ಕಡೆ ಗೌರವ ಭಾವದಿಂದ ನಿಟ್ಟಿಸಿದಳು.

ಶಂಕರ ತನಗೆ ತಿಳಿದಂತೆ ರೈಲಿನ ರೀತಿ ನೀತಿಗಳನ್ನು ವಿವರಿಸಿದ. ತಮಗೆ ಅರ್ಥವಾದ ರೀತಿಯಲ್ಲಿ ರೈಲನ್ನು ಕಲ್ಪಿಸಿಕೊಂಡರು ಗ್ರಾಮ್ಯ ಮಹಿಳೆಯರು. ಬರಲಿರುವ ರೈಲು ಎಲ್ಲರ ಕುತೂಹಲವನ್ನೂ ಕೆರಳಿಸಿ, ಮನವನ್ನು ಅರಳಿಸಿ ಹೃದಯವನ್ನು ಹಾಲ್ಗಡಲಂತೆ ಉಕ್ಕೇರಿಸಿತು.

ಹೆಂಗಳೆಯರು ತಮ್ಮ ತಮ್ಮ ಸ್ಥಳಗಳಿಗೆ ಹಿಂದಿರುಗಿ ತಮ್ಮ ತಮ್ಮ ಕೆಲಸಗಳಿಗೆ ಕೈ ಹಚ್ಚಿದರು. ಸರ್ವೆ ಮಾಡುವುದನ್ನು ನೋಡಲು ಹೋದ ಗಂಡಸರು ಮುಂದೆ ಮುಂದೆ ಅವರೊಡನೆ ಸಾಗುತ್ತಲೇ ಇದ್ದಾರೆ.

"ಮಾಡುವ ಕೆಲಸವನ್ನು ಬಿಟ್ಟು ಅತ್ತಲೇ ಹೋಗಿ ಬಿಡುವುದೇ ? ನೋಡಿದಲೆ ಇವರೇ ರೈಲು ತರುತ್ತಾರೇನೋ ಎಂಬಂತಿದೆ !"

ಹೆಂಗಳೆಯರ ಕೆಂದುಟಿಗಳು ಎಳೆ ನಗುವನ್ನು ಸೂಸಿದುವು. ಪುನಃ ಪುನಃ ಅತ್ತಲೇ ನಿಟ್ಟಿಸುತ್ತ ಕೆಲಸವನ್ನು ಮುಂದುವರಿಸಿದರು.

"ಮನೆ ಬಾಗಿಲಿಗೆ ರೈಲು ಬಂದರೂ ಹತ್ತುತ್ತೇವೋ ಇಲ್ಲವೋ ಅದೇ ಅನುಮಾನ ಶಂಕರೂ !?"

"ಅದೇಕೆ ?"

"ಕಳೆದ ವರ್ಷ ಮೈಲಾಪುರದಲ್ಲಿ ಯಕ್ಷಗಾನದವರು ಒಂದು ತಿಂಗಳು ಬೀಡು ಬಿಟ್ಟಿದ್ದರು. ಆಗ ಎಷ್ಟು ಕೇಳಿದ್ದಾಯಿತು ಗೊತ್ತೋ ? ಅತ್ತೂ ಕರೆದೂ ಬೇಡಿದರೂ ಇಲ್ಲ. ಒಂದು ಟಿಕೆಟ್ಟಿಗೆ ಒಂದು ರೂಪಾಯಿ ಯಂತೆ ಮೂರು ರೂಪಾಯಿ ಎಲ್ಲಿಂದ ತರಲಿ ಎಂದರು ಅಪ್ಪ. ಹೋಗಿ ಬಂದವರೆಲ್ಲ ಬಣ್ಣಿಸುವಾಗ ನನ್ನ ಕರಳು ನುಲಿಯುತಿತ್ತು." ಕಂಬನಿ ದುಂಬಿದಳು ರಾಧಾ.

"ರೈಲು ಮನೆ ಬಾಗಿಲಿಗೆ ಬಂದ ಮೇಲೆ ಇನ್ನೇನು ? ಪಯಣ

ಮಾಡಲ್ಲ ಎಂದರೂ ಬಿಡುವುದಿಲ್ಲ ಅದು. ಒಂದಲ್ಲ ಒಂದು ದಿನವ ಲ್ಲರೂ ಹೊರಟೇ ಹೊರಡುತ್ತೀರಿ."

"ನಮ್ಮ ಸುತ್ತಮುತ್ತಿನವರೆಲ್ಲಾ ದಸರ ನಾಟಕ ಯಕ್ಷಗಾನಗಳನ್ನು ನೋಡಿಕೊಂಡು ಬರುತ್ತಾರೆ. ನಾವು ನೋಡುವುದು ಯಾವ ಜನ್ಮಕ್ಕೋ ?"

"ಒಂದಲ್ಲ ಒಂದು ದಿನ ನಿನ್ನ ಸರದಿಯೂ ಬರುತ್ತೆ."

"ಆ ಒಂದು ಆಸೆಗೋಸ್ಕರ ಜೀವ ಹಿಡಿದುಕೊಂಡಿದ್ದೇನೆ."

ಶಂಕರ ನಕ್ಕು ನುಡಿದ "ಇಲ್ಲದಿದ್ದರೆ ಬಿಟ್ಟುಬಿಡುತಿದ್ದೆ ಅನ್ನು !"

ನಗು ಮೂಡಿದರೂ ಮುಖ ಮುದುಡಿತು. ರಾಧೆ ಪೆಚ್ಚು ಮೋರೆಯಿಂದ ನಿಟ್ಟುಸುತ್ತಾ "ಹೆಣ್ಣು ಜನ್ಮ ಬಲು ಕೆಟ್ಟದ್ದು. ತಪ್ಪುಮಾಡಿದರೆವಲ್ಲಾ ಹೆಣ್ಣಾಗಿ ಹುಟ್ಟುತ್ತಾರಂತೆ. ಹೌದಾ ಶಂಕರೂ ?"

"ಯಾರೇ ಹೇಳಿದ್ದು."

"ಯಾರೇಕೆ ಹೇಳಬೇಕು ? ನಮಗೆ ಅಷ್ಟೇನು ಗೊತ್ತಾಗುವುದಿಲ್ಲವೇ ?"

"ಓ...ಬಹಳ ಅನುಭವ ! ಒಳ್ಳೆ ಅಜ್ಜಿ ಮಾತಾಡಿದ ಹಾಗೆ ಮಾತಾಡುತ್ತಿ ?"

"ನನ್ನದಿರಲಿ, ಅಜ್ಜಿ ಅಮ್ಮ ಎಲ್ಲಾ ಹಾಗೆಂದೇ ಹೇಳುತ್ತಾರೆ !" ಒಂದು ಗಳಿಗೆ ತಡೆದು "ಹೇಗೆ ಹೇಳೋಣ ? ಇರಲಿಕ್ಕೂ ಸಾಕು !"

ಇಬ್ಬರ ಮುಖದಲ್ಲೂ ನಗು ಒಡೆದು ಮೂಡಿತು.

ನೆತ್ತಿ ಸುಡುವಂತೆ ಬಿಸಿಲು ಚುರು ಚುರು ಸುಡಹತ್ತಿತು.

ಕಿತ್ತ ಕಳೆಯನ್ನು ಅಂಚಿನ ಮೇಲೆ ರಾಶಿ ಹಾಕುತ್ತಿದ್ದ ಲಿಂಗಮ್ಮ, "ಏನು ರಾಧೀ ? ಭಾವ ಬಂದಿದ್ದಾನೆ ಅಂತ ರಜ ತೆಗೆದುಕೊಂಡೆಯೇನು ?"

"ಹ್ಞೂ...ಮೂರು ದಿನ ಹಿಡಿದ ಜ್ವರ ಬಿಡಲಿಲ್ಲ. ಕೈಕಾಲು ಸೋಲು. ಇನ್ನೂ ಎರಡು ದಿನ ನನ್ನಿಂದ ಏನೂ ಸಾಗದು."

ಸನಿಹದಲ್ಲಿ ಕಳೆ ಕೀಳುತ್ತಿದ್ದ ಗಂಗಮ್ಮನೂ ದನಿಗೂಡಿಸಿದಳು. "ಪಾಪ, ಮೂರು ದಿನ ಮಳೆಯಲ್ಲಿ ನೆನೆದುದೇ ಆಗಲಿಲ್ಲ."

ಹೆಂಗಳೆಯರ ಕೈಗಳು ಭರದಿಂದ ಕೆಲಸ ಮಾಡುತಿದ್ದರೂ ಕಣ್ಣು ಗಳು ಪುನಃ ಪುನಃ ಸರಕಾರಿ ಮಂದಿಯನ್ನು ನಿಟ್ಟಿಸುತಿದ್ದುವು. ಅತ್ತ ಹೋದ ಗಂಡಸರಿನ್ನೂ ಬಂದಿರಲಿಲ್ಲ. ಆದರೂ ಅಲ್ಲಿಂದಲೇ ಗಂಡು ದನಿ ಯೊಂದು ಹೊರಬಿತ್ತು. ದೂರ ತೀರಕ್ಕೆ ಕೇಳಿಸುವಂತೆ ಕಹಳೆಯಂತೆ ಮೊಳಗಿ ಕಿವಿಗಳನ್ನು ಅಪ್ಪಳಿಸಿತು "ಇಂದೇ ಈ ಗಣ್ಣಗಳೆಲ್ಲಾ ಮುಗಿಯ ಬೇಕು. ಕೈಯೊಂದಿಷ್ಟು ಚುರುಕು ಮಾಡಿರಿ."

ತಂಗಾಳಿಯಲ್ಲಿ ಏರಿದ ದನಿ ಅಲೆಅಲೆಯಾಗಿ ಹರಿದುಬಂತು. ಕೇಳಿಸ ಲಿಲ್ಲವೇನೋ ಎಂದು ಅನುಮಾನಿಸಿ ಅದೇ ಪಲ್ಲವಿಯನ್ನು ಏರಿದ ದನಿ ಯಲ್ಲಿ ಮತ್ತೆ ಬಿತ್ತರಿಸಿದ ಪುರುಷ ಮಹಾಶಯ.

ಹಿರಿಯಾಕೆ ಬಾಯಿ ತುಂಬ ತುಂಬಿಕೊಂಡಿದ್ದ ತಾಂಬೂಲವನ್ನು ಅತ್ತ ಉಗಿದು ದನಿ ಸರಿಪಡಿಸಿಕೊಂಡು ಸಿಡುಕಿದಳು. "ಇದೊಳ್ಳೆ ಮಜಾ! ತಾವೆಲ್ಲಾ ಆರಾಮವಾಗಿದ್ದು ನಮಗೆ ತ್ವರೆಮಾಡಿ ಎಂದರೆ ಆಯಿತಲ್ಲಾ!"

ಗದ್ದೆಯಂಚಿನ ಮೇಲೆ ನಿಂತಿದ್ದ ಶಂಕರ ರಾಧೆಯರ ಕಣ್ಣುಗಳು ದನಿ ಬಂದತ್ತ ಹೊರಳಿದುವು. ನಂಜ ಮತ್ತೊನ್ನೆ ಕೂಗಿ ಹೇಳುತಿದು ದನ್ನು ನೋಡಿ ತಡೆದು ಮುದ್ದಣ್ಣ ತಾನೇ ಏರಿದ ದನಿಯಲ್ಲಿ ಕೂಗಿ ಹೇಳಿದ. ಮತ್ತೆ ಅಲೆಯಲೆಯಾಗಿ ಮೊಳಗಿತು ದನಿ.

ಹೆಂಗಳೆಯರ ಕೈಗಳು ಚುರುಕುಗೊಂಡುವು.

ಸುಡು ಬಿಸಿಲಿನಲ್ಲೂ ತಂಗಾಳಿ ತಣ್ಣಗೆ ಬೀಸಿತು.

"ನಾನು ಮುಂದಿನ ವರ್ಷ ಮೈಸೂರಿನಲ್ಲಿ ಕೆಲಸಕ್ಕೆ ಸೇರಿ ಮನೆ ಮಾಡಿಕೊಳ್ಳುವೆ. ಅನಂತರ ನೀವೆಲ್ಲ ಮನೆಯಲ್ಲಿದ್ದು ಆರಾಮವಾಗಿ ದಸರ ನೋಡಬಹುದು. ನಾಲ್ಕು ದಿನ ಸುಖವಾಗಿದ್ದು ಮೈಸೂರೆಲ್ಲ ಸುತ್ತಿ ನೋಡಿಕೊಂಡು ಹೋಗು. ನಾನೇ ಎಲ್ಲಾ ತೋರಿಸುವೆ."

"ಓ....ನಾಲ್ಕೇ ದಿನ!" ಕಣ್ಣರಳಿಸಿದಳು ಹುಡುಗಿ "ಅಷ್ಟೇನಾ ನೀನು ಅನ್ನ ಹಾಕುವುದು? ಅದಕ್ಕೂ ಮಿಕ್ಕಿ ಎರಡು ದಿನ ಇದ್ದರೆ ಓಡಿಸಿಬಿಡುತ್ತೀಯೇನು?"

ನಗೆಯ ಚಟಾಕಿ ಹಾರಿಸಿದಳು ರಾಧಾ. ಇಬ್ಬರ ಮುಖದಲ್ಲೂ ನಗು ಒಡೆದು ಮೂಡಿತು. ನಗುನಗುತ್ತ ಮುಂದುವರಿದಳು ಅವಳು

"ನಾಲ್ಕು ದಿನಗಳೊಳಗೆ ಮೈಸೂರು ನೋಡುವುದಕ್ಕಾಗುತ್ತದೆಯೆ ? ನಮಗೆ ರೆಕ್ಕೆ ಪುಕ್ಕ ಇದ್ದಿದ್ದರೆ ಊರೆಲ್ಲಾ ಹಾರಾಡಿ ನೋಡಬಹುದಿತ್ತು ! ನಮ್ಮ ಭಾಗಕ್ಕೆ ನೀನಾದರೂ ಒಬ್ಬನಿದ್ದಿ ಎಂದುಕೊಂಡರೆ ನೀನೂ ನಾಲ್ಕೇ ದಿನ ಎನ್ನುತಿದ್ದಿ ? ಸರಿಹೋಯಿತು ಬಿಡು." ರಾಗವಾಗಿ ದನಿ ಹೊರಬಿತ್ತು. ಕೊರಳು ಕೊಂಕಿಸಿ ಬಾಯಿ ಸೊಟ್ಟ ಮಾಡಿ ನಿಂತಳು ಹುಡುಗಿ.

"ಪರವಾಯಿಲ್ಲ ! ಹಳ್ಳಿಯ ಹೆಣ್ಣಾದರೂ ಜಾಣ ಹುಡುಗಿ !" ಶಂಕರ ಹುಬ್ಬೇರಿಸಿದ.

"ನೀನೇ ಇಷ್ಟೊಂದು ಲೆಖ್ಖಾಚಾರ ಹಾಕಿದ ಮೇಲೆ ಇನ್ನು ನಿನ್ನ ಹೆಂಡತಿಯ ವಿಚಾರ ಹೇಗಿರಲಿಕ್ಕಿಲ್ಲ ?" ಹುಬ್ಬೇರಿಸಿದಳು ರಾಧಾ.

"ಓ ...ಹೋ ಹೋ !" ಶಂಕರ ಗಟ್ಟಿಯಾಗಿ ನಕ್ಕ. "ಯಾರ ವಿಚಾರ ಹೇಗೇ ಇರಲಿ, ನಿಮ್ಮ ವಿಷಯಕ್ಕಂತೂ ಯಾರೂ ಅಡ್ಡಿ ಬರುವಂತಿಲ್ಲ. ಇಷ್ಟಕ್ಕೂ ನೀನು ಮನೆ ಮಠ ಬಿಟ್ಟು ನಮ್ಮಲ್ಲಿ ಇರುವುದು ಅಷ್ಟರಲ್ಲೇ ಇದೆ."

"ಚೆನ್ನಾಯ್ತು ಬಿಡು ! ಅಲ್ಲಿಯ ತನಕ ನಾನು ಮೈಸೂರಿಗೆ ಬರಬಾರದೆಂಬುದು ನಿನ್ನ ಇಚ್ಛೆಯೋ ?"

"ಅಂದರೆ...?"

"ನನಗೀಗ ಯಾವ ಸಂಸಾರವುಂಟು ? ಸಂಸಾರ ಕಟ್ಟಿಕೊಳ್ಳುವ ತನಕ ಬರಬೇಡ ಅಂತಲೇ ?"

"ಮಾತಿಗೊಂದು ಅರ್ಥ ಕಟ್ಟುತ್ತಿ. ನೀನೇನು ಸಾಮಾನ್ಯ ಹೆಣ್ಣಲ್ಲ !"

"ಅಯ್ಯೋ, ಶಿವನೇ ! ಹುಟ್ಟು ಹಳ್ಳಿ ಜನ. ಒಡ್ಡ ಭಾಷೆ."

"ನಾನು ಮೈಸೂರಿನಲ್ಲಿದ್ದರೂ ನಿನ್ನಷ್ಟು ಜಾಣ್ಮೆ ಪಡೆದುಕೊಳ್ಳಲಿಲ್ಲ."

"ಪಡೆಯುವ ಭಾಗ್ಯ ನಮಗೆಲ್ಲಿ ಬರಬೇಕು ? ಎಲ್ಲಾ ಹುಟ್ಟುಗುಣ !"

"ನಿಜ ರಾಧಾ !"

ಇಬ್ಬರ ಮುಖಗಳೂ ಅರಳಿ ಹೂವಾದುವು.

ನೋಟ ಹೊಳೆಯಂಚಿನ ಕಡೆ ಹರಿಯಿತು...ಓ....ಅವರಾಗಲೇ ಮುಂದೆ ಮುಂದೆ ಹೋಗಿದ್ದಾರೆ. ನೋಡು ನೋಡುತ್ತಾ ಹಳ್ಳಿಯ ಮಂದಿಯೂ ಹಿಂಬಾಲಿಸುತಿದ್ದಾರೆ.

"ಓ...ನಮ್ಮವರೆಲ್ಲಾ ಅವರೊಂದಿಗೆ ಸರಕಾರದ ತನಕವೂ ಹೋಗುವಂತೆ ಕಾಣಿಸುತ್ತದೆ !"

ಹೆಣ್ಧ್ವನಿಯೊಂದು ಹೋರಬೀಳುತ್ತಲೂ ಕಿಲಕಿಲ ನಗುವಿನಲೆ ಯೆದ್ದಿತು.

"ಪುಟ್ಟ ಅವರೊಂದಿಗೆ ಹೋಗಿಬಿಟ್ಟರೆ ಏನು ಮಾಡುತ್ತೀಯೇ ನಂಜೀ ?" ಹಾಸ್ಯದ ಚಟಾಕಿ ಹಾರಿಸಿದಳು ಅಜ್ಜಿ.

"ಹೋಗಲಿ ! ನನ್ನವರು ಸರಕಾರದಲ್ಲಿ ಸರದಾರ ಆದರೆ ನನಗೆ ಹೆಮ್ಮೆ ಅಲ್ಲವೇ ?"

"ಪರವಾಯಿಲ್ಲ ; ನಂಜೀ !"

ಹೆಂಗಳೆಯರ ಮಧ್ಯೆ ನಗೆಯ ಗುಲ್ಲೆದ್ದಿತು.

o o o o

ಕಾಲಚಕ್ರವುರುಳಿತು. ಹಬ್ಬ ಹುಣ್ಣಿಮೆಗಳು ಒಂದೊಂದಾಗಿ ಸಂದುಹೋದುವು. ವರ್ಷಮಾನಗಳು ತಾನೇ ತಾನಾಗಿ ಉರುಳಿದುವು. ಆದರೂ ಮೈಸೂರು ದಸರ ಕನಸಿನ ಗಂಟಾಗಿ ಉಳಿಯಿತು. ರಾಧಾ ತಾರುಣ್ಯದಂಚನ್ನು ಮೆಟ್ಟಿ ನಿಲ್ಲಿಸುವಷ್ಟರಲ್ಲಿ ಸಂಗನೂರಿನ ಶಾಂತಪ್ಪನ ಗೃಹಿಣಿಯಾದಳು. ಹೊಳೆಯಾಚೆಯ ಸಂಬಂಧವನ್ನು ಮನಸ್ಸು ಒಲ್ಲದಿದ್ದರೂ ವಿಧಿ ಸೆಳೆದಿತ್ತು. ಮಾದೇನಹಳ್ಳಿಗೂ ಸಂಗನೂರಿಗೂ ಮಧ್ಯೆ ಹರಿಯುತ್ತಿದ್ದ ಹೊಳೆಗೆ ಸೇತುವೆ ಇರಲಿಲ್ಲ. ಬೇಸಿಗೆಯ ದಿನಗಳಲ್ಲಿ ಬತ್ತಿದ ಹೊಳೆಯನ್ನು ಹೆಂಗಸರೂ ಮಕ್ಕಳೂ ಸರಾಗವಾಗಿ ದಾಟಬಹುದಾಗಿದ್ದರೂ ಮಳೆಗಾಲದಲ್ಲಿ ಅಲ್ಲಿದ್ದವರು ಅಲ್ಲೆ. ಇಲ್ಲಿದ್ದವರು ಇಲ್ಲೆ.

ಮಾದೇನಹಳ್ಳಿಗೂ ಸಂಗನೂರಿಗೂ ಕೇವಲ ಮೂರು ಮೈಲಿಗಳ ಅಂತರ. ಬೆಟ್ಟ ಗುಡ್ಡಗಳಿಲ್ಲದ ತಾಣ. ಮೂರು ಮೈಲಿಗಳುದ್ದಕ್ಕೂ ಸಾಲುಗದ್ದೆಗಳ ಕೋಗು. ಅಲ್ಲಲ್ಲಿ ಹಳ್ಳಿಗರ ಸಣ್ಣ ಪುಟ್ಟ ಜೋಪಡಿಗಳು

ಗದ್ದೆಯಂಚಿನಲ್ಲೇ ಸಾಗುತಿತ್ತು ಕಾಲುಹಾದಿ. ರಾಧಾ ತಲೆಯ ಮೇಲೆ ಗಂಟು ಹೊತ್ತು ಬೇಸಗೆಯಲ್ಲಿ ತೌರು ಮನೆಗೆ ಪಯಣಿಸುತಿದ್ದಳು. ಮಳೆಗಾಲದಲ್ಲಿ ಮಳೆ ಹೊಳೆ ಇಳಿಯುವ ತನಕ ಮಾದೇನಹಳ್ಳಿಯ ಸುದ್ದಿಯೆತ್ತುವಂತಿರಲಿಲ್ಲ. ಹಾಗೆ ಹಾದಿಗಟ್ಟಿದಾಗ ಹಾಳಾದ ರೈಲೂ ಬರಲಿಲ್ಲ ರೈಲು ಬಂದಿದ್ದರೆ ಸೇತುವೆಯಾದರೂ ಹುಟ್ಟಿಕೊಳ್ಳುತಿತ್ತು ಎಂಬ ಯೋಚನೆಯೂ ಮೂಡುತಿತ್ತು. ಹೆತ್ತ ತಾಯಿಗೆ ಇದ್ದ ಒಬ್ಬ ಮಗಳನ್ನೂ ಹೊಳೆಯಾಚೆಗೆ ಕೊಟ್ಟು ಕೆಟ್ಟೆನಲ್ಲಾ ಎಂಬ ಕೊರಗೂ ಮನಕ್ಕಂಟಿತ್ತು. ದುಃಖ ದುಗುಡಗಳ ಒತ್ತಡದಿಂದ ತಾಯಿ ಮಗಳು ಮನವಾರೆ ಕಂಬನಿಗರೆದರು.

ರಾಧಾ ಗೃಹಿಣಿಯಾದನಂತರ ಮುದ್ದಣ್ಣನ ಮನೆ ಬರಿದಾಯಿತು. ಕುಲುಕುಲು ನಗೆಯ ವಾತಾವರಣವು ಅಂದಿಗೆ ಮುಗಿಯಿತು. ಕುಂತಿಯ ಮೊದಲ ಮಗ ಶಿವ್ಯ ಅಜ್ಜಿಯೊಂದಿಗೆ ಇಲ್ಲೇ ಉಳಿದುದರಿಂದ ಎಷ್ಟೋ ಹಿತ. ಅವನು ತನ್ನ ಸಹಪಾಠಿಗಳೊಂದಿಗೆ ಆಗಾಗ್ಗೆ ಈ ಮನೆಗೂ ಧಾಳಿ ಯಿಟ್ಟು ಗದ್ದಲವೆಬ್ಬಿಸುತಿದ್ದ. ಕುಲುಕುಲು ನಗೆಯ ಮಲರು ಕಿವಿಗೆ ಬಿದ್ದಾಗ ಗಂಗಮ್ಮನ ಬತ್ತಿದ ಮುಖಬಿಂಬವೂ ಅರಳುತಿತ್ತು. ತಾಯಿ ಮಗಳು ಒಂದುಗೂಡಿದಾಗ ಎರಡು ಸಂಸಾರಗಳನ್ನು ಒಂದುಗೂಡಿಸ ಬೇಕೆಂಬ ವಿಚಾರವು ಮೊಳೆಯುತಿತ್ತು.

ಆದರೆ...

ರಾಧಾ ತೌರುಮನೆಗೆ ಬಂದಾಗ ಸೋಮಣ್ಣನ ಮನೆಗೆ ಹೋದರೆ ಮೈಸೂರಿನ ನಾನಾ ವಿಚಾರಗಳು ಕಿವಿಯ ಮೇಲೆ ಅಮೃತವರ್ಷದಂತೆ ಬೀಳುತಿದ್ದುವು. ಕೇಳರಿಯದ ಕಂಡರಿಯದ ವಿಷಯಗಳನ್ನು ಬೆಪ್ಪಾಗಿ ಬೆರಗಾಗಿ ಮೈದುಂಬಿಕೊಳ್ಳುವಾಗ ಹರ್ಷದ ಮೂಟೆಯಾದರೂ ಮರು ಗಳಿಗೆಯಲ್ಲಿ ದುಃಖದ ಕಡಲಲ್ಲಿ ಮಿಂದೇಳುತಿದ್ದಳು.

ಈಗ ಶಂಕರ ಕಾರಕೂನ. ಮೈಸೂರಿನಲ್ಲೇ ನೆಲೆ ನಿಂತಿದ್ದಾನೆ. ಎಂದಾದರೊಮ್ಮೆ ಮಾದೇನಹಳ್ಳಿ ಸಂಗನೂರುಗಳಿಗೆ ಅನಿರೀಕ್ಷಿತ ಭೇಟಿ ಯೀಯುತ್ತಿದ್ದ. ಈಗ ಅವನು ಬಹಳಷ್ಟು ಗಂಭೀರ. ಮೈಸೂರಿನ ವರ್ಣನೆಯನ್ನು ಹಿಂದಿನಂತೆ ಮಾಡದಿದ್ದರೂ ಮಧುರವಾದ ಆಹ್ವಾನ

ವನ್ನು ತಪ್ಪದೆ ನೀಡುತಿದ್ದ. ಗಂಗವ್ವನ ಧಾಟಿಯಲ್ಲಿ ಹೇಳುವು ದಾದರೆ....ಅದಕ್ಕೂ ಪಡೆದುಕೊಂಡು ಬಂದಿರಬೇಕಲ್ಲ ?

ರಾಧಾ ಮಾದೇನಹಳ್ಳಿಗೆ ಬಂದು ಮೂರು ದಿನಗಳಾಗಿತ್ತು. ಅವ ಳೀಗ ಎರಡು ಮಕ್ಕಳ ತಾಯಿ. ಮೂರನೆಯ ಗರ್ಭಿಣಿ. ಬಂದಾಗಿ ನಿಂದಲೂ ನಿದ್ದೆ, ಕೂತರೂ ನಿದ್ದೆ, ನಿಂತರೂ ನಿದ್ದೆ.

"ಇದೇನೇ ರಾಧಾ, ಇಷ್ಟೊಂದು ನಿದ್ದೆ ? ಸ್ವಲ್ಪ ಹೊತ್ತಾದರೂ ಸರಸವಾಗಿ ಕಳೆಯಲಿಲ್ಲ, ಹಿತವಾಗಿ ಮಾತಾಡಲಿಲ್ಲ ?" ಎಂದಳು ಗಂಗವ್ವ ತಾಯಿ ಕರುಳು ನುಲಿಯುತು.

"ಇಷ್ಟು ದಿನಗಳ ನಿದ್ದೆಯನ್ನೆಲ್ಲಾ ಈಗಲೇ ಮಾಡೋಣ ಎಂಬ ಷ್ಟಾಗಿದೆ ಅವ್ವಾ."

ನುಡಿ ಕೇಳಿ ಹೃದಯ ಭಾರವಾಯಿತು. ಅಳುವ ಮಕ್ಕಳಿಗೆ ಹಾಲೂಡಿಸಲು ಒಳಗೆ ಕರೆದೊಯ್ದಳು ಗಂಗವ್ವ.

ಹೊತ್ತು ಉರುಳಿ ಸೂರ್ಯ ತಂಗಿದ ಮೇಲೆ ರಧಾ ಎದ್ದು ಮುಖ ಮಜ್ಜನ ಮಾಡಿ ಹೊರಬಂದಾಗ ಮೊಟ್ಟಮೊದಲ ಮುಖದರ್ಶನವೆಂದರೆ ಹಚ್ಚೆ ಕುಕ್ಕುವ ಅಜ್ಜಿಯದು. ಹೇಗಿದ್ದಳೋ ಹಾಗೇ ಇದ್ದಾಳೆ ಅಜ್ಜಿ !

"ಇದೇನೆ ರಾಧಿ ? ಎರಡು ಮಕ್ಕಳು ತಾಯಿಯಾಗಿ ಮೂರನೆಯ ದನ್ನು ಹೊತ್ತರೂ ಕೈಗೊಂದು ಹಚ್ಚೆಯಿಲ್ಲ...ಬೋಳುಗೈಯಲ್ಲಿ ಗಂಡನಿಗೆ ಉಣಬಡಿಸಬಾರದು ಗೊತ್ತಾ ?"

"ಹೋಗಲಿ ಬಿಡಿ, ಆಗಲೇ ಅರ್ಧ ದಿನ ಕಳೆಯಿತು, ಇನ್ನೇಕೆ ಹಚ್ಚೆ ?"

"ನಿನ್ನೆ ಮೊನ್ನೆ ಕೂಸು ! ಆಗಲೇ ಅರ್ಧ ದಿನ ಕಳೆಯಿತಂತೆ....? ಎಲ್ಲಿ ಹಚ್ಚೆ ಹಾಕುತ್ತಾಳೋ ಅಂತ. ಬಲೇ ಪಾಯಗಾತಿ ಕಣೆ !"

ಕಿಲಕಿಲ ನಕ್ಕಳು ರಾಧಾ. ಅದೇನೇ ಆಗಲಿ, ನನಗಂತೂ ಬೇಡ."

"ಅದಕ್ಕೇ ಕಣೆ ಕಾಲ ಹೀಗಾದದ್ದು ! ಮಳೆಯಿದ್ದರೆ ಬೆಳೆಯಿಲ್ಲ. ಬೆಳೆಯಿದ್ದರೆ ಮಳೆಯಿಲ್ಲ."

ರಾಧಾ ಮಾತಾಡಲಿಲ್ಲ. ಅಜ್ಜಿ ಹೊರಟಳು.

ಬಳ್ಳಿದೇಹ ಗದ್ದೆಯಂಚಿನಲ್ಲಿ ನೇರವಾಗಿ ಸಾಗುತಿತ್ತು. ಕಪ್ಪು

ಮೈ, ಮಾಸಲು ಉಡುಪು. ಎಪ್ಪತ್ತು ವಸಂತಗಳನ್ನು ದಾಟಿದರೂ ಅಜ್ಜಿಯ ಕೂದಲು ಕಗ್ಗಪ್ಪು. ದೂರದಲ್ಲಿ ಕಗ್ಗಡ್ಡಿಯಂತೆ ಕಣ್ಣೋಚರಿಸುವ ಆಕೆಯ ದೇಹ ಇನ್ನೇನು ನಶಿಸಿ ಹೋಗಲಿತ್ತು. ಮತ್ತೆ ಅತ್ತಲೇ ನಿಟ್ಟಿಸಿದಳು ರಾಧಾ. ಎಪ್ಪತ್ತರ ಅಂಚಿನಲ್ಲೂ ಹೇಗೆ ಕುಟುಕುಟು ನಡೆಯುತ್ತಿದ್ದಾಳೆ ಅಜ್ಜಿ ! ಈ ವಯಸ್ಸಿನಲ್ಲಿ ಸೊಂಟ ಬಾಗಿ ಕೋಲೂರುವವರು ಎಷ್ಟು ಮಂದಿ ಬೇಕು ? ಆದರೆ ಇವಳು ಕೋಲಿಗಿಂತ ಕೋಲು !

"ಅಜ್ಜೀ....ಅಜ್ಜೀ !"

ಆದೇಶವೀಯದಿದ್ದರೂ ಕಣ್ಣುಗಳು ಅತ್ತ ಹೊರಳಿದುವು. ನೆರೆ ಮನೆಯಂಗಳದಲ್ಲಿ ತಿಮ್ಮ ಬೇಲಿಯ ಗೂಟವನ್ನು ಹಿಡಿದುಕೊಂಡು ಕರೆಯುತ್ತಾ ನಿಂತಿದ್ದ.

"ಏನೋ ತಿಮ್ಮಾ ?"

"ಓ ನೀವೇ ಇದ್ದೀರಲ್ಲ !"

"ತಿಪ್ಪೇನಹಳ್ಳಿಗೆ ನಾಟಕ ಬಂದಿದೆಯಂತೆ ; ನೀವು ಬರ್ತೀರಾ ರಾಧಕ್ಕ ?"

"ನಿಮ್ಮ ಮನೆಯವರೆಲ್ಲ ಹೊರಟಿದ್ದಾರೆಯೆ ?"

"ಹ್ಞೂ...."

"ಯಾವತ್ತು ?"

"ನಾಡಿದ್ದಿನಿಂದ ನಾಟಕ ಶುರುವಾಗುತ್ತಂತೆ. ಅನಂತರ ಎಂದಾದರೂ ಹೋಗೋಣ."

"ಅನಂತರ ನಾನೆಲ್ಲಿರುವೆ ಇಲ್ಲಿ ?"

"ಅಷ್ಟರೊಳಗಾಗಿ ಹೋಗುವಿರಾ ?"

"ಶಾಂತಣ್ಣ ಬಂದರೆ ಹಿಂದಕ್ಕೆ ಕಳುಹಿಸಿಬಿಡಿ. ನಾನು ಆಮೇಲೆ ನಿಮ್ಮನ್ನು ಸಂಗನೂರಿನ ತನಕ ಕಳುಹಿಸಿ ಬರುವೆ. ಆದೀತೆ ? ಎಲ್ಲರೂ ಕೂಡಿ ಒಂದು ನಾಟಕ ನೋಡೋಣ. ಈಗ ಬೆಳದಿಂಗಳೂ ಇದೆ. ಹಾದಿ ನಡೆಯಲಿಕ್ಕೂ ಸರಾಗ."

ತಿಮ್ಮ ಒಂದೇ ಉಸುರಿಗೆ ಬಳಬಳ ಮಾತಾಡಿದ.

ಶಾಂತಪ್ಪ ಒಂದು ದಿನ ಕಳೆಯುವುದಿರಲಿ, ಒಂದು ಗಳಿಗೆಯೂ ಕಳೆಯಲಾರ. ಕಟು ಅಂದರೆ ಕಲ್ಲಿಗಿಂತ ಕಟು. ಅವನನ್ನು ಕೇಳುವುದಕ್ಕಿಂತ ಕೇಳದಿರುವುದು ಲೇಸು. ವಿಷಯ ತಲೆಯನ್ನು ಹೊಕ್ಕಿದೊಡನೆಯೇ ಮನದಲ್ಲಿ ದುಗುಡವೆದ್ದರೂ ನಯವಾಗಿ ನುಡಿದಳು ರಾಧಾ. "ಮನೆಯಲ್ಲಿ ಇನ್ಯಾರೂ ಇಲ್ಲ. ನೋಡುನೋಡುತ್ತ ನಾನು ಹೇಗೆ ಇರಲಿ ಹೇಳು."

"ಮೂರು ದಿನವಷ್ಟೆ ?"

"ಆದರೂ...."

"ಅಯ್ಯೋ, ಸುಮ್ಮನಿರಿ ರಾಧಕ್ಕ. ಒಂದು ನಾಟಕ ನೋಡಲಿಲ್ಲ, ಒಂದು ಸಿನಿಮಾ ನೋಡಲಿಲ್ಲ. ನಿಮ್ಮದು ಯಾವಾಗಲೂ ಇದೇ ಹಾಡೆ !"

ರಾಧಾ ಮಾತಾಡದೆ ನೀರಸ ನಗೆ ಬೀರಿದಳು.

ಗಂಗಮ್ಮ ಹೊರಬಂದು ನುಡಿದಳು "ನೀನು ಇಂದೇ ಕರೆದುಕೊಂಡು ಹೋಗುವುದಾದರೆ ಹೋಗು ತಿಮ್ಮು." ಈ ಕಡೆ ತಿರುಗಿ ಮಗಳಿಗೂ ಹಾಗೇ ಅಂದಳು.

ಅಷ್ಟರೊಳಗಾಗಿ ತಿಮ್ಮು ನುಡಿದ "ನಾಟಕ ಕಂಪನಿ ಇಂದಷ್ಟೆ ಬಂದಿದೆ. ಇನ್ನು ಡೇರೆ ಹಾಕಿ ರಂಗ ಸಿದ್ಧಗೊಳಿಸುವುದು ಒಂದೆರಡು ದಿನಾಗಳಾದರೂ ಆಗುತ್ತೆ."

ತಾಯಿ, ಮಗಳ ಮುಖ ಸಪ್ಪೆಯಾಯಿತು.

"ಅಯ್ಯೋ, ಬರುವುದಂತೂ ಬಂತು. ಒಂದು ವಾರ ಮುಂಚೆ ಬಂದಿದ್ದರೆ ಇಷ್ಟರಲ್ಲಿ ನಾಟಕ ಶುರುವಾಗಿರುತಿತ್ತು" ಎಂದಳು ಗಂಗಮ್ಮ. ಮನೋವೇದನೆಯೆಲ್ಲಾ ಮುಖಮುದ್ರೆಯಲ್ಲಿ ಹೊರಹೊಮ್ಮಿತು.

"ಹುಟ್ಟಿದಂದಿನಿಂದ ಇಂದಿನವರೆಗೆ ನಾವು ಒಂದು ದಿನವೂ ಸುಖ ಸಂತೋಷ ಕಾಣಲಿಲ್ಲ. ದಿನಬೆಳಗಾದರೆ ಹಾಳು ಹರಿ ತಾಪತ್ರಯ. ಇಂದು ನಾಳೆ ಅಂತಲೇ ದಿನಗಳೆಯುತ್ತಿದೆ. ಶನಿವಾರ ಹುಟ್ಟಿದವರಿಗೆ ಐಶ್ವರ್ಯವಿರುತ್ತದೆ ಎಂದಿರಿ. ನನ್ನ ಸ್ಥಿತಿ ನೋಡಿದರೆ ದೇವರಿಗೇ ಪ್ರೀತಿ !"

ಮಾತು ಮುಗಿಯುವುದರೊಳಗಾಗಿ ಕಣ್ಣುಗಳಂಚಿನಲ್ಲಿ ಥಳಕ್ಕನೆ ನೀರಾಡಿತು.

ದೇವರಿದ್ದಾನೆ ಎನ್ನುತ್ತಾರೆ, ಅವನೆಲ್ಲಿದ್ದಾನೋ ಎಂದುಕೊಂಡಳು ಗಂಗವ್ವ. ಎದೆಯಾಳದಿಂದ ನಿಟ್ಟುಸಿರೊಂದು ಮೆಲ್ಲನೆ ತಪ್ಪಿಸಿ ಕೊಂಡಿತು. ಅಂತೂ, ದಿನದ ಗಾಲಿಯುರುಳಿತು.

ಹೊತ್ತು ಮೂಡಿ ಮೆಲ್ಲಮೆಲ್ಲನೆ ಮೇಲೇರುವಾಗ ವಾತಾವರಣ ಸುಮಧುರವಾಗಿತ್ತು. ಕರ್ಣದೇಶಗಳಲ್ಲಿ ಪಕ್ಷಿಗಳಿಂಚರದೊಂದಿಗೆ ಕಾಗೆಯ ಕರ್ಕಶ ದನಿಯೂ ಬೀಳುತಿತ್ತು. ಕುಕ್ಕುಟ ಸೈನ್ಯದ ಕೀಚಲು ದನಿಯೂ, ಹುಂಜರಾಜನ ಕೇಕೆಯೂ ಬೆರೆತು, ಸುತ್ತುಮುತ್ತಿನ ಪರಿಸರದಲ್ಲಿ ಮೊರೆತು, ಕರ್ಣಪಟಲಗಳಲ್ಲಿ ಪ್ರತಿಧ್ವನಿಗೈಯ್ಯುತಿತ್ತು. ಕಾವಳ್ಳಿ ಪಿಕಳಾರಗಳಿಂಚರವನ್ನು ಭೇದಿಸಿ ಕೋಗಿಲೆಯ ಇನಿದನಿ ಕಿವಿಗಿಂಪಾಗಿ ಮೊಳಗಿತು.

ಕುಹೂೂೂ ! ಕುಹೂೂೂ !

ಹುದುಗಿ ಹಾಡುವ ಕೋಗಿಲೆಗಾಗಿ ಕಣ್ಣುಗಳು ತುಡುಕಾಡಿದುವು. ಹಾಡಿದ ಕೋಗಿಲೆ ಕಣ್ಣಿಗೆ ಕಾಣಿಸದಿದ್ದರೂ ಮಧುರವಾಣಿ ಮತ್ತೆ ಮೊಳಗಿತು. ರಾಧಾ ಭಾರವಾದ ಹೆಜ್ಜೆಗಳನ್ನೆಳೆದುಕೊಳ್ಳುತ್ತ ಒಳಗಡೆ ಬಂದಳು,

"ಅಜ್ಜೀ...ಅಜ್ಜೀ....?"

ನೆರೆಮನೆ ತಿಮ್ಮ ದೌಡಾಯಿಸುತ್ತಲೇ ಒಳಬಂದ. ಕೂಗಿದ ದನಿ ಚಟ್ನಿ ರುಬ್ಬುವ ಗಡಗಡ ಸದ್ದಿನಲ್ಲಿ ಕರಗಿ ಹೋಯಿತು.

"ಅಜ್ಜೀ....?" ಅದೇ ದನಿ ಮತ್ತೆ ಮೊಳಗಿತು.

ಒಂದೇ ಉಸುರಿಗೆ ರುಬ್ಬುತಿದ್ದ ಗಂಗವ್ವನಿಗೆ ಅದು ಕೇಳಿಸಲೂ ಇಲ್ಲ. ಗಮನಿಸುವಷ್ಟು ವ್ಯವಧಾನವೂ ಇರಲಿಲ್ಲ. ಬಾಗಿದ ತಲೆಯೆತ್ತದೆ ಇನ್ನೂ ರುಬ್ಬುತ್ತಲೇ ಇದ್ದಾಳೆ.

"ಅಜ್ಜೀ...!"

ಹೊಸ್ತಿಲು ದಾಟಿ ಒಳಬರುವ ಮುನ್ನ ಇನ್ನೊಮ್ಮೆ ಕೂಗಿದ ತಿಮ್ಮ.

"ಏನೋ ಅದು ?"

"ಲಾರಿ ಬಂತು ! ಲಾರಿ !"

ಹಿಟ್ಟನ್ನು ಮುದ್ದೆ ಕಟ್ಟುತ್ತಿದ್ದ ರಾಧಾ "ನಿಜವಾಗಿ ?"

ಉತ್ತರವನ್ನು ನಿರೀಕ್ಷಿಸಿ ರುಬ್ಬುವುದನ್ನು ನಿಲ್ಲಿಸಿದಳು ಗಂಗಮ್ಮ.

"ಹ್ಞಾ, ನಿಜವಾಗಿಯೂ ಬಂದಿದೆ."

"ಅದೇಕೆ ಬಂತು ಇಲ್ಲಿ ?"

"ಗೊತ್ತಿಲ್ಲ. ಈಗಷ್ಟೆ ಬಂತು."

ಬಂದ ನೇರಕ್ಕೆ ತಿಮ್ಮ ಓಡಿಹೋದ. ಮನೆಮನೆಯ ಮಕ್ಕಳೂ ಅವನನ್ನು ಹಿಂಬಾಲಿಸಿದರು. ರಾಧೆಯ ಮಕ್ಕಳು ನೆರೆಮನೆಯ ಮಕ್ಕಳ ಸೊಂಟವನ್ನೇರಿದುವು. ತಾಯಿಮಗಳಿಬ್ಬರೂ ಮಾಡುತಿದ್ದ ಕೆಲಸವನ್ನು ಅಷ್ಟಕ್ಕೇ ಬಿಟ್ಟು ಹೊರಬಂದು ಹೊಸ್ತಿಲ ಬಳಿ ನಿಂತು ಕತ್ತು ಆನಿಸಿ ನೋಡಿದರು. ಹಿಟ್ಟು ಅಂಟಿದ ಕೈಯನ್ನು ಹಿಂದಕ್ಕಿಟ್ಟುಕೊಂಡು ರಾಧಾ ದೂರದ ಬಯಲ ಕಡೆ ದಿಟ್ಟಿ ಹೊರಳಿಸಿದಳು. ನೆರೆಹೊರೆಯ ಹೆಂಗಳೆಯರೂ ಕೊಂಕುಳಲ್ಲಿ ಮಕ್ಕಳನ್ನಾಂತು ಹೊರಬಂದು ನಿಂತರು. ದೂರದ ಬಯಲಿನಲ್ಲಿ ಕೆಂಪು ಲಾರಿ ಕಂಗೊಳಿಸಿತು.

ಅರೆ ! ಅದು ಬಂದುದಾದರೂ ಏಕೆ ?

ರಸ್ತೆಯಿಲ್ಲದಿದ್ದರೂ ಬಯಲ ಮಧ್ಯೆ ಬಂದು ನಿಂತುದು ಹೇಗೆ ?

ಅದು ಎಲ್ಲರ ಮನದಲ್ಲಿದ್ದ ಪ್ರಶ್ನೆ. ಲಾರಿ ಹೆದ್ದಾರಿಯನ್ನು ಬಿಟ್ಟು ಹರದ ಮೇಲೆ ಹರಿದು ಹುಲ್ಲುಗಾವಲಿನಲ್ಲಿ ಹಾದುಬಂದಿತ್ತು. ಅದರಿಂದ ಮೂವರು ಇಳಿದರು. ಅವರ ಉಡಿಗೆ ತೊಡಿಗೆಗಳು ಅವರು ಮುಸಲ್ಮಾನ ರೆಂಬುದಕ್ಕೆ ಸಾಕ್ಷಿಯಾಗಿದ್ದುವು. ಅವರು ಮನೆಮನೆಗೂ ಹೋಗಿ ಹಿರಿಯ ರೊಡನೆ ಮಾತಾಡಿ ಊರೊಳಗಿದ್ದ ಕುರಿ ಕೋಳಿಗಳನ್ನು ವ್ಯಾಪಾರ ಮಾಡಿ ತಮ್ಮ ಲಾರಿಗೆ ಹಿಡಿಸುವುದಕ್ಕಿಂತಲೂ ಮಿಕ್ಕಿ ಕುರಿ ಕೋಳಿಗಳನ್ನು ತುಂಬಿದರು. ಹೆಂಗಳೆಯರು ಮಕ್ಕಳು ಮರಿಗಳೊಡನೆ ನಿಂತು ನೋಡು ತಿದ್ದಂತೆಯೇ ಕುರಿ ಕೋಳಿಗಳು ಲಾರಿಯನ್ನೇರಿದುವು. ಅವು ಮಿಲಿಮಿಲಿ ಒದ್ದಾಡುವುದನ್ನು ನೋಡಿ ಮಕ್ಕಳು ಮರಿ ಕೇಕೆ ಹಾಕಿ ಚಪ್ಪಾಳೆ ತಟ್ಟಿ ನಗುವಿನ ಗುಲ್ಲೆಬ್ಬಿಸಿದರು.

ಲಾರಿ ಸದ್ದು ಮಾಡುತ್ತಾ ಬಯಲನ್ನು ದಾಟಿ ಹುಲ್ಲುಗಾವಲನ್ನು ಹಾಯ್ದು ಅಂಕುಡೊಂಕಿನ ದಾರಿಯನ್ನು ಸೇರಿತು. ಅಚ್ಚರಿಯ ಸುದ್ದಿ ಮಕ್ಕಳು ಮರಿಗಳ ಮನಸ್ಸನ್ನು ಮುಗಿಲಿನೆತ್ತರಕ್ಕೆ ಏರಿಸಿತು.

"ಅಜ್ಜೀ! ರೈಲಿನಲ್ಲಿ ಕುರಿ ಕೋಳಿಗಳನ್ನು ಮೈಸೂರಿಗೆ ಕಳುಹಿಸು ತ್ತಾರಂತೆ!"

ತಿಮ್ಮು ತನ್ನೆಲ್ಲಾ ಹಲ್ಲುಗಳನ್ನೂ ಪ್ರದರ್ಶನ ಮಾಡಿ ಒಂದೇ ಉಸು ರಿಗೆ ವಿಷಯವನ್ನು ಮುಂದಿಟ್ಟ. ಕಣ್ಣುಗಳಲ್ಲಿ ಆಸಕ್ತಿಯು ನಲಿಯುತಿತ್ತು.

"ಎಂಥಾ ಮಾತಾಡುತ್ತಿ?" ಕಿಸಕ್ಕನೆ ನಕ್ಕಳು ಗಂಗಮ್ಮ "ಇಸ್ಸಿಸ್ಸೀ ಅವು ಏಕೆ ಹೋದಾವು ಅಲ್ಲಿಗೆ? ಅವು ದಸರ ನೋಡುತ್ತವೆಯೋ?"

"ಲಾರಿಯವರೇ ಹಾಗೆಂದಿದ್ದಾರೆ!" ಕಣ್ಣರಳಿಸಿದ ತಿಮ್ಮು.

"ನೀನು ಸುಮ್ಮನಿರಪ್ಪಾ!"

"ನಿಜ ಅಜ್ಜಿ! ಅವು ರಾಂಪುರದವರೆಗೆ ಲಾರಿಯಲ್ಲಿ ಹೋಗುತ್ತವೆ. ಅಲ್ಲಿಂದ ರೈಲಿನಲ್ಲಿ ಕಳುಹಿಸುತ್ತಾರಂತೆ!"

"ಇದೆಂತಾ ವಿಚಿತ್ರ?" ಕಣ್ಣರಳಿಸಿದಳು ಗಂಗಮ್ಮ.

"ಮೈಸೂರಿನಲ್ಲಿ ಮಹಾರಾಜರು ದನ ಕರು ಕುರಿ ಕೋಳಿ ಹಕ್ಕಿಪಕ್ಕಿ ಎಲ್ಲಾ ಸಾಕಿದ್ದಾರೆ. ಅಲ್ಲಿಗೆ ಒಯ್ದರೂ ಒಯ್ಯಬಹುದು!" ಸೋಮಣ್ಣನ ಹೆಂಡತಿ ವಿಷಯವನ್ನು ಹೆಮ್ಮೆಯಿಂದ ಸಮರ್ಥನೆ ಮಾಡಿದಳು.

"ಇರಬಹುದಮ್ಮಾ ಅವು ಲಾರಿಯಲ್ಲಿ ಈಗ ಪಯಣಿಸಲಿಲ್ಲವೇ? ಹಾಗೆಯೇ ರೈಲಿನಲ್ಲೂ ಪಯಣ ಬೆಳೆಸಲಿಕ್ಕೂ ಸಾಕು!" ಎಂದಳು ರಾಧ.

"ಅವು ಸಾಕುವುದಕ್ಕಲ್ಲ ಅಜ್ಜೀ! ಕೊಯ್ಯುವುದಕ್ಕೆ!"

"ಸುಮ್ಮನಿರಬಾರದೇನೋ ತಿಮ್ಮು? ಸುಮ್ಮನೆ ಹುಚ್ಚಾಪಟ್ಟೆ ಮಾತನಾಡುತ್ತಿ. ಈಗೇನಲ್ಲಿ ಮಾರಿ ಜಾತ್ರೇನಾ?"

ತಿಮ್ಮನ ಉತ್ಸಾಹಕ್ಕೆ ಅಡ್ಡಗಟ್ಟೆ ಹಾಕಿದಳು ಗಂಗಮ್ಮ.

"ನಿಮಗೊತ್ತಿಲ್ಲ ಅಜ್ಜೀ! ಅಲ್ಲಿ ಭಾರಿ ಜನ ಇದ್ದಾರಂತೆ."

ಹಿಂದಿನಿಂದ ಅಳುದಸಿಯೊಂದು ಹೊರಬಿತ್ತು. "ನನಗೆ ಹೀಗೆ ಅಂತ ತಿಳಿದಿದ್ದರೆ ನಾನು ಕುರಿ ಕೊಡುತ್ತಿರಲಿಲ್ಲ. ಚೆನ್ನಾಗಿ ಸಾಕುತ್ತಾರೆಂದು ಕೊಟ್ಟೆ!"

"ಸುಮ್ಮನೆ ಯಾರಾದರೂ ಸಾಕುತ್ತಾರೆಯೇ? ನಮಗೇ ಹಿಟ್ಟಿಲ್ಲದ ಕಾಲ–ಈಗ."

"ಹಾಗಾದರೆ........?"

ಅರಿತೋ ಅರಿಯದೆಯೋ ಕಿಲಕಿಲ ನಗುವಿನ ನಿನಾದ ತುಂಬಿ ಹರಿಯಿತು.

೦ ೦ ೦ ೦

ಅಂಗಳದ ಪರಿಸರದಲ್ಲಿ ಎಲ್ಲಿ ನೋಡಿದರೂ ದುಂಬಿಗಳೇ.

ಮಕರಂದದ ಸವಿಯನ್ನುಂಡು ಸಾನಂದದಿಂದ ಹಾರಾಡುವ ಕೋಟಿ ಕೋಟಿ ದುಂಬಿಗಳು ತಮ್ಮ ತಮ್ಮ ಗೂಡುಗಳನ್ನರಸುತ್ತಿವೆಯೋ ಏನೋ. ಅಲ್ಲಲ್ಲೇ ವರ್ತುಲಾಕಾರವಾಗಿ ಸುತ್ತಾಡುತ್ತಿವೆ. ಚೈತನ್ಯದ ಹೊಳೆಯಲ್ಲಿ ಮಿಂದು ಚೆಲ್ವಿನ ಚೆಲುವನ್ನು ಚೆಲ್ಲಿ ವಿಜಯ ಧ್ವನಿಗೈಯುತ್ತಾ ಹಾರಾಡುವ ಅವು ತನು ಮನಗಳನ್ನು ಸೆರೆ ಹಿಡಿಯುವಂತಿವೆ.

ವರ್ಷಮಾನ ದಶಮಾನಗಳಳಿದರೂ ಸಹ ಮಾದೇನಹಳ್ಳಿಗೆ ರೈಲು ಬರುವ ಸುದ್ದಿ ರೆಕ್ಕೆ ಪುಕ್ಕ ತಳೆಯುತ್ತಲೇ ಇತ್ತು. ಮಾದೇನಹಳ್ಳಿಯ ಮಂದಿ ಅಡಕೆಲೆ ಅಗಿಯುವಾಗಲೂ ಕಳೆ ಕೀಳುವಾಗಲೂ ಉತ್ತು ಬಿತ್ತುವಾಗಲೂ ಹಾದಿ ನಡೆಯುವಾಗಲೂ ಸುದ್ದಿಗೆ ಉಪ್ಪುಕಾರ ಹಚ್ಚುತ್ತಿದ್ದರು. ಬಣ್ಣ ಬಣ್ಣವಾಗಿ ಚಿತ್ರವಿಚಿತ್ರವಾಗಿ ವಿಜೃಂಭಿಸುತಿತ್ತು ಹಳೆಯ ಸುದ್ದಿ.

ಕೆಲವೊಮ್ಮೆ ಲಾರಿಯಲ್ಲಿ ರೈಲಿನಲ್ಲಿ ಕುರಿಗಳು ಮೈಸೂರಿಗೆ ಪಯಣಿಸಿದ ಸುದ್ದಿಯೂ ಚರ್ವಿತಚರ್ವಣವಾಗುತಿತ್ತು. ದೇಶೋವಿಶಾಲವಾದ ಲೋಕೋತ್ತರವಾದ ವಿಷಯ ಹೊರಹೊಮ್ಮುವಾಗ ಜನಮೂಕ ವಿಸ್ಮಿತರಾಗುತ್ತಿದ್ದರು.

ಕಾಲಮಾನವು ದಶಮಾನದ ಅಂಚನ್ನು ಮೆಹತ್ತಿನಿಂದ ದಾಟುವಾಗ ರಾಧಾ ನಾಲ್ಕು ಗಂಡು ಮಕ್ಕಳ ತಾಯಿಯಾದಳು. ಬರುಬರುತ್ತಾ ಮೈ ಎಲುಬಿನ ಹಂದರವಾಗಿ ಎದೆ ಆಟದ ಬಯಲಾಯಿತು. ಕಾರ್ಮಿಕ ಜೀವಿಯಾದ ಶಾಂತಪ್ಪನ ಬಳಿ ನಾಗರಿಕ ಯೋಜನೆಯಾಗಲೀ ನಾಗರಿಕ ವ್ಯವಹಾರವಾಗಲೀ ಸುಳಿಯುವಂತೆಯೂ ಇಲ್ಲ. ಇದ್ದ ನಾಲ್ಕೆಕರೆ ಭೂಮಿಯಲ್ಲಿ ತಾನೇ ತಾನಾಗಿ ದುಡಿದು ದಿನಗಳೆಯುತ್ತಿದ್ದ.

ಊರಿನಲ್ಲಿ ಶಾಲೆ ಇರಲಿಲ್ಲವಾದ್ದರಿಂದ ನೆರೆಹೊರೆಯ ಮಕ್ಕಳೊಡನೆ ರಾಧೆಯ ಮಕ್ಕಳು ಚಿಟ್ಟು ಬಿಲ್ಲುಗಳನ್ನು ಹಿಡಿದು ಹಕ್ಕಿಪಕ್ಕಿಗ

ಳನ್ನು ಹೊಡೆದು ದಿನಚರಿಯನ್ನು ಆರಾಮವಾಗಿ ಕಳೆಯುತಿದ್ದರು. ರಾಧೆಗೆ ಮಕ್ಕಳಿಗೆ ವಿದ್ಯೆಯಿಲ್ಲವಲ್ಲಾ ಎಂಬ ಕೊರಗಾದರೆ ಶಾಂತಪ್ಪ ಅಷ್ಟೇ ನಿರಾಳ. ರಾಧೆ ಮನಸ್ಸು ತಡೆಯಲಾರದೆ ಪ್ರಸ್ತಾಪೆತ್ತಿದರೆ "ನಾವೆಲ್ಲಾ ವಿದ್ಯೆಯಿಲ್ಲದೆ ಕೆಟ್ಟದ್ದೇನು ರಾಧಾ?" ಎಂದು ಬಿಡುವ. ಮುಂದೆ ಅದನ್ನೆಂದೂ ಮರುಪ್ರಸ್ತಾಪ ಮಾಡುವಂತಿಲ್ಲ. ರಾಧೆಯ ಹೃದಯ ಭಾರವಾದರೂ ದಿನಚರಿ ಸಾಗುತಿತ್ತು.

ಕಾಲಯಾನವು ಉಬ್ಬು ತಗ್ಗುಗಳಿಂದ ಕೂಡಿದರೂ ಹಾದಿ ಸಾಗಿತು. ಹೊಳೆಗೊಂದು ಸೇತುವೆಯೂ ಬರಲಿಲ್ಲ. ಊರಿಗೊಂದು ಶಾಲೆಯೂ ಬರಲಿಲ್ಲ. ರೈಲಿನ ಸುದ್ದಿಯೂ ಗಾಳಿ ಮಾತಾಯಿತು. ರಾಧಾ ಬೇಸಗೆಯಲ್ಲಿ ಮಾದೇನಹಳ್ಳಿಗೆ ಪಯಣಿಸುತ್ತಿದ್ದಳು. ಜರ್‍ರನೆ ಜಡಿಮಳೆ ಹಿಡಿಯುವ ಮುನ್ನ ಮಾದೇನಹಳ್ಳಿಗೆ ಹೋಗಿ ಒಂದು ದಿನ ತಂಗಿದ್ದು ಕಂಬನಿಯ ಕಡಲಲ್ಲಿ ಮಿಂದು ಹಿಂದಿರುಗುತ್ತಿದ್ದಳು. ಮುದ್ದಣ್ಣ ದಿನೇ ದಿನೇ ಮುಪ್ಪಿನ ಹಾದಿ ಹಿಡಿಯುತ್ತಿದ್ದ. ಇಳಿವಯಸ್ಸಿನಲ್ಲಿ ಸಹಾಯಕರಿಲ್ಲದೆ ತೊಂದರೆಯಾಯಿತಲ್ಲಾ ಎಂಬ ಕೊರಗು ರಾಧೆಗೆ. ಹೆಣ್ಣು ಮಗುವಿಗೆ ಬದಲಾಗಿ ಗಂಡು ಮಗು ವನ್ನೀಡಿದ್ದರೆ ಭಗವಂತನಿಗೆ ಏನು ನಷ್ಟವಾಗುತಿತ್ತು? ಎಂಬುದು ಗಂಗ ಮ್ಮನ ಅತೀವ ಗೋಳು.

ತಾಯಿ ಮಗಳು ಇದರ ಸಲುವಾಗಿ ಸಂಧಾನ ಆರಂಭಿಸಿದರು.

ಮುದ್ದಣ್ಣನೇ ಆಗಲೀ ಶಾಂತಪ್ಪನೇ ಆಗಲೀ ಸ್ಥಳ ಬದಲಾವಣೆ ಮಾಡಿಕೊಂಡರೆ ಒಂದೇಕಡೆ ವಾಸಿಸಬಹುದು ಎಂದು. ಮುದ್ದಣ್ಣ ಮೊಟ್ಟ ಮೊದಲಿಗೆ ತನ್ನ ತಾಪತ್ರಯಗಳನ್ನು ಮುಂದಿಟ್ಟು ನಕಾರ ಹೊಡಿದ. ಅನಂತರ ಶಾಂತಪ್ಪನೂ ಹಾಗೇ ಅಂದ. ತಾಯಿ ಮಗಳು ವಿಧಿ ಇಲ್ಲದೆ ಮರೆಯಲ್ಲಿ ಕಂಬನಿಗರೆದರು.

ದಿನಗಳುರುಳಿದುವು. ವಿಧಿಯ ಕರಾಳ ಕೈ ಇದ್ದಕ್ಕಿದ್ದಂತೆ ಚಾಚಿತು. ಜರ್‍ರನೆ ಸುಳಿಯುವ ಜಡಿಮಳೆಯಲ್ಲಿ ಮುದ್ದಣ್ಣ ಹಾಸಿಗೆ ಹಿಡಿದ. ಕೆರೆ ಕುಂಟೆಗಳು ತುಂಬಿ ತುಳುಕುತಿದ್ದುವು, ಮಾದೇನಹಳ್ಳಿಯ ಹೊಳೆ ಎರಡು ದಂಡೆಗಳನ್ನೂ ಆಕ್ರಮಿಸಿ ಒಂದಕ್ಕೆ ಹತ್ತಾಗಿ ಕೆಂಬಣ್ಣದಿಂದ ತುಂಬಿ ಹರಿಯುತಿತ್ತು.

ಗುಡುಗು ಮಿಂಚು ಬಿರುಗಾಳಿಗಳೊಂದಿಗೆ ಭೋರಿಡುತಿತ್ತು ಜಡಿಮಳೆ.

ತಿಮ್ಮ ಕಂಬಳಿ ಸೂಡಿ ಜಡಿಮಳೆಗೆ ಮೈಕೊಟ್ಟು ಹೊಳೆಯ ತೀರಕ್ಕೆ ಹೋಗಿ ತನ್ನ ಶಕ್ತಿಯನ್ನೆಲ್ಲಾ ಪ್ರಯೋಗಿಸಿ ಕೂಗು ಹಾಕಿದ. "ಓ...! ಚಿನ್ನಪ್ಪೊ ೯೯೯ !"

ಕೂಗು ಶಿಳ್ಳೆಯಂತೆ ಹೊರಬಿದ್ದರೂ ಮಳೆಗಾಳಿಯ ಆರ್ಭಟದಲ್ಲಿ ಕರಗಿ ಹೋಯಿತು. ಮಳೆಗಾಳಿಯಲ್ಲಿ ತೊಪ್ಪನೆ ತೊಯ್ದು ಗಡಗಡ ನಡುಗುತ್ತ ತಿಮ್ಮ ಹತ್ತಾರು ಬಾರಿ ಕೂಗು ಹಾಕಿದರೂ ಸಹ ಮಳೆಯ ಮೊರೆತ ದನಿಯನ್ನು ಮೊಳಕೆಯಲ್ಲೇ ಕಬಳಿಸಿತು.

ಹೊಳೆಯಾಚೆಯ ದಡದಿಂದ ನೂರು ಮಾರು ದೂರದಲ್ಲಿ ಚಿನ್ನಪ್ಪನ ಜಮೀನು. ಅದರಾಚೆಯ ಅಂಚಿನಲ್ಲಿ ಅವನ ಗುಡಿಸಲು. ನಿಶ್ಶಬ್ದವಾಗಿದ್ದಾಗ ಒಂದೇ ಕೂಗಿಗೆ ಹೊರಡುತಿದ್ದ ಮರುದನಿ ಇಂದು ಹತ್ತಾರು ಬಾರಿ ಕೂಗಿದರೂ ಇಲ್ಲ. ಪುನಃ ಪುನಃ ಕೂಗು ಹಾಕಿದ ತಿಮ್ಮ. "ಓ....ಚಿನ್ನಪ್ಪೊ ೯೯೯೯ !"

ತಿಮ್ಮನ ದನಿ ದನಿದರೂ ಮರುದನಿ ಹೊರಬೀಳಲಿಲ್ಲ. ಮಳೆಗಾಳಿಯ ಆರ್ಭಟ ಅವ್ಯಾಹತವಾಗಿ ನಡೆಯಹತ್ತಿತು. ಎದುರಿಗೆ ಭೋರ್ಗರೆದು ಹರಿವ ಹೊಳೆಯನ್ನು ಭಯವಿಹ್ವಲನಾಗಿ ನಿಟ್ಟಿಸುತ್ತ ತುಸು ನಿಂತ. ಸೂಡಿದ ಕಂಬಳಿ ತೊಪ್ಪನೆ ತೊಯ್ದು ಮೈಮೇಲೆ ನೀರು ಜರ್ರನೆ ಹರಿಯಿತು. ದನಿ ಸೋತು—ಮೈಸೋತು ಅಲ್ಲಿ ನಿಲ್ಲಲಾಗದೆ ಇನ್ನೇನು ಹಿಂದಿರುಗುವುದರಲ್ಲಿದ್ದ. ಅಷ್ಟರಲ್ಲಿ ಹೊಳೆಯಾಚೆಯ ದಡದಲ್ಲಿ ಮನುಷ್ಯಾಕಾರ ಮಳೆಯ ಹೆದ್ದೆರೆಯಲ್ಲಿ ಅಸ್ಪಷ್ಟವಾಗಿ ಕಾಣಿಸಿತು.

...ಸದ್ಯ ಬಂದನಲ್ಲಾ ಮಹರಾಯ !

"ಅದಾರು ? ಚಿನ್ನಪ್ಪನೇನೋ ?" ಏರಿದ ದನಿಯಲ್ಲಿ ಕೂಗಿದ ತಿಮ್ಮ. ಚಳಿಗಾಳಿಯ ಒತ್ತಡದಲ್ಲಿ ದನಿ ಕಂಪಿಸಿತು.

"ಹೌದು !...ಯಾರೋ ಕೂಗು ಹಾಕಿದಂತಾಯಿತು. ನೀನೇನೋ ?" ಕಂಬಳಿಯ ಮರೆಯಲ್ಲಿ ಹುದುಗಿದ ಮುಖ ಅಷ್ಟೇ ಏರಿದ ದನಿಯಲ್ಲಿ

ಮರುಪ್ರಶ್ನೆ ಹಾಕಿತು.

"ನಾನು ಕಣೋ ತಿಮ್ಮ ! ನೀನು ಚಿನ್ನಪ್ಪನೇನೋ? ಮಳೆಗಾಳಿ ದೆಸೆಯಿಂದ ಸರಿಯಾಗಿ ಕೇಳಿಸುತ್ತಿಲ್ಲ."

ತನ್ನ ಶಕ್ತಿಯನ್ನೆಲ್ಲಾ ಒಟ್ಟುಗೂಡಿಸಿ ಏರಿದ ದನಿಯಲ್ಲಿ ಕೂಗಿ ಹೇಳಿದ ತಿಮ್ಮ. ಅದೇ ನೇರಕ್ಕೆ ಹೊಳೆಯಾಚೆಯ ದಂಡೆಯಿಂದಲೂ ದನಿ ಹೊರಬಿತ್ತು. "ಏನೋ ಅದು ? ಸರಿಯಾಗಿ ಹೇಳೋ ?"

ಮುದ್ದಣ್ಣನಿಗೆ ತೀವ್ರ ಖಾಯಿಲೆಯಾದ ಸುದ್ದಿಯನ್ನು ಬಿಡಿ ಬಿಡಿ ಬಿಡಿಯಾಗಿ ಬಿತ್ತರಿಸಿದ ತಿಮ್ಮ. ಹತ್ತಾರು ಬಾರಿ ಬಿತ್ತರಿಸಿದರೂ ಸುದ್ದಿಯ ಸಾರವನ್ನೆಲ್ಲಾ ಸೆಳೆದುಕೊಂಡಿತು ಮಳೆಯ ನೊರೆತ.

"ಸರಿಯಾಗಿ ಹೇಳೋ ೯ ೯ ೯ !" ಏರಿದ ದನಿಯಲ್ಲಿ ಕೂಗು ಹಾಕಿದ ಚಿನ್ನಪ್ಪ.

ತಿಮ್ಮ ಹತ್ತಾರು ಬಾರಿ ಹೇಳಿದುದನ್ನೆಲ್ಲಾ ಕಲೆಹಾಕಿ ಚಿನ್ನಪ್ಪ ಹೀಗೆಂದು ಅರ್ಥ ಮಾಡಿದ...ಮುದ್ದಣ್ಣನಿಗೆ ದೆವ್ವ ಹಿಡಿದಿದೆ !

ಕೊನೆಯ ಬಾರಿ ಹೇಳುವಾಗ ತಿಮ್ಮ ಪುನಃ ತನ್ನೆಲ್ಲ ಶಕ್ತಿಯನ್ನು ಒಟ್ಟುಗೂಡಿಸಿ ಕೂಗಿದ "ಜ್ವರ ಬಂದಿದೆ, ಜ್ವರ !"

"...! ಹಾಗೇನೋ ? ದೆವ್ವ ಹಿಡಿದಿದೆ ಅಂದ ಹಾಗೆ ಕೇಳಿಸಿತು."

"ಶಾಂತಪ್ಪನಿಗೆ ಸುದ್ದಿ ಹೇಳಿ, ಸಾಯಂಕಾಲ ತೀರಕ್ಕೆ ಬಂದು ಕೂಗು ಹಾಕಲು ಹೇಳು. ನಾನು ಮುದ್ದಣ್ಣನನ್ನು ನೋಡಿಕೊಂಡು ಬಂದು ನಂಜಯ್ಯನ ಮನೆಯಲ್ಲಿರುವೆ. ತೀರದಿಂದ ಕೂಗು ಹಾಕಿದರೆ ಅಲ್ಲಿಂದ ಬಂದು ಅವನಿಗೆ ಸುದ್ದಿ ಕೊಡುವೆ."

ಈ ಕಡೆಯ ತೀರದಿಂದ ನಂಜಯ್ಯನ ಮನೆ ನೂರು ಮಾರು ದೂರ ದಲ್ಲಿತ್ತು. ಆ ಕಡೆಯಿಂದ ಕೂಗು ಹಾಕಿದರೆ ಕೇಳಿಸುವುದು ಸಹಜ. ಅವನು ಬರುವುದು ಹಿಂದು ಮುಂದಾದರೆ ಮಳೆಯಲ್ಲಿ ನೆನೆಯುತ್ತ ತೀರದಲ್ಲಿ ನಿಲ್ಲುವುದಕ್ಕಿಂತ ನಂಜಯ್ಯನ ಮನೆಯಲ್ಲಿರುವುದು ಸುರಕ್ಷಿತ ವೆಂಬುದನ್ನರಿತೇ ಹಾಗೆಂದು ಸುದ್ದಿ ಕೊಟ್ಟ. ಕೊನೆಯ ಬಾರಿ 'ಅಜ್ಜಿಗೆ ಭಯ ಹತ್ತಿ ಹೋಗಿದೆ ! ಅಜ್ಜ ಬಲು ಸುಸ್ತಾಗಿದ್ದಾನೆ !' ಎಂಬಂದನ್ನು ಸಾರಿ ಸಾರಿ ಹೇಳಿ ಹಿಂದಿರುಗಿದ.

ಹೊಳೆ ಇಳಿಯದ ಹೊರತು ಶಾಂತಪ್ಪ ಬರುವಂತಿಲ್ಲ. ಸ್ವಲ್ಪ ಕಾಲ ನೋಡಿಕೋ ನೀನೇ !"

ಭೋರ್ಗರೆದು ಹರಿಯುವ ಹೊಳೆ ಮರುದನಿ ಕೊಟ್ಟಿತು....
"ನೋಡಿಕೋ ನೀನೇ !"

ಚಿನ್ನಪ್ಪ ಎರಡು ಮೈಲಿ ಹಾದಿಯನ್ನು ಮಳೆಗಾಳಿಯಲ್ಲಿ ನಡೆಯಲಾರದೆ ನಡೆದು ಶಾಂತಪ್ಪನಿಗೆ ಸುದ್ದಿಯನ್ನು ಮುಟ್ಟಿಸಿದ. ಸುದ್ದಿ ಕೇಳಿ ರಾಧೆಯ ಕಣ್ಣುಗಳಲ್ಲಿ ಕಂಬನಿಯ ಕೋಡಿ ಹರಿಯಿತು. ನಾನಾ ದೇವರಿಗೆ ಹರಕೆ ಹೊತ್ತು ಕೈ ಜೋಡಿಸಿ ಬೇಡಿಕೊಂಡರೂ ಮಳೆ ಹರಿಯಲಿಲ್ಲ. ಹೊಳೆ ಇಳಿಯಲಿಲ್ಲ.

ಸುದ್ದಿ ತಿಳಿದು ಸುತ್ತಮುತ್ತಿನ ಮಂದಿ ರಾಧೆಯ ಬಳಿಗೆ ಧಾವಿಸಿ ಬಂದರು. ಯಾರೇ ಬಂದರೂ ಯಾರೇ ಹೋದರೂ ಯಾರೇ ಮಾತನಾಡಿಸಿದರೂ ಅವಳ ಎದೆಯ ಹಂಬಲ ಒಂದೇ...ಬೇಗನೇ ಮಳೆ ಬಿಟ್ಟು ಹೊಳೆ ಇಳಿದು ಅಪ್ಪನ ಮುಖ ದರ್ಶನ ಮಾಡಿಸಪ್ಪಾ ಭಗವಂತಾ !

ಸುತ್ತಮುತ್ತಣ ಮಂದಿ ಸಮಾಧಾನ ಹೇಳಿ ಹೋದರು. ಮುದ್ದಣ್ಣ ಗುಣವಾಗುತಿದ್ದಾನೆಂಬ ಸುಳ್ಳು ವದಂತಿಯನ್ನೂ ತಂದರು. ಆದರೂ ರಾಧೆಯ ರೀತಿಯೇ ಬೇರೆ. ಅಡುಗೆ ಮಾಡುವಾಗಲೂ ಅಳು, ಕೂತರೂ ಅಳು, ನಿಂತರೂ ಅಳು. ಮಾತಿಗೆ ಅದೇ ಸುದ್ದಿ. ತಲೆಯಲ್ಲಿ ಅದೇ ಚಿಂತೆ.

ಹೊಳೆಯ ಈಚೆಯ ಜನ ಮುದ್ದಣ್ಣನ ಮನೆಗೆ ಹೋಗಿ ಬರತೊಡಗಿದರು. ಬಂದವರೆಲ್ಲ ತಮಗೆ ತೋಚಿದಂತೆ ಕಾಡುಮದ್ದಿನ ಔಷಧಿಯನ್ನು ಹೇಳಿದರು. ಬೇರಿನ ಕಷಾಯಗಳು ತಯಾರಾದುವು. ಎಲ್ಲವನ್ನು ಕುಡಿದು ಮುದ್ದಣ್ಣ ಬೇಸತ್ತ. ಬಾಯಿ ಕಹಿ ಹುಟ್ಟಿ ಮೈಸೋತು ಸುಣ್ಣವಾಯಿತು.

ಮಳೆ ಹೊಳೆ ಯಥಾ ರೀತಿ ಇತ್ತು. ತಿಮ್ಮನಾಗಲೀ ಸೋಮಣ್ಣನಾಗಲೀ ನದೀ ತೀರಕ್ಕೆ ಹೋಗಿ ಶಾಂತಪ್ಪನಿಗೆ ಸುದ್ದಿ ಮುಟ್ಟಿಸುತಿದ್ದರು. ಕೆಲವೊಮ್ಮೆ ಸುದ್ದಿ ಕೊಡಲಿಕ್ಕಾಗದೆ ಹಾಗೇ ಹಿಂದಿರುಗಿ ಬರುತಿದ್ದುದೂ ಉಂಟು. ಅನೇಕ ವೇಳೆ ಶಾಂತಪ್ಪ ನದೀ ತೀರಕ್ಕೆ

ಬಂದರೂ ಸುದ್ದಿ ತಿಳಿಯದೇ ಹಿಂದಿರುಗುತಿದ್ದುದೂ ಉಂಟು. ಮುಖ್ಯ ವಾಗಿ ಇವನು ಬಂದಾಗ ಅವನಿಲ್ಲ, ಅವನು ಬಂದಾಗ ಇವನಿಲ್ಲ.

ತೆಪ್ಪ ಕಟ್ಟಿ ಹೊಳೆ ದಾಟಿದರೆ ಹೇಗೆ ಎಂಬ ಪ್ರಶ್ನೆಯನ್ನು ಮುಂದಿಟ್ಟಳು ರಾಧಾ. ಆದರೆ ನೀರು ನುಗ್ಗುವ ರಭಸಕ್ಕೆ ತೆಪ್ಪ ಹಾಯಿಸುವುದು ಸಾಧ್ಯವೇ ಇಲ್ಲ ಎಂದು ಎಲ್ಲರೂ ಏಕ ಕಂಠದಿಂದ ನುಡಿದಾಗ ರಾಧಾ ಆಸೆಯು ಹಿರಿಯೊಡೆದು ಸಪ್ಪೆಯಾದಳು. ತನುಮನಗಳು ದುಃಖ ದುಗುಡ ಉದ್ವೇಗಗಳ ಗಣಿಯಾದುವು, ಶಾಂತಪ್ಪ ಸುದ್ದಿಗಾಗಿ ನದೀ ತೀರಕ್ಕೆ ಹೊರಟೊಡನೆ ತಾನೂ ಹೊರಟಳು. ಶಾಂತಪ್ಪ ಬೇಡವೆಂದರೂ ಕೇಳ ಲಿಲ್ಲ. ಅಪ್ಪ ಅಮ್ಮ ಕಂಬಳಿ ಸೂಡಿ ಮಳೆಯಲ್ಲಿ ತೊಯ್ಯುತ್ತಾ ನಡೆದುದನ್ನು ಕಣ್ಮರೆಯಾಗುವವರೆಗೂ ಮಕ್ಕಳು ತಲೆಬಾಗಿಲಿನಲ್ಲಿ ನಿಂತು ನೋಡಿದರು. ಹೊಳೆಯಂಚನ್ನು ಸೇರುವುದರೊಳಗಾಗಿ ಅವಳ ಮೈನೆಂದು ಸಣ್ಣಗೆ ನಡುಕ ಹುಟ್ಟಿತು. ಹೆಗ್ಗಲ್ಲನ್ನೇರಿ ತುಸು ಎತ್ತರದಿಂದ ಕೂಗು ಹಾಕಿದರೆ ಬೇಗನೆ ಕೇಳಿಸೀತೆಂಬ ಭಾವನೆ. ಆದರೆ ಮಳೆಯಲ್ಲಿ ತೊಯ್ದು ಕಲ್ಲು ಹಾಸುಂಬೆ ಹತ್ತಿ ಜಾರುತಿದ್ದುದರಿಂದ ಹತ್ತುವಂತೆಯೂ ಇರಲಿಲ್ಲ.

"ನಂಜಯ್ಯೋ೯೯೯ ! ಕ್ಕೂಊಊ ಹೂ ಹೂ ಹೂ !"

ಕಂಠ ಕಹಳೆಯಂತೆ ಮೊಳಗಿದರೂ ಮಳೆಯ ಮೊರೆತ ಮೊಳಕೆಯಲ್ಲೇ ಕಬಳಿಸಿಬಿಟ್ಟಿತು.

ಉತ್ತರ ಬಾರದಿರಲು ಶಾಂತಪ್ಪ ಪುನಃ ಪುನಃ ಕೂಗು ಹಾಕಿದ. ಹೊಂಚು ಹಾಕುತಿದ್ದ ಮಳೆ–ಗುಡುಗು ಅಲ್ಲಿಂದಲ್ಲೇ ಕಬಳಿಸುವ ಸಂಚು ಹೂಡಿತು. ನಿರಾಶನಾದ ಶಾಂತಪ್ಪ ಅಂದ "ಈ ಜಡಿ ಮಳೆಯಲ್ಲಿ ಇನ್ನೆಷ್ಟು ಹೊತ್ತು ನಿಲ್ಲುವುದಾಗುತ್ತೆ ? ನಾಳೆ ಬಂದರಾಗದೇ ?"

ರಾಧಾ ನಿಂತಲ್ಲಿಂದ ಕದಲಲಿಲ್ಲ. ತುಟಿಯೂ ಬಿರಿಯಲಿಲ್ಲ. ಸುಮ್ಮನೆ ನಿಲ್ಲಲಾಗದೆ ಶಾಂತಪ್ಪ ಬೇಸರದಿಂದ ಪುನಃ ಕೂಗು ಹಾಕಿದ. ದೂರದಿಂದ ಮರುದನಿ ಹರಿದು ಬಂತು. "ಕೂಊಊ ! ಹೂ ಹೂ ಹೂ ಹೂ !".

"ಸದ್ಯ...ಸಾಕಪ್ಪಾ !"

ಮರುದನಿ ಕೊಟ್ಟ ವ್ಯಕ್ತಿಗಾಗಿ ರಾಧಾ ಮೈಯೆಲ್ಲಾ ಮನಸ್ಸಾಗಿ

ಕಾದು ನಿಂತಳು. ಎದೆ ಕಲ್ಲಾಗಿತ್ತು. ಇನ್ನಷ್ಟು ಹೊತ್ತಿನೊಳಗಾಗಿ ಆ ಕಡೆಯ ತೀರದಲ್ಲಿ ನಂಜಯ್ಯ ಮೈದೋರಿದ. ಕಂಬಳಿಯ ಮುಸುಗಿನೊಳಗಿಂದ ದನಿ ಹೊರಬಿತ್ತು. "ನಾನಿನ್ನೂ ಮುದ್ದಣ್ಣನನ್ನು ಹೋಗಿ ನೋಡಲಿಲ್ಲ. ಇಂದು ತಿಮ್ಮ ಈ ಕಡೆ ಬರಲಿಲ್ಲ. ಮಧ್ಯಾಹ್ನ ತೀರಕ್ಕೆ ಬಾ. ನಾನು ಹೋಗಿ ನೋಡಿಕೊಂಡು ಬಂದಿರುವೆ."

ನಂಜಯ್ಯ ಅದನ್ನೇ ಬಿಡಿ ಬಿಡಿಯಾಗಿ ಪುನರಾವೃತ್ತಿ ಉಚ್ಚರಿಸಿದ.

ರಾಧಾ ಸಪ್ಪೆ ಮೋರೆಯಿಂದ ನಿಂತಳು. ಜಡಿಮಳೆಯಲ್ಲಿ ನೆನೆದುಕೊಂಡು ಬಂದಿದ್ದರೂ ಸುದ್ದಿ ತಿಳಿದುಬರಲಿಲ್ಲ. ಕಂಬನಿಗರೆಯುತ್ತಲೇ ಹಾದಿ ನಡೆದಳು ರಾಧಾ. ಮತ್ತೆ ಮೂರು ದಿನಗಳು ಸಂದುವು. ನಿಗದಿಯಾದ ಸಮಯಕ್ಕೆ ಸರಿಯಾಗಿ ಶಾಂತಪ್ಪ ಸುದ್ದಿ ತರುತಿದ್ದ. ನಾಲ್ಕನೆಯ ದಿನ ಸಂಜೆಗಪ್ಪು ಕವಿಯುತಿದ್ದಂತೆ ಮುದ್ದಣ್ಣ ಸಗ್ಗದ ಹಾದಿ ಅಡರಿದ. ಅದನ್ನು ತಿಳಿಸಬೇಕಾದರೆ ತಿಮ್ಮ ದನಿ ಬಳಲುವವರೆಗೆ ಕೂಗಿ ಹೇಳಬೇಕಾಯಿತು. ಆಸಲೆ ಪಾಸಲೆಯವರು ರಾಧೆಗೆ ಸುದ್ದಿ ಮುಟ್ಟಿಸಿದರು. ಮನೆಯಲ್ಲೆ ಮನಮುಟ್ಟಿ ಅತ್ತಳು ರಾಧಾ. ದುಃಖದ ಒತ್ತಡದೊಂದಿಗೆ ನೈಸರ್ಗಿಕ ಒತ್ತಡವೂ ಕೂಡಿ ರಾಧೆ ಹಾಸಿಗೆ ಹಿಡಿದಳು. ಮಳೆ ಬಿಟ್ಟು ನದಿ ಇಳಿದೊಡನೆ ತಾಯಿಯನ್ನು ನೋಡಲು ಮಾದೇನಹಳ್ಳಿಗೆ ಹೋಗಬೇಕೆಂಬ ತುರಾತುರಿ ಇದ್ದರೂ ಮೈಯಲ್ಲಿ ತ್ರಾಣವಿರಲಿಲ್ಲ. ಹಾಸಿಗೆಯಲ್ಲಿ ಮುಸುಗಿಟ್ಟು ಎಳೆಯ ಮಗುವಿನಂತೆ ಅತ್ತಳು ರಾಧಾ.

ನೆರೆಹೊರೆಯವರು ಕೂಡಿ ಮುದ್ದಣ್ಣನ ಅಂತಿಮ ಸಂಸ್ಕಾರ ನಡೆಸಿದ್ದರು. ಮೈಯ್ಯಲ್ಲಿನಿತು ತ್ರಾಣ ಕೂಡಿ ಬಂದ ನಂತರ ರಾಧೆ ಮಾದೇನಹಳ್ಳಿಯ ಹಾದಿ ತುಳಿದಳು. ನಡೆದು ದಣಿವಾದಾಗ ಅಲ್ಲಲ್ಲಿ ಕೂತು ಎದ್ದು ದಣಿವಾರಿಸಿಕೊಂಡು ಮನೆ ಮುಟ್ಟುವಾಗ ಹೊತ್ತು ಇಳಿಮುಖವಾಗುತಿತ್ತು. ಮನೆಯನ್ನು ತಲುಪಿದೊಡನೆ ತಂದೆ ಮಲಗುತಿದ್ದ–ಕೂರುತಿದ್ದ ಸ್ಥಳವನ್ನು ತಡುಕಾಡಿದ ಅವಳ ಕಣ್ಣುಗಳಲ್ಲಿ ಫಳಕ್ಕನೆ ಹನಿ ತುಂಬಿಬಂದಿತು. ತಾಯಿಯ ಕೊರಳು ಕಟ್ಟಿಕೊಂಡು ಅತ್ತಳು ರಾಧಾ. ಮನೆ ಮಸಣದಂತೆ ತೋರಿತು.

"ನಿನ್ನ ಹೆಸರು ಹೇಳುತ್ತಲೇ ಕೊನೆಯುಸಿರು ಎಳೆದರು ರಾಧಾ!"

"ಮಳೆ ಹಿಡಿಯುವ ಮುಂಚೆ ತಿಳಿಸಿದ್ದರೆ....?"

"ಹೀಗಾಗುತ್ತೆ ಅಂತ ಯಾರಿಗೆ ಗೊತ್ತು ?"

...ನಿಜವಾಗಿಯೂ....

ಒಂದೆರೆಡು ದಿನಗಳುರುಳಿದವು. ಸಂಗನೂರಿಗೆ ಬಂದು ತನ್ನೊಂದಿಗೆ ನೆಲೆಸಬೇಕೆಂದು ತಾಯಿಯನ್ನು ಕಾಡಿ ಬೇಡಿ ಹೊರಡಿಸಿದಳು. ರಾಧಾ, ಗದ್ದೆ ತೋಟಗಳನ್ನು ತೋಟಗಾರರಿಗೆ ವಹಿಸಿಯೂ ಆಯಿತು. ರಾಧೆ ಸಾಮಾನು ಸರಂಜಾಮು ಕಟ್ಟತೊಡಗಿದಳು. ಅಟ್ಟದ ಮೇಲೆ ಒಂದು ಡಬ್ಬದ ತಳದಲ್ಲಿ ಚಿಂದಿಯ ಚೂರಿನಲ್ಲಿ ಯಾರಿಗೂ ತಿಳಿಯದಂತೆ ಮುದ್ದಣ್ಣ ಸಾವಿರ ರೂಪಾಯಿ ಜೋಡಿಸಿಟ್ಟು ಹೋಗಿದ್ದ. ಹಣವನ್ನು ನೋಡುತ್ತಲೂ ತಾಯಿ ಮಗಳ ಎದೆ ಮತ್ತೆ ಸಂಕಟದ ಗಣಿಯಾಯಿತು.

"ಇಬ್ಬರ ಕಣ್ಣಿಗೂ ಬೀಳದಂತೆ ಅದಾವ ಮಾಯದಲ್ಲಿಟ್ಟಿದ್ದರೋ ! ಇದುವರೆವಿಗೂ ನಾನೊಂದಿನವೂ ನೋಡಲಿಲ್ಲವಲ್ಲಾ ರಾಧಾ."

"ಸುಖಪಡುವುದಕ್ಕೂ ಪಡೆದುಕೊಂಡು ಬಂದಿರಬೇಕು ನೋಡಿ. ತಮ್ಮ ದೇಹಸೌಖ್ಯಕ್ಕೂ ಬಳಸದೆ......"

ಆ ಸಮಯದಲ್ಲಿ ಬಲ್ಲವರು ಯಾರಾದರೂ ಇದ್ದಿದ್ದರೆ ನಗುತಿದ್ದರೋ ಏನೋ ! ಆದರೆ ತಾಯಿ ಮಗಳ ಬಿಸುಸುಯ್ಲು ಬೀಸುಗಾಳಿಯೊಂದಿಗೆ ಸೇರಿ ತೇಲಿಹೋಯಿತು. ಮುದ್ದಣ್ಣ ಅಸು ನೀಗಿದ ತಾವಿನಲ್ಲಿ ಹಣತೆಯೊಂದು ಉರಿಯುತಿತ್ತು. ತಾಯಿ ಮಗಳು ಕಂಬನಿಯ ಕಾಣಿಕೆ ಸಲ್ಲಿಸಿ ಸಾಮಾನು ಹೊತ್ತು ಮನೆ ಬಿಟ್ಟರು. ಗಂಗಮ್ಮ ಮಾದೇನಹಳ್ಳಿಯನ್ನು ಬಿಟ್ಟು ಸಂಗನೂರಿನಲ್ಲಿ ನೆಲೆಸಿದ ಮೇಲೆ ಮಗಳು ಮೊಮ್ಮಕ್ಕಳ ಸಾಮೀಪ್ಯ ಮನಸ್ಸಿಗೆ ಹಿತವನ್ನೂಡಿತು. ರಾಧೆಗೂ ತಾಯಿಯ ಸಾಮೀಪ್ಯ ಹರ್ಷದಾಯಕವಾಗಿತ್ತು. ಕಷ್ಟಕಾರ್ಪಣ್ಯಗಳ ಹಗ್ಗಣದೊಂದಿಗೆ ಜೀವನ ರಥ ಹರಿಯುತಿತ್ತು. ರಾಧಾ ಇನ್ನೆರಡು ಹೆಣ್ಣುಮಕ್ಕಳ ತಾಯಿಯಾದಳು. ದೊಡ್ಡವನಿಗೆ ಹದಿನಾಲ್ಕು ವರ್ಷ. ಕೈಯ್ಯಲ್ಲೊಂದು ಹೊಟ್ಟೆ ಡುಬ್ಬಾದ ಕೂಸು. ಗಂಗಮ್ಮನ ಸಹಾಯ ಹಸ್ತ ಸದಾ ಸಿದ್ಧವಿದ್ದರೂ ಸಂಸಾರವೆಲ್ಲಾ ರಾಣಾರಂಪ.

ನೆಂಟರಿಷ್ಟರು ತುಸು ಕೈ ಬಿಡುವಾದಾಗ ಅಥವಾ ತಿಪ್ಪೇನಹಳ್ಳಿಗೆ ಹೋಗುವ ಸಂದರ್ಭದಲ್ಲಿ ಸಂಗನೂರಿಗೆ ಬಂದು ಸ್ವಲ್ಪ ಹೊತ್ತು ತಂಗಿ ಮಾದೇನಹಳ್ಳಿಯ ಹಳೆಯ ವಿಚಾರಗಳನ್ನು ಮೆಲುಕು ಹಾಕುತ್ತಿದ್ದರು. ಮತ್ತೆ ಕಂಬನಿಯ ಕೋಡಿಯೂ ಹರಿಯುತ್ತಿತ್ತು. ಗಂಗಮ್ಮ ಮಾದೇನ ಹಳ್ಳಿಯನ್ನು ಬಿಟ್ಟರೂ ಮನಸ್ಸು ಮರೆಯಲಿಲ್ಲ.

ಮಾದೇನಹಳ್ಳಿಗೆ ರೈಲು ಬರುವ ಸುದ್ದಿ ಕಳೆದ ಆರೇಳು ವರ್ಷ ಗಳಿಂದ ಸದ್ದಿಲ್ಲದೆ ಅಡಗಿ ಹೋಗಿದ್ದು ಈಗ ಮತ್ತೊಮ್ಮೆ ಗಾಳಿಯಲ್ಲಿ ಹರಡಿಕೊಂಡಿತು. ಹೊಳೆಗೆ ಸೇತುವೆ ಕಟ್ಟುವ ಸುದ್ದಿಯೂ ಹುಟ್ಟಿ ಕೊಂಡಿತು. ಗಂಗಮ್ಮ ಹಾಗೇ ಯೋಚಿಸಿದಳು...ಒಂದು ವೇಳೆ ನಾನು ಮಳೆಗಾಲದಲ್ಲಿ ಉಸಿರೆಳೆದರೂ ಸೇತುವೆ ಇರುವುದಾದರೆ ನನ್ನ ಶವವನ್ನು ಒಯ್ದು ಅವರ ಚಿತೆಯ ಬಳಿಯಲ್ಲಿ ಸುಡಬಹುದಲ್ಲ...?

ಅದೇ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಬಂದ ಹಿರಿಯ ಮೊಮ್ಮಗ ರಾಮು ಹಸನಾದ ಎಳೆನಗೆ ಬೀರಿ ಕೇಳಿದ. "ಅದೇನಜ್ಜೀ ? ನೀವು ನೀವೇ ಮಾತಾಡಿಗೊಳ್ಳುತ್ತಿದ್ದಿರಲ್ಲಾ ?"

"ಹೊಳೆಗೆ ಸೇತುವೆ ಕಟ್ಟುತ್ತಾರಂತೆ, ಹೌದಾ ರಾಮು ?"

"ಮಾದೇನಹಳ್ಳಿಗೆ ರೈಲು ಬಂದರೆ ಕಟ್ಟಲೇಬೇಕಲ್ಲ ?"

ಗಂಗಮ್ಮ ಒಂದು ಗಳಿಗೆ ಮಾತಾಡದೇ ಸುಮ್ಮನಾದಳು.

"ಏಕೆ ಅಜ್ಜೀ ?"

"ನನ್ನದೊಂದು ಆಸೆ ಇದೆ ನಡೆಸಿಕೊಡು ರಾಮು."

"ಏನು ಹೇಳಿ ?"

"ಹಾಗೊಂದು ವೇಳೆ ಸೇತುವೆ ಕಟ್ಟಿದರೆ ನಾನು ಪ್ರಾಣ ಬಿಟ್ಟ ಮೇಲೆ ನನ್ನನ್ನೊಯ್ದು ನಿಮ್ಮಜ್ಜನ ಚಿತೆಯ ಬಳಿಯೇ ಸುಟ್ಟು ಬಿಡಪ್ಪಾ !"

ರಾಮು ಬಾಯ್ದೆರೆದು ಗಟ್ಟಿಯಾಗಿ ನಕ್ಕ. "ಆಗಲೇ ಸಾಯು ವುದಕ್ಕೆ ಅಷ್ಟೊಂದು ತವಕ ?"

"ಮಾತೆತ್ತಿದರೆ ನಗು. ಎಷ್ಟೆಂದರೂ ಹುಡುಗ ಬುದ್ಧಿ. ನಾನು

ಹೇಳಿದುದನ್ನು ಮನಸ್ಸಿನಲ್ಲಿಟ್ಟುಕೋ ರಾಮು!" ಎದೆಯಾಳದಿಂದ ಹರಿದು ಬಂತು ದನಿ.

ರಾಮು ನಕ್ಕು ನಿವಾರಿಸಿದ.

o o o o

ಶಂಕರ ಸಂಗನೂರಿಗೆ ಬರುವಾಗ ಮಾದೇನಹಳ್ಳಿಯ ಮೂಲಕ ನಡೆದು ಬಂದಿದ್ದ. ಹಳೆಯ ನೆನೆಹುಗಳು ಮನದಲೆಯನ್ನು ಹೊಡೆದೆಬ್ಬಿಸಿದುವು. ತಲೆಯಲ್ಲಿ ಅದೇ ವಿಚಾರ ಧಾರೆಗಳನ್ನು ತುಂಬಿಕೊಂಡೇ ಮನೆ ಮುಟ್ಟಿದ. ಮುಖದ ಮೇಲಿನ ತುಂತುರುಗಳನ್ನು ಕರವಸ್ತ್ರದಿಂದ ಒರಿಸಿಕೊಳ್ಳುತ್ತ ಶಂಕರ ಜಗಲಿಯನ್ನೇರಿದುದನ್ನು ಜಗಲಿಯಲ್ಲಿ ಆಟ ಮಾಡುತಿದ್ದ ಮಕ್ಕಳು ನಿರಿನಿರಿ ನಿಟ್ಟಿಸಿದರು. ಅವನು ಈಚೆಗೆ ಬಂದಿಲ್ಲ ವಾದುದರಿಂದ ಅವನನ್ನು ನೋಡಿ ಎಲ್ಲಿಲ್ಲದ ಅಚ್ಚರಿ.

ಉದ್ದನೆಯ ಚಲ್ಲಣ, ಕಾಲಿಗೆ ಬೂಟು, ಕೈಯಲ್ಲಿ ಗಡಿಯಾರ, ಅಂದವಾಗಿ ಬಾಚಿದ ಬೈತಲೆ, ಬೆಲೆಯುಳ್ಳ ಶರಟು ಇವುಗಳನ್ನೆಲ್ಲ ನೋಡಿ ಮಕ್ಕಳು ಬಾಯಿಯಲ್ಲಿ ಬೆರಳಿಟ್ಟುಕೊಂಡರು. ಮಕ್ಕಳನ್ನು ಅಕ್ಕರೆ ಯಿಂದ ನಿಟ್ಟಿಸಿ ಶಂಕರ ಕೇಳಿದ "ಅಜ್ಜ ಇದ್ದಾರೆಯೇ ?"

ಅಯ್ಯೋ...ಎಂಥ ಆಶ್ಚರ್ಯ ?

ನೋಡಿದರೆ ಸರಕಾರಿ ಮಂದಿ ! ಅಜ್ಜಯನ್ನು ಕೇಳುತ್ತಿದ್ದಾನಲ್ಲಾ, ಇದೇನಿರಬಹುದು ? ವಿಷಯ ಸುಪ್ತ ಮನದಲೆಗಳನ್ನು ಹೊಡೆದೆಬ್ಬಿಸಿತು. ಮಕ್ಕಳು ಅವಕ್ಕಾದರು. ಶಂಕರ ನಗುನಗುತ್ತಾ ಒಳಹೋದ. ಮಕ್ಕಳು ಗರ ಬಡಿದವರಂತೆ ಬೆರಗುಗಣ್ಣುಗಳಿಂದ ನಿಟ್ಟಿಸುತ್ತ ದೂರ ಸರಿದು ನಿಂತರು. ಶಂಕರನನ್ನು ಕಾಣುತ್ತಲೂ ತಾಯಿ ಮಗಳು ಅತ್ಯಂತ ಆದರದಿಂದ ಬರಮಾಡಿಕೊಂಡರು. ಪರಸ್ಪರ ಕ್ಷೇಮ ಸಮಾಚಾರಗಳು ನಡೆದ ಮೇಲೆ ಅವನಿಗೆ ಕಾಫಿ ತಯಾರಿಸಲು ರಾಧಾ ಒಳಹೋದಳು. ಗಂಗಮ್ಮ ತನ್ನ ಕಷ್ಟ ಸುಖಗಳನ್ನು ತೋಡಿಕೊಳ್ಳಹತ್ತಿದಳು. ಅಜ್ಜ ಅವನೊಡನೆ ಮಾತಿಗೆ ಕುಳಿತುದನ್ನು ನೋಡಿ ಮಕ್ಕಳಿಗೆ ಆಶ್ಚರ್ಯವೋ ಆಶ್ಚರ್ಯ. ಕಿಲಕಿಲನೆ ನಗುತ್ತಾ ಅಲ್ಲಿಂದಲೇ ಹಣಿಕಿ ನೋಡತೊಡಗಿದರು. ಎಳೆ ನಗುವಿನಲೆ ಮಾಡು ಮುಟ್ಟುವಂತೆ ಮೊಳಗಿತು.

ಸುಬ್ಬಣ್ಣ ಬಾಗಿಲ ಮರೆಗೆ ನಿಂತು ಪಿಸುಗುಟ್ಟಿದ "ಸುಮ್ಮನಿರಜ್ಜೀ! ಮಾತನಾಡಲಿಕ್ಕೆ ಬರದಿದ್ದರೂ ಅವರ ಬಳಿಗೆ ಹೋಗಿ ಕುಳಿತಿದ್ದಿ!"

"ಇಲ್ಲಿ ಬಾ, ಸುಬ್ಬಣ್ಣ. ರಾಮು ಎಲ್ಲಿ?"

"ಅವನು ಗದ್ದೆಗೆ ಹೋಗಿದ್ದಾನೆ."

"ಸುಮ್ಮನೆ ಒಳಗೆ ಬಾ ಅಜ್ಜೀ!"

ರಾಧಾ ಒಳಗಡೆಯಿಂದ ಗದರಿಕೊಂಡಳು. "ಏನೀ ವಿಚಿತ್ರ? ಎಲ್ಲರೂ ಇಲ್ಲೀ ಪಿಸುಗುಟ್ಟುತಿದ್ದೀರಿ. ಹೋಗಿ ಮಾತನಾಡಿಸಿರಿ. ಅವನು ಅಜ್ಜಿಯ ಅಣ್ಣನ ಮಗ."

"ಇಸ್ಸಿಸ್ಸೀ! ಇದೆಂಥ ಮಾತು?" ಮಕ್ಕಳು ನಗುವಿನ ಗುಲ್ಲೆಬ್ಬಿಸಿದರು.

"ಬಾಪ್ಪಾ ಇಲ್ಲೀ!" ಅಜ್ಜಿ ಕರೆದಳು.

ತುಸು ಧೈರ್ಯ ಮಾಡಿ ಸುಬ್ಬಣ್ಣ ಒಳಬಂದ. ಎಲ್ಲರೂ ಒಬ್ಬೊಬ್ಬರಾಗಿ ಹಿಂಬಾಲಿಸಿದರು. ಡೊಳ್ಳು ಹೊಟ್ಟೆ. ಕೊಳಕು ಬಟ್ಟೆ, ಕೆದರಿದ ಕೂದಲಿನ ಮಕ್ಕಳು ಸಾಲಾಗಿ ನಿಂತರು. ಸುಬ್ಬಣ್ಣ ಅಚ್ಚರಿಯಿಂದ ಕೇಳಿದ "ನೀವು ಸರಕಾರದವರೇ?"

"ಹಾಗೆಂದರೆ?" ಶಂಕರ ಹುಬ್ಬೇರಿಸಿದ.

"ನಿಮ್ಮನ್ನು ನೋಡಿದರೆ..." ಮಾತನ್ನು ಅಷ್ಟಕ್ಕೆ ತುಂಡುಗಡಿದ ಸುಬ್ಬಣ್ಣ.

"ನಾನೂ ಸರಕಾರಿ ನೌಕರಿ ಮಾಡುತಿದ್ದೇನೆ."

"ಹಾಗಾದರೆ ನೀವು ಸರಕಾರಿ ಮಂದಿ?"

"ಹೌದು." ಶಂಕರ ಕಿಲಕಿಲನೆ ನಕ್ಕ.

"ನಿಜವಾಗಿಯೂ..."

ಎಲ್ಲರೂ ನಗುವಿನ ಗುಲ್ಲೆಬ್ಬಿಸಿದರು.

"ಅವನು ನಮ್ಮಣ್ಣನ ಮಗ!"

ಅಜ್ಜಿ ಸಂತಸದಿಂದ ತಮ್ಮ ಬಾಂಧವ್ಯವನ್ನು ಮುಂದಿಟ್ಟಳು.

"ನಾನು ನಿಮ್ಮ ಅಜ್ಜಿಯ ಸೋದರಳಿಯ. ನಾನಿರುವುದು ದೂರವಾದುದರಿಂದ ಹೋಗಿ ಬರುವುದು ಅಪರೂಪವಾಗಿದೆ" ಎಂದ ಶಂಕರ.

ಆದರೂ ಮಕ್ಕಳಿಗೆ ನಂಬಿಕೆ ಬಾರದು. ತನುಮನಗಳು ಉದ್ವೇಗಗೊಂಡುವು. ಕಿಲಕಿಲನೆ ನಗತೊಡಗಿದರು. ಅವರೊಂದಿಗೆ ತನ್ನ ದನಿಯನ್ನು ಹರಿಯಗೊಟ್ಟ ಶಂಕರ. ಅಜ್ಜಿಯೂ ಬಚ್ಚಬಾಯಿ ತೆರೆದು ಹಿರಿಯ ನಗೆ ನಕ್ಕಳು.

"ಹೌದು, ಮಕ್ಕಳಿರಾ ! ನಿಮಗೇಕಷ್ಟು ನಗು ?"

ಅಜ್ಜಿಯ ನುಡಿ ನಗೆಗಡಲಿನಲ್ಲಿ ಅಡಗಿ ಹೋಯಿತು.

"ನನ್ನ ಸೋದರಳಿಯ !" ಪುನಃ ಒತ್ತಿ ಹೇಳಿದಳು ಅಜ್ಜಿ.

"ಅಲ್ಲವೇ ಅಲ್ಲ ?" ಚಿಕ್ಕವನೆಂದ.

"ಸುಳ್ಳೇ ಸುಳ್ಳು ನಮಗೆಲ್ಲಾ ಗೊತ್ತು !" ಪುನಃ ಕಿಲಕಿಲ ನಗು.

ರಾಧಾ ಕಾಫಿಯ ಲೋಟದೊಡನೆ ಹೊರಬಂದು, "ಎಂಥ ಹುಚ್ಚು ಹುಡುಗರು !" ಎಂದು ಕೊಸರಿಕೊಳ್ಳುತ್ತಲೇ ಕಾಫಿಯನ್ನು ಮುಂದಿಟ್ಟು ಶಂಕರನಿಗೆಂದಳು "ಓದಲಿಲ್ಲ–ಕಲಿಯಲಿಲ್ಲ. ನೋಡು ನನ್ನ ಮಕ್ಕಳು ಹೇಗಿದ್ದಾರೆ !"

"ಶಾಲೆಗೆ ಕಳುಹಿಸಬೇಕಿತ್ತು."

"ಈ ಊರಿನಲ್ಲಿ ಶಾಲೆಯಿದ್ದರೆ ತಾನೇ ?"

"ಇಲ್ಲೇ ಇಟ್ಟುಕೊಂಡರೆ ಬುದ್ಧಿ ಬರುವುದು ಹೇಗೆ ? ಹೊರಗಡೆ ಕಳುಹಿಸಬೇಕು."

"ಮಕ್ಕಳಿಗೆ ಉಣಿಸಿಕ್ಕುವುದೇ ಕಷ್ಟ ಈ ಕಾಲದಲ್ಲಿ. ಇನ್ನು ಹೊರಗಡೆ ಕಳುಹಿಸಿ ಓದಿಸುವುದು ಹೇಗೆ ? ನಾವು ಪಡೆದುಕೊಂಡು ಬಂದಿರುವುದೇ ಅಷ್ಟು."

"ಹಾಗೆಂದರೆ ಆಗುತ್ತದೆಯೇ ? ಈ ಕಾಲಕ್ಕೆ ವಿದ್ಯೆ ಬೇಕೇಬೇಕು."

ಚಿಕ್ಕ ಹುಡುಗರೆಲ್ಲಾ ಒಂದುಗೂಡಿ ಅಂದರು "ಉಹೂ, ನಾವು ಹೋಗುವುದಿಲ್ಲ."

"ತಂದೆಯಾದವರಿಗೆ ಲಕ್ಷ್ಯವೇ ಇಲ್ಲ. ಹೇಳೋರಿಲ್ಲ, ತಿದ್ದೋರಿಲ್ಲ. ತುಂಟತನ ಹೇಳತೀರದು." ಕಳಕಳಿಯಿಂದ ಬಿತ್ತರಿಸಿದಳು ರಾಧಾ.

ಹಗಲೆಲ್ಲ ಅಲ್ಲಿ ಕಳೆದು ಸಂಜೆಯಲ್ಲಿ ಊರಿಗೆ ಹೊರಡಲನುವಾದಾಗ ಶಂಕರ ಅಂದ "ನೀವು ಒಮ್ಮೆಯೂ ಮೈಸೂರಿಗೆ ಬರಲಿಲ್ಲ. ಈ ಸಲ

ದಸರೆಗೆ ಹದಿನೈದು ದಿನ ಇರುವಂತೆ ವಿರಾಮ ಮಾಡಿಕೊಂಡು ಬನ್ನಿ. ಮಕ್ಕಳನ್ನೂ ಕರೆದುಕೊಂಡು ಬಾ ರಾಧಾ. ಅವರಿಗೂ ಸ್ವಲ್ಪ ಜನ ಜೀವನ ಅರ್ಥವಾಗಲಿ. ಇದ್ದಲ್ಲೇ ಇದ್ದರೆ ಏನೂ ತಿಳಿಯುವುದಿಲ್ಲ."

"ಅದೆಲ್ಲಾ ಆಗಿನ ಆಸೆ. ಈಗ ಯಾವುದೂ ಬೇಡವಾಗಿದೆ." ನೀರಸ ದನಿಯಲ್ಲಿ ನುಡಿ ಹೊರಬಿತ್ತು. ಸುಕ್ಕುಗಟ್ಟಿದ ಮುಖದಲ್ಲಿ ದುಗುಡದ ಮುದ್ರೆಯೊತ್ತಿತು.

"ಅಯ್ಯೋ, ರಾಧಾ ! ನೀನು ಇಷ್ಟೊಂದು ಸಪ್ಪೆಯಾದುದು ಹೇಗೆ ?"

"ವಯಸ್ಸಾಯಿತು ಬಿಡು !" ಒಂದು ಗಳಿಗೆ ತಡೆದು ಉಗುಳು ನುಂಗಿ "ಒಮ್ಮೊಮ್ಮೆ ಹೋಗಿ ಬರೋಣವೆನ್ನಿಸುತ್ತೆ. ಆದರೆ ಈ ಹಾಳು ತಾಪತ್ರಯ ನೆನೆಸಿಕೊಂಡರೆ ಯಾವುದೂ ಬೇಡವೆನ್ನಿಸುತ್ತೆ." ದನಿಯಲ್ಲಿ ದುಃಖ ದುಗುಡಗಳ ಝರಿ ಹರಿದು ಬಂತು. ಬಾಳುರಿಯ ನಾನಾ ವ್ಯಾಘ್ರ ಮುಖಗಳು ಹಲ್ಕಿರಿದುವು. ಒಡನೆ ದೇಹದಾದ್ಯಂತ ನಸು ಕಂಪನದ ಅಲೆ ಹರಿದಾಡಿ ಹೋಯಿತು. ರಾಧಾ ಮರವಟ್ಟು ನಿಂತಳು.

ಒಳಗಡೆ ರಾಗಿ ರೊಟ್ಟಿ ಮೆಲ್ಲುತ್ತಿದ್ದ ಮಕ್ಕಳು ಧಾವಿಸಿ ಬಂದರು. ಕೈ ಬಾಯ್ ಮುಸುರೆಯನ್ನು ಲೆಕ್ಕಿಸದೆ ಸುತ್ತುವರಿದು ನಿಂತು ಗೋಗರೆದರು. "ಅಮ್ಮಾ ನಾವೂ ದಸರಕ್ಕೆ ಹೋಗೋಣ."

ಚಿಟಚಿಟ ನೆಗೆದಾಡಿ ಸೀರೆಯ ನಿರಿ ಹಿಡಿದು ಸುತ್ತುವರಿದು ನಿಂತು ಕಿವಿ ಚಿಟ್ಟು ಹಿಡಿಯುವಂತೆ ಪುನಃ ಪುನಃ ಅದೇ ಪಲ್ಲವಿಯನ್ನು ಹಾಡಿದರು.

"ಸರಿ, ಸರಿ. ನಿಮ್ಮನ್ನು ಕಟ್ಟಿಕೊಂಡು ಹೋದರೆ ಮಾನ ಮೂರಾಬಟ್ಟೆಯಾದೀತು."

"ಅಮ್ಮಾ...ಅಮ್ಮಾ !" ಒಕ್ಕೊರಲಿನಿಂದ ಗೋಗರೆದರು ಮಕ್ಕಳು.

"ಹತ್ತಾರು ಕಡೆ ಸುತ್ತಾಡಿದರೆ ತಿಳಿವಳಿಕೆ ಬರುತ್ತದೆ. ಅವರೂ ಬರಲಿ ರಾಧಾ." ಸಾಂತ್ವನಗೈಯ್ಯುವಂತೆ ನುಡಿದ ಶಂಕರ.

"ಇವರ ಚೇಷ್ಟೆ ನೀನೊಂದಿನ ತಡೆಯಲಾರೆ."

ದುಃಖವೀಣೆಯನ್ನು ಮಿಾಂಟಿ ಶೋಕರಾಗದಲ್ಲಿ ಹಾಡು ಬಂತು.

ದನಿ–ಕೇಳುವವರ ತನುಮನಗಳು ಮಿಡಿಯುವಂತೆ. ಗಂಗಮ್ಮ ಮರು ಮಾತಾಡದೆ ಕುಳಿತಳು. ನಿಮಿಷವೈದು ಸದ್ದಿಲ್ಲದೆ ಸಾಗಿದುವು. ಶಂಕರ ಭಾವಾವಿಷ್ಟನಾಗಿ ನಿಂತ.

"ಇಲ್ಲ ಚಿಗಪ್ಪಾ ! ನಾವೆಂದೂ ಮೈಸೂರು ದಸರ ನೋಡಲಿಲ್ಲ. ತಂಟೆ ಮಾಡದೆ ನೀವು ಹೇಳಿದಂತೆ ಕೇಳುತ್ತೇವೆ."

ಕಿವಿ ಚಿಟ್ಟು ಹಿಡಿಯುವಂತೆ ಎಲ್ಲರ ದನಿಯೂ ಒಟ್ಟುಗೂಡಿ ಕರ್ಕಶವಾಗಿ ಮೊಳಗಿತು. ಮುಸುರೆ ಕೈಯಲ್ಲಿ ಶಂಕರನ ಚಲ್ಲಣ ಹಿಡಿದು ಗೋಗರೆದರು. ಸುಬ್ಬಣ್ಣ ಕೈ ಹಿಡಿದುಕೊಂಡು ಕೇಳಿದ. ರಾಮು ಭುಜಕ್ಕೆ ಜೋತುಬಿದ್ದು ಬೇಡಿದ "ಚಿಗಪ್ಪಾ...ಚಿಗಪ್ಪಾ !"

"ಇದೊಳ್ಳೆ ಚೆನ್ನಾಯ್ತು ! ಅವನ ಮೈ ಕೈಯೆಲ್ಲ ಕೊಳಕು ಮಾಡುತ್ತೀರಲ್ಲೋ."

ರಾಧಾ ಚಿಕ್ಕವರನ್ನು ಹಿಂದಕ್ಕೆಳೆದಳು. ಅದರೂ ಅವರು ಜಗ್ಗ ಲಿಲ್ಲ. ಮಕ್ಕಳನ್ನು ಕರೆದುಕೊಳ್ಳಲು ಗಂಗಮ್ಮನೂ ಮುಂದಾದಳು. ಯಾರ ಮಾತಿಗೂ ಜಗ್ಗದೆ ಒಂದೇ ಸಮನೆ ಗೋಗರೆಯ ಹತ್ತಿದರು.

ಶಂಕರ ಕಣ್ಣರಳಿಸಿ ಅಂದ "ಶ್ ! ನೀವೆಲ್ಲಾ ಕೈಬಾಯಿ ತೊಳೆದು ಒರಿಸಿಕೊಂಡು ಬಂದರೇನೇ ಕರೆದುಕೊಂಡು ಹೋಗುವುದು !"

ಮಕ್ಕಳೆಲ್ಲಾ ಒಂದೇ ಬಾರಿಗೆ ಒಳಗೆ ಧಾವಿಸಿ ನೀರಿನ ಹಂಡೆಗೆ ಕೈ ಹಾಕಿದರು.

"ಅಯ್ಯೋ, ದೇವರೇ ! ನೀರಿನ ಹಂಡೆಗೆ ಕೈ ಅದ್ದುವುದೇ ? ತಂಬಿಗೆ ಯಿಂದ ತೆಗೆದುಕೊಳ್ಳದೆ ಹಂಡೆಯ ನೀರನ್ನೇ ಕೆಡಿಸಿದಿರಲ್ಲಾ !" ಹಣೆ ಚಚ್ಚಿಕೊಂಡಳು. ರಾಧಾ.

"ನೀನು ಮಕ್ಕಳಿಗೆ ಏನೂ ಕಲಿಸಲಿಲ್ಲ ರಾಧಾ !"

"ಏನು ಮಾಡಲಿ ಹೇಳು ? ಎಲ್ಲರೂ ನಮ್ಮಂತಹವರೇ ಇರುವ ಈ ಊರಿನಲ್ಲಿ ಮಕ್ಕಳು ಕಲಿಯುವುದು ಹೇಗೆ ?...ಎಲ್ಲಾ ನನ್ನ ಕರ್ಮ."

"ಮನೆಯ ಕಡೆ ಯೋಚಿಸುತ್ತಾ ಕುಳಿತರೆ ನೀನು ಈ ಜನ್ಮದಲ್ಲಿ ಮೈಸೂರಿಗೆ ಹೋಗುವಂತಿಲ್ಲ. ಮಕ್ಕಳನ್ನೆಲ್ಲ ನನ್ನ ಕಡೆಗೆ ಬಿಟ್ಟು

ನೀನು ಒಂದೆರಡು ವಾರ ಹಾಯಾಗಿದ್ದು ಬಾ. ನಾವು ಕಣ್ಣು ಮುಚ್ಚದ ಹೊರತು ನಮ್ಮ ಕೆಲಸ ಬೊಗಸೆ ಮುಗಿಯುವಂತಿಲ್ಲ." ನಡುವೆ ಬಾಯಿ ಹಾಕಿದಳು ಗಂಗವ್ವ.

ಮರುಗಳಿಗೆಯಲ್ಲಿ ಮಕ್ಕಳೆಲ್ಲ ಓಡಿ ಬಂದರು. ಕೈ ಬಾಯಿ ಮುಸುರೆಯೆಲ್ಲ ಇನ್ನೂ ಹಾಗೆ ಹಾಗೇ ಉಳಿದಿದೆ. ಚಿನ್ನಿಯ ಮೂಗಿನ ಸಿಂಬಳ ಮುಖಕ್ಕೊರೆದುಕೊಂಡಿದೆ.

"ಇಸ್ಸಿಸ್ಸೀ !" ಎಂದಳು ರಾಧಾ.

ಹಗ್ಗದ ಮೇಲಿನ ಚೌಕವೊಂದನ್ನೆಳೆದುಕೊಂಡು ಮಗುವಿನ ಮುಖವನ್ನು ಒರಸಿ ಉಳಿದವರಿಗೆಂದಳು "ಇನ್ನೊಮ್ಮೆ ತೊಳೆದು ಒರಸಿ ಕೊಂಡು ಬಂದ ಹೊರತು ಮಾತಾಡುವಂತಿಲ್ಲ !"

ಉಹೂ. ಯಾರೂ ಜಗ್ಗುವಂತಿಲ್ಲ. ಚಿಕ್ಕವರೆಲ್ಲಾ ಅದೇ ಚೌಕ ದಲ್ಲಿ ಕೈ ಬಾಯಿ ಒರಸಿಕೊಂಡು ನಿಮಿರಿ ನಿಂತರು.

"ನಾವು ಹೋಗಿ ಬರ್ರೋಣ." ಚಿಕ್ಕವರು ಗೋಗರೆಯುತ್ತ ಕಂಬನಿ ಸುರಿಸಿದಳು. ಮಕ್ಕಳ ಕಾಟ ನೋಡುತ್ತಲೂ ಗಂಗವ್ವನ ಕಣ್ಣುಗಳಲ್ಲಿ ಕಂಬನಿಗಳುಕ್ಕಿದುವು. ರಾಧೆಯ ಕಣ್ಣುಗಳೂ ತೇವವಾದುವು.

ಶಂಕರ ಒಂದು ಗಳಿಗೆ ಮರವಟ್ಟು ನಿಂತ. ಕಣ್ಣ ಮುಂದಿನ ದೃಶ್ಯವೆಲ್ಲಾ ಗಿರಗಿರ ಸುತ್ತಿದಂತಾಯಿತು. ಒಂದು ಗಳಿಗೆ ಯೋಚಿಸಿ ಅಂದ "ಮನೆ ಕಡೆ ಏರ್ಪಾಡು ಮಾಡಿಕೊಂಡು ಈ ಸಲ ಎಲ್ಲರೂ ಹೊರಟುಬಿಡಿ."

"ಅಯ್ಯೊ, ಅದೆಲ್ಲ ಆಗುವ ಮಾತಲ್ಲ, ಶಂಕರೂ. ಮಕ್ಕಳನ್ನು ನಾನು ನೋಡಿಕೊಳ್ಳುನೆ. ಈಗ ರಾಧೆ ಹೋಗಿ ಬರಲಿ. ನನ್ನ ಕಾಲವೆಲ್ಲ ಎಂದೋ ಆಗಿಹೋಯಿತು. ನನಗೇಕಿನ್ನು ದಸರ ?"

ಮಕ್ಕಳು ಒಂದೇ ಬಾರಿಗೆ ಅಬ್ಬರಿಸಿದರು. "ಇದೇನಜ್ಜಿ ! ಹೀಗಂತಿ? ನಾವು ದಸರ ನೋಡಬಾರದೆ ?"

"ಸರಿ ಏನಾದರೂ ಮಾಡಿರಿ."

"ಈ ಮಕ್ಕಳೊಂದಿಗೆ ಹೊರಡುವುದಕ್ಕಿಂತ ಸುಮ್ಮನಿರುವುದು ಲೇಸು." ದುಗುಡದಿಂದ ನುಡಿದ ರಾಧಾ ಮಕ್ಕಳಿಗೆಂದಳು "ಅಪ್ಪನಿಂದ

ಹಣ ತೆಗೆದುಕೊಂಡು ನೀವೇ ಹೋಗಿ ಬನ್ನಿ. ಇನ್ನೊಮ್ಮೆ ಅಜ್ಜಿಯೂ ನಾನೂ ಹೋಗಿ ಬರುತ್ತೇವೆ."

ನುಡಿ ಕೇಳಿ ಮಕ್ಕಳು ಮುಖ ಸಪ್ಪೆಯಾಯಿತು. ಅಪ್ಪನಿಂದ ದುಗ್ಗಾಣಿಯೂ ದಕ್ಕುವುದಿಲ್ಲವೆಂಬುದನ್ನು ಅರಿತ ಮಕ್ಕಳು ಮುಸು ಮುಸು ಅಳತೊಡಗಿದರು. ಅಜ್ಜಿಯ ಸೀರೆ ತಾಯಿಯ ಸೀರೆಗಳಲ್ಲಿ ಮುಖಗಳನ್ನು ಹುಗಿದಿಟ್ಟುಕೊಂಡು ಅಳುವ ಆಲಾಪನೆ ತಾರಸ್ಥಾಯಿ ಗೇರಿತು. ರಾಧಾ ಮರವಟ್ಟು ನಿಂತಳು.

ಗದ್ದೆಯ ಕೆಲಸ ಮುಗಿಸಿ ಮೈಸೋತು ಬಂದ ಶಾಂತಪ್ಪನ ಕಣ್ಣಿಗೆ ಮೊದಲು ಬಿದ್ದ ದೃಶ್ಯ ಅಚ್ಚರಿಯನ್ನು ಮೂಡಿಸಿತು.

"ಇದೇನ್ರೋ ಎಂತಹ ರಾಗ ಇದು ?" ಏರಿದ ದನಿಯಿಂದ ಅಂದ. ಕಣ್ಣುಗಳು ಕೆಂಪಡರಿದುವು.

"ದಸರ ನೋಡಲಿಕ್ಕೆ ಮೈಸೂರಿಗೆ ಕಳುಹಿಸಬೇಕಂತೆ." ನುಡಿಯು ಬಾರದೆ ನುಡಿದಳು ರಾಧಾ.

"ದಸರ ? ಓ....ಹೊ....ಹೊ ! ಅದೊಂದು ಬಾಕಿಯಾಗಿತ್ತು ! ನಿಮ್ಮಜ್ಜ ದುಡ್ಡಿಟ್ಟದ್ದಾನೆ ಇಲ್ಲಿ, ಮಜ ಮಾಡುವಿರಂತೆ !"

ಅಪ್ಪನ ಗಡಸು ದನಿ ಕೇಳಿದೊಡನೆ ಮಕ್ಕಳ ಹುಯಿಲಡಗಿತು. ಗಂಗಮ್ಮನ ದಿಟ್ಟಿ ಶಂಕರನೆಡೆಗೆ ಹರಿದು ಬೇರೆಡೆಗೆ ಜಗಿಯಿತು. ಕಣ್ಣು ಗಳಂಚಿನಲ್ಲಿ ಕಂಬನಿಗಳು ಮೊಳೆತುವು. ರಾಧಾ ಮಾತಾಡದೆ ಒಳಗೆ ಹೋದಳು. ಸ್ವಲ್ಪ ಹೊತ್ತಿನೊಳಗಾಗಿ ಹೊರಬಂದ ಅವಳು ಬೆಳ್ಳನೆ ಬೆಳಗಿದ ಎರಡು ತಂಬಿಗೆಗಳಲ್ಲಿ ನೀರು ತಂದು ಸ್ವಲ್ಪ ಸ್ವಲ್ಪವಾಗಿ ಶಾಂತಪ್ಪನ ಬೊಗಸೆಗೆ ಹೊಯ್ದಳು. ಜಳ ಜಳ ಕೈ ಕಾಲು ತೊಳೆದು ಕೊಳ್ಳುತ್ತಾ ಶಾಂತಪ್ಪ ನುಡಿದ "ನೀನು ಬಂದಾಗಲೆಲ್ಲ ಇವಕ್ಕೊಂದು ಗೀಳು ಹಚ್ಚಿ ಹೋಗುತ್ತೀಯಲ್ಲ ಶಂಕರೂ !" ಎಂದ.

ೲ ೲ ೲ ೲ

....ಚಾಂದ್ರಮಾನಗಳ ಯಾರ ನಿರಂತರ ನಡೆದಿತ್ತು.

....ಮಾದೇನಹಳ್ಳಿಗೆ ರೈಲು ಬರುವ ಸುದ್ದಿಯು ಆಗಾಗ ಸುಳಿ ದಳಿಯುತಿತ್ತು.

....ಬಾಳಿನ ಬವಣೆಯನ್ನಾಗಲೀ ಬದುಕಿನ ಶ್ರೀಮಂತಿಕೆಯನ್ನಾಗಲೀ ಪ್ರಕೃತಿದತ್ತ ಅತುಳೈಶ್ವರ್ಯವನ್ನಾಗಲೀ ಲೆಕ್ಕಿಸದೆ ತಮ್ಮದೇ ಆದ ಜಡ ನೀತಿಯಲ್ಲಿ ಗ್ರಾಮ್ಯ ಜೀವನ ಸಾಗುತಿತ್ತು.

ಸಾಮ್ರಾಜ್ಯಗಳು ಅಳಿದುವು. ದೇಶ-ವಿದೇಶಗಳು ಬೆಳೆದುವು. ನಾಗರಿಕ ಜಗತ್ತು ನಾಲ್ಕೂ ನಿಟ್ಟಿನಿಂದ ಮುಂದುವರಿಯಿತು. ಆದರೆ ಮಾದೇನಹಳ್ಳಿ ಸಂಗನೂರುಗಳಿಗೆ ಅದಾವುದರ ಪರಿವೆಯೂ ಇಲ್ಲದೆ ಯಥಾರೀತಿ ಇದ್ದುವು. ಅದೇ ಸರ್ವೇಸಾಮಾನ್ಯವಾದ ಹಳ್ಳಿ. ಹುಟ್ಟಿದಾಗಿನಿಂದಲೂ ಜಲ್ಲಿ ಕಾಣದ ಅಂಕುಡೊಂಕಿನ ದಾರಿ. ಹುಲ್ಲು, ಸೋಗೆಗಳ ಜೋಪಡಿಗಳು, ಕುರಿಗಳ ರೊಪ್ಪ, ದನಗಳ ಹಟ್ಟಿ, ಮಣ್ಣಿನ ಸೊಟ್ಟಪಟ್ಟ ಗೋಹ, ಅಲ್ಲಲ್ಲಿ ನಾಡು ಹೆಂಚಿನ ಮಾಡು. ಕೊನೆಯ ಪಕ್ಷ ಸಣ್ಣ ಪುಟ್ಟ ಗದ್ದೆಯ ಗಣ್ಣಗಳಾದರೂ ಒಡೆದು ಒಂದಾಗಲಿಲ್ಲ. ಹೂಡುವಾಗ ಗಾಡಿ ಹೊಡೆಯುವಾಗ ಹಲವಾರು ಎತ್ತುಗಳ ಕಾಲು ಮುರಿದು ಕೊಂಡರೂ ಅದರ ಮೂಲ ಕಾರಣವತ್ತ ಯಾರ ಗಮನವೂ ಹರಿಯಲಿಲ್ಲ. ಕಾಲು ಮುರಿದ ಎತ್ತುಗಳಿಗಾಗಿ ಕಂಬನಿಯ ಕೋಡಿಯಂತೂ ನಿರಂತರ ಹರಿಯುತ್ತಲೇ ಇತ್ತು.

....ಊರಿಗೊಂದು ಶಾಲೆಯೂ ಬರಲಿಲ್ಲ. ಇವರದನ್ನು ಬಯಸಲೂ ಇಲ್ಲ.

ಅದೇ ಉಡಿಗೆ-ತೊಡಿಗೆ. ಅದೇ ನೀತಿ-ನಿಯಮ. ಅದೇ ರೂಪು-ರೇಷೆ. ಅದೇ ಬಾಳು-ಬದುಕು. ಅಲ್ಲೇ ಹುಟ್ಟಿ ಅಲ್ಲೇ ಬೆಳೆದು ಅಲ್ಲೇ ದುಡಿದು ಅಲ್ಲೇ ಮಣ್ಣಾಗಲಿರುವ ಆಧುನಿಕ ಜಗತ್ತಿನ ಪುರಾಣ ಪುರುಷರು ! ಪ್ರಾಯಶಃ ಇವರ ಇರುವು ಸರಕಾರಕ್ಕೆ ಗೊತ್ತಿರಲಿಕ್ಕಿಲ್ಲ ! ಅಥವಾ ಸರಕಾರದ ಇರುವು ಇವರಿಗೆ ಗೊತ್ತಿರಲಿಕ್ಕಿಲ್ಲ !

ಈಚೆಗೆ ಗಂಗಮ್ಮನಿಗೆ ಮಲೇರಿಯಾ ರೋಗ ಅಂಟಿತ್ತು. ಜೊತೆಗೆ ವಯೋಧರ್ಮವೂ ಗಂಟುಬಿದ್ದಿತು. ಆಗಾಗ ಚಳಿಜ್ವರ ರೋಗ ರುಜಿನಗಳು ಒಂದಾದ ಮೇಲೊಂದರಂತೆ ಧಾಳಿ ನಡೆಸಿ ಶರೀರದ ಶಕ್ತಿಸಾರವನ್ನು ಹಿಂಡಿ ಹೀರಿದ್ದುವು.

ಚಳಿ ಜ್ವರ ಅಂಟಿ ಒಂದು ವಾರದಿಂದ ಹಾಸಿಗೆ ಹಿಡಿದಿದ್ದ ಅವಳು

ಒಲೆಯ ಬಳಿ ಕುಳಿತು ಹೆಗ್ಗೆಂಡಗಳನ್ನು ಹಿರಿದು ಮೈ ಕಾಯಿಸಿಕೊಳ್ಳು ತ್ತಿದ್ದಳು. ಊರಿನ ಬಾವಿಯಿಂದ ನೀರು ಹೊತ್ತು ತಂದ ರಾಧಾ ನೀರಿನ ಕೊಡವನ್ನು ಬದಿಗಿಟ್ಟು ದುಗುಡದುಂಬಿದ ದನಿಯಲ್ಲಿ ಕೇಳಿದಳು "ಇನ್ನೂ ಚಳಿ ಕಡಿಮೆಯಾಗಲಿಲ್ಲವೇ ?"

ಹೃದಯ ಸಮುದ್ರದ ಅಲೆಗಳು ಅಲ್ಲೋಲಕಲ್ಲೋಲವಾದುವು. ಯೋಚನೆಯ ಸುಳಿಯಲ್ಲಿ ಸಿಕ್ಕಿ ಮರವಟ್ಟು ನಿಂತಳು ರಾಧಾ. ದುಃಖ ದುಗುಡಗಳ ಒತ್ತಡದಿಂದ ಮೈ ಸಿಡಿದೊಡೆಯುವಂತೆ ತೋರಿತು.

ಮಗಳ ಆತಂಕ ಮನವನ್ನು ಕರಗಿಸಿತು. ನರಳುತ್ತಲೇ ನುಡಿದಳು ಗಂಗಮ್ಮ "ಈಗೀಗ ಕಡಿಮೆಯಾಗುತ್ತಿದೆ ಅದೇನು ಮಾಡೀತು ಬಿಡು."

"ದಿನಾ ನರಳುವುದೇ ಆಯಿತು. ಅಜ್ಜ ಅದೇನು ಮದ್ದು ಕೊಡು ತ್ತಾನೋ ಏನೋ" ಬಿಸುಸುಯ್ದಳು ರಾಧಾ.

"ಅವನೇನು ಮಾಡಿಯಾನು ? ನಮ್ಮ ಗ್ರಹಚಾರ ಸರಿಯಾಗಿದ್ದರೆ ಹೇಗೂ ಆದೀತು."

ರಾಧಾ ಮಾತಾಡಲಿಲ್ಲ. ಕಣ್ಣುಗಳಲ್ಲಿ ಹನಿಗಳು ಮೂಡಿದುವು.

"ಅಜ್ಜ ಈ ಸಲ ಕಷಾಯ ಬದಲಿಸಿ ಕೊಟ್ಟಾನೇನೋ !"

ಗಂಗಮ್ಮ ಮಾತಾಡಲಿಲ್ಲ. ಯೋಚನೆಯ ಮಂಪರದಲ್ಲಿ ಸೆರೆಸಿಕ್ಕಿ ಸುಮ್ಮನೆ ಕುಳಿತಳು....ಒಕ್ಕಣ್ಣಿನ ತಿಮ್ಮಜ್ಜ ಊರ ಹಿರಿಯ. ಅವನಿಗೆ ತಿಳಿಯದ ಮದ್ದುಂಟೇ ? ಅವನ ಮದ್ದು ಎಷ್ಟು ಜನರಿಗೆ ಗುಣ ಮಾಡಲಿಲ್ಲ ? ಅವನನ್ನು ಬಿಟ್ಟರೆ ಅಂತಹ ಪಂಡಿತೋತ್ತಮರು ಯಾರಿ ದ್ದಾರೆ ಇಲ್ಲಿ ? ನನ್ನ ಗ್ರಹಚಾರಕ್ಕೆ ತಿಮ್ಮಜ್ಜ ಏನು ಮಾಡಿಯಾನು ? ನಾನು ಸತ್ತರೆ ರಾಧೆಯ ಗತಿಯೇನು ? ಮಕ್ಕಳು ಸಂಸಾರ ಹೇಗೆ ನೋಡಿಕೊಳ್ಳುವಳೋ, ಗಂಡನನ್ನು ನೋಡಿದರೆ ಬೆಂಕಿ ಕಿಡಿ ! ಮೊದಲೇ ಸೋತು ಸುಣ್ಣವಾಗಿದ್ದಾಳೆ ರಾಧಾ. ನಾನು ಸತ್ತ ದಿನವೇ ಅವಳೂ ಸತ್ತಾಳು !

ಮಗಳ ಬಗೆಗೆ ಮರುಕ ಮೂಡಿತು. ಅಂತಃಕರಣ ಮಂಜಿನಂತೆ ಕರಗಿ ಕಂಬನಿಯಾಗಿ ಸುರಿಯಿತು. ಕೆಂಡಗಳನ್ನು ಒಲೆಯೊಳಕ್ಕೆ ದೂಡಿ

ಅಲ್ಲಿಂದ ಎದ್ದು ಹೋಗಿ ಗೋಡೆಯ ಬಳಿಯಿದ್ದ ಜೀರ್ಣಿತ ಹಾಸಿಗೆಯಲ್ಲಿ ಕಂಬಳಿಯನ್ನೆಳೆದು ಮೈ ಮುದುಡಿ ಮಲಗಿಕೊಂಡಳು.

ರಾಧಾ ಒಲೆಗೆ ಜಗ್ಗು ಒಟ್ಟುತ್ತಲೇ ಕಂಬನಿಯನ್ನು ತೀಡಿಕೊಂಡಳು. ಎಣೆಯಿಲ್ಲದೆ ಚಿಂತಿಸಿತು ಮನಸ್ಸು. ಮಾದೇನಹಳ್ಳಿಯ ವೀರಭದ್ರಸ್ವಾಮಿಗೆ ಹರಕೆಯನ್ನು ಹೊತ್ತು ತಾಯಿಯನ್ನು ಉಳಿಸೆಂದು ಬೇಡಿಕೊಂಡಳು.

ಬೆಂಕಿ ಧಗಧಗ ಉರಿಯುತ್ತಲೂ ಒಲೆಯ ಮೇಲಿನ ಅನ್ನ ಕೊತ ಕೊತ ಕುದಿಯಿತು. ಹೂಗೆಂಡದ ಮೇಲೆ ಹಾಲು ಕೆನೆ ಕಟ್ಟುತಿತ್ತು. ಕಾರಕ್ಕೆ ಮಸಾಲೆ ಅರಿಸುತ್ತ ರಾಧಾ ಕೇಳಿದಳು "ಬಿಸಿ ಬಿಸಿ ಕಾಫಿ ಕುಡಿಯುತ್ತೀರಾ ?"

"ನಮ್ಮ ಪ್ರಾರಬ್ಧ ಕರ್ಮಕ್ಕೆ ಯಾವುದು ಹಿಡಿದೀತು ?" ದನಿದುಃಖ ಮಿಶ್ರಿತವಾಗಿತ್ತು. ಒಂದು ಗಳಿಗೆ ಸುಮ್ಮನಿದ್ದು ಶೀರ್ಣಿತ ಮುಖದಿಂದ "ಕಾಫಿಗಿಂತ ಬಿಸಿನೀರಾದರೆ ಒಳ್ಳೆಯದು. ದಾಹ ಕಾಫಿಯಿಂದ ಆರುವುದಿಲ್ಲ."

ರಾಧಾ ಬಿಸಿನೀರು ಕಾಯಿಸಿಕೊಟ್ಟು ಒಲೆಯ ಬಳಿ ಮುಚ್ಚಿಟ್ಟ ಅನ್ನವನ್ನು ಬಸಿಹಾಕಿ ತರಕಾರಿ ಹೆಚ್ಚಲು ಕುಳಿತಳು. ಗಂಗಮ್ಮ ನೀರನ್ನು ಕುಡಿದು ಮುದುಡಿ ಮಲಗಿದಳು. ಕಣ್ಣ ನೋಟಕ್ಕೆ ಮೂಲೆಯಲ್ಲಿದ್ದ ಮರದ ಪೆಟ್ಟಿಗೆ ಬಿತ್ತು. ಮುದ್ದಣ್ಣ ಬಿಟ್ಟು ಹೋದ ಸಾವಿರ ರೂಪಾಯಿ ಅದರಲ್ಲಿತ್ತು. ಅದರೊಂದಿಗೆ ತನ್ನ ಉಳಿತಾಯವನ್ನೂ ಭದ್ರಪಡಿಸಿದ್ದ ಶಾಂತಪ್ಪ. ರಾಧೆಯ ಒಂದೆರಡು ಸೀರೆಗಳೂ ಶಾಂತಪ್ಪನ ಕೆಂಪು ಅಂಗವಸ್ತ್ರವೂ ಅದರ ಮೇಲೆ ಆತು ಮಲಗಿ ಕಾವಲಾಗಿದ್ದವು. ಅದರ ಬೀಗದ ಕೈ ಶಾಂತಪ್ಪನ ಕೊರಳಲ್ಲಿ ಜನಿವಾರದೋಪಾದಿಯಲ್ಲಿ ನೇತಾಡುತಿತ್ತು.

"ರಾಧಾ....!"

"ಏನಮ್ಮಾ ?"

"ಒಂದು ದಿನವೂ ಪೆಟ್ಟಿಗೆ ತೆರೆಯಲಿಲ್ಲ. ಒಳಗಿನ ಬಟ್ಟೆಗಳೆಲ್ಲಾ ಮುಗ್ಗಿದುವೋ ಏನೋ. ಶಾಂತಪ್ಪ ಇದ್ದರೆ ತೆಗೆದು ಬಿಸಿಲಿಗೆ ಹಾಕು."

"ಕೀಲಿಯ ಕೈ ಅವರು ಕೊಡಬೇಕಲ್ಲ ?"

"ಮನೆಗೆ ಬಂದಾಗ ಬಟ್ಟೆಗಳನ್ನು ತೆಗೆದು ಕೊಡಲಿಕ್ಕೆ ಹೇಳು."

"ಉಡುವುದಾದರೆ ಸರಿ..." ಮಾತು ಅರ್ಧಕ್ಕೆ ತುಂಡುಗಡಿಯಿತು.

"ಅಲ್ಲೀ ಕುಂಬಾಗುತ್ತವೆ ರಾಧಾ."

"ಅವರು ಬರಲಿ, ಕೇಳಿ ನೋಡುವೆ."

ಹಾಗೆಂದರೂ ಅವನು ಕೇಳಿದ ತಕ್ಷಣ ತೆಗೆದು ಕೊಡುವವನಲ್ಲ. ಬೀಗದ ಕೈಯನ್ನು ತಾನು ಮುಟ್ಟುವಂತಿಲ್ಲ. ಕೇಳಿದರೂ ಪ್ರಸನ್ನ ಪೂರ್ಣನಾಗಿ ತೆಗೆದು ಕೊಡುವ ತನಕ ಕಾಯಬೇಕು. ಅಯ್ಯೋ, ಶಿವನೇ ! ಅದು ಯಾರಿಗೆ ಬೇಕು ?

"ಕೈಗೆ ಒಂದು ನಿಮಿಷವೂ ಬಿಡುವಿಲ್ಲ. ಇದೇ ಸಾಕಾಗಿಬಿಟ್ಟಿದೆ. ಸೀರೆ ಗತಿ ಏನಾದರೂ ಆಗಲಿ." ಎನ್ನುತ್ತಲೇ ಭಾರವಾದ ಹೆಜ್ಜೆಗಳನ್ನಿಳಿದು ಕೊಂಡು ಮುಸುರೆ ಪಾತ್ರೆಯೊಡನೆ ಹೊರಹೋದಳು ರಾಧಾ. ನೂರು ನೂರು ಚಿಂತೆಗಳ ಕಿರುಕುಳ ಮನವನ್ನು ಕೀಟದಂತೆ ಕೊರೆಯುತಿತ್ತು. ಸೋತು ಬಳಲಿದ ಜೀವ ಮಾಡಲಾರೆನೆಂದು ಚೀರಿಟ್ಟರೂ ಮುಗಿಯದ ಕೆಲಸ. ಪಾತ್ರೆಯುಜ್ಜುತ್ತಲೇ ಯೋಚಿಸಿದಳು ರಾಧೆ....ಊರೊಳಗೆ ತೇರು ಜಾತ್ರೆಗಳಾದರೆ ಪೆಟ್ಟಿಗೆ ತೆರೆಯುವ ಸಂದರ್ಭ ಬೀಳುವುದುಂಟು. ಹಾಗೆ ಮದುವೆ ಜಾತ್ರೆಗಳಾದಾಗಲೆಲ್ಲಾ ಕಾಯಿಲೆಯೋ ಕಸಾಲೆಯೋ ಆಗಿದ್ದರೆ ಅಥವಾ ಬಸುರಿಯೋ ಬಾಣಂತಿಯೋ ಆಗಿದ್ದರೆ ಉಡುವುದೆಲ್ಲಿ ?

ಕಣ್ಣುಗಳಂಚಿನಲ್ಲಿ ತುಂಬಿ ತುಳುಕುತಿದ್ದ ಕಂಬನಿ ಉಜ್ಜುತಿದ್ದ ಪಾತ್ರೆಯ ಮೇಲೆ ತಟಪಟ ಉದುರಿತು. ಮುಸುಗಿಟ್ಟು ಮಲಗಿದ ಗಂಗಮ್ಮನ ಮನಸ್ಸೂ ಅದೇ ಚಿಂತನೆಯಲ್ಲಿ ಮುಳುಗಿತು....ಮುದ್ದಣ್ಣ ಸಾವಿರ ರೂಪಾಯಿ ಬಿಟ್ಟು ಹೋಗಿದ್ದರೂ ಅದರಲ್ಲಿ ಐದು ರೂಪಾಯಿ ಈಚೆಗೆ ಕೊಟ್ಟು ನಿಮಗೆ ಬೇಕಾದ್ದು ಮಾಡಿರಿ ಎನ್ನಲಿಲ್ಲ ಶಾಂತಪ್ಪ. ರಾಧಾ ಒಬ್ಬಳೇ ಮಗಳಾಗಿದ್ದರೂ ಅವಳನ್ನು ಒಂದಿನವೂ ಸುಖವಾಗಿಡು ವುದಕ್ಕಾಗಲಿಲ್ಲ. ನಮ್ಮದು ಏನು ಕರ್ಮವೊ ! ಏನು ಪಾಡೋ !

ದಿನಗಳುರುಳಿದಂತೆ ಗಂಗಮ್ಮನ ರೋಗವು ಪ್ರಬಲವಾಗುತ್ತಲೇ ಹೋಯಿತು. ಒಲೆಯ ಬಳಿ ನರಳುತ್ತಾ ಕುಳಿತಿದ್ದ ಗಂಗಮ್ಮ ಇಲಿ ಅಲ್ಲಲ್ಲೇ ಓಡಾಡಿದುದನ್ನು ಕಂಡು ಹುಡುಗರನ್ನು ಕರೆದಳು.

"ಸುಬ್ಬೂ ! ರಾಮೂ !"

ಯಾರೂ ಓಗೂಡಲಿಲ್ಲ.

"ರಾಧೀ...ರಾಧೀ !"

ಹಿತ್ತಿಲಲ್ಲಿ ಬಟ್ಟೆಯೊಗೆಯುತಿದ್ದ ರಾಧಾಳ ಕಿವಿಗೆ ಕ್ಷೀಣಿತ ದನಿ ಬೀಳಲಿಲ್ಲವೇನೋ. ಅವಳು ಓಗೊಡದೆ ಬಟ್ಟೆಯೊಗೆಯುತ್ತಲೇ ಇದ್ದಂತೆ ಪುನಃ ಗಂಗಮ್ಮನ ದನಿ ಹೊರಬಿತ್ತು "ರಾಧೀ !"

ರಾಧೆಯ ದನಿ ಮಾರ್ನುಡಿಯಿತು "ಇದಿಷ್ಟು ಮುಗಿಸಿ ಬರುವೆ."

"ಅದಿರಲಿ, ಈಗಿಷ್ಟು ಬಂದು ಹೋಗು ರಾಧೀ !"

ಈಗ ತಾಯಿಗೇನಾದರೂ ದಣಿವಾಗಿದೆಯೋ ಅಥವಾ ದಾಹವಾಗಿದೆಯೋ ಎನ್ನಿಸಿ ಕುತೂಹಲ ಕೆರಳಿತು. ಬಟ್ಟೆಯನ್ನು ಅಷ್ಟಕ್ಕೆ ಬಿಟ್ಟು ಒಳಬಂದಳು ರಾಧ. ನೋಡಿದರೆ ಗಂಗಮ್ಮ ಪೆಟ್ಟಿಗೆಯನ್ನು ಮಧ್ಯಕ್ಕೆಳೆದುಕೊಂಡು ಬೆಕ್ಕಸ ಬೆರಗಾಗಿ ನೋಡುತಿದ್ದಾಳೆ.

"ಏನಮ್ಮಾ ?"

"ರಾಧೀ ! ಪೆಟ್ಟಿಗೆಯನ್ನು ಇಲಿ ಕೊರೆದಂತಿದೆ !"

"ನಿಜವಾಗಿ ?"

"ಬೆಳಕಿಗೆಳೆದು ನೋಡು."

"ದೇವರೇ ಗತಿ !" ಎನ್ನುತ್ತಲೇ ವ್ಯೈಬಾಗಿ ಸುತ್ತಮುತ್ತ ನೋಡಿದಳು ರಾಧಾ. ಒಳಗಡೆ ಪ್ರಶಸ್ತವಾದ ಬೆಳಕಿರಲಿಲ್ಲವಾದುದರಿಂದ ಏನೂ ಕಾಣಿಸಲಿಲ್ಲ. ಪೆಟ್ಟಿಗೆಯನ್ನು ಕೈಯಿಂದ ತಡವಿ ನೋಡುವಾಗ ಗದ್ದೆಯ ಕೆಲಸ ಮುಗಿಸಿ ಶಾಂತಪ್ಪ ಒಳಗಡೆ ಬಂದ. ಬದಿಯಲ್ಲಿದ್ದ ಪೆಟ್ಟಿಗೆ ಮಧ್ಯದಲ್ಲಿದ್ದುದನ್ನು ನೋಡುತ್ತಲೂ ತಾಯಿ ಮಗಳು ಕೂಡಿ ಮಸಲತ್ತು ಹೂಡಿದ್ದಾರೆ ಎಂದುಕೊಂಡ. ಕಿಚ್ಚು ಕೆರಳಿತು. ಏರಿದ ದನಿಯಲ್ಲಿ ಚೀರಿದ "ಏನಿದು ?...." ಸಿಟ್ಟಿನ ಭರದಲ್ಲಿ ಮಾತು ಅಷ್ಟಕ್ಕೇ ತುಂಡುಗಡಿಯಿತು.

"ಇಲಿ ಓಡಾಡಿ..." ಮುಂದೆ ಮಾತಾಡಗೊಡದಂತೆ ಶಾಂತಪ್ಪ ನಡುವೆ ಬಾಯಿ ಹಾಕಿದ "ನಾನಿಲ್ಲದಾಗ ಪೆಟ್ಟಿಗೆ ತೆಗೆದದ್ದೇಕೆ ?" ಮಾಡು ಮುಟ್ಟುವಂತೆ ಮೊಳಗಿತು ದನಿ.

"ಅಯ್ಯೋ, ತೆರೆಯಲಿಲ್ಲ, ಬೀಗದ ಕೈ ನಿಮ್ಮಲ್ಲೇ ಉಂಟಲ್ಲ?" ನುಡಿದಳು ರಾಧಾ.

ಶಾಂತಪ್ಪ ಮೈ ಬಾಗಿ ಪೆಟ್ಟಿಗೆಯನ್ನು ತೆರೆದಿದ್ದಾರೋ ಇಲ್ಲವೋ ಎಂಬುದನ್ನು ಖಚಿತಪಡಿಸಿಕೊಳ್ಳಲು ಬೀಗವನ್ನೆಳೆದು ನೋಡಿದ. ಅದು ಹಾಗೇ ಭದ್ರವಾಗಿತ್ತು. ಅವನು ನೋಡುತಿದ್ದಂತೆಯೋ ಗಂಗಮ್ಮನ ನರಳು ದನಿ ಹೊರಬಿತ್ತು "ಮೂಲೆಯಲ್ಲಿ ಇಲಿ ಬಿಲ ಮಾಡಿಕೊಂಡಿದೆ. ಪೆಟ್ಟಿಗೆಯನ್ನು ತೆರೆದು ನೋಡಿ."

ಅಯ್ಯೋ, ಏನು ಗತಿಯೋ ?

ಮೈಯಲ್ಲಿ ಸಣ್ಣ ಚಳಿ ಹುಟ್ಟಿತು. ಒಂದೇ ಉಸಿರಿಗೆ ಕೈಕಾಲು ತೊಳೆದು ಸೀಮೆಎಣ್ಣೆಯ ದೀಪ ಹಚ್ಚಿ ಪೆಟ್ಟಿಗೆ ಸುತ್ತು ಮುತ್ತೂ ಹಿಡಿದು ನೋಡಿದರೆ ಅದರ ಮೂಲೆಯಲ್ಲೊಂದು ಸಣ್ಣ ತೂತು !

"ಅಯ್ಯೊ, ಶಿವನೆ !" ಎನ್ನುತ ತಲೆ ಚಚ್ಚಿಕೊಂಡ ಶಾಂತಪ್ಪ. ಕತ್ತಿನಲ್ಲಿದ್ದ ಬೀಗದ ಕೈಯನ್ನು ಕಳಚಿ ಪೆಟ್ಟಿಗೆಯನ್ನು ತೆರೆದು ನೋಡಿದರೆ ಮೂಷಕ ರಾಜ ತನ್ನ ಕರ್ತವ್ಯವನ್ನು ಕಿಂಚಿತ್ತೂ ಲೋಪವಿಲ್ಲದಂತೆ ನಡೆಸಿದ್ದ !

ನೋಟುಗಳನ್ನೊಂದನ್ನೂ ಬಿಡದೆ ಮರಿಗಳಿಗೆ ಮೆತ್ತೆಗೈದು ಅಂಗಿ ಸೀರೆಗಳನ್ನು ಕಚ್ಚಿ ಚಕ್ಕಂದವಾಡಿತ್ತು. ನೋಡಿದೊಡನೆಯೇ ಶಾಂತಪ್ಪ ಕುಸಿದು ಕುಳಿತ. ತಾಯಿ ಮಗಳು ಕೊರಳು ಕಟ್ಟಿಕೊಂಡು ಅತ್ತರು. ಶಾಂತಪ್ಪ ಹುಚ್ಚುಚ್ಚಾದ. ಮನೆಯಲ್ಲಿದ್ದು ನೋಡಿಕೊಳ್ಳಲಿಲ್ಲವೆಂಬ ರೊಚ್ಚು ಮೂಡಿತು. ತಾಯಿ ಮಗಳು ಅತ್ತು ಗೋಳಿಟ್ಟರೂ ಬಿಡದೆ ರಾಧೆಯನ್ನೆಳೆದುಕೊಂಡು ಹಿಗ್ಗಾಮುಗ್ಗ ಬಡಿದ ಬಿಡಿಸಿಕೊಳ್ಳಲು ಮುಂದಾದ ಗಂಗಮ್ಮನಿಗೂ ಒಂದೆರಡು ಬಿದ್ದುವು. ಅವು ಕೈ ತಪ್ಪಿದುವೋ ಕೈ ಮುಂದಾದುವೊ ದೇವರಿಗೇ ಗೊತ್ತು. ನೆತ್ತಿಯ ಮೇಲೆ ಸುಡು ಬಿಸಿಲು ಬೇಯುತಿದ್ದರೂ ದಿಕ್ಕೆಟ್ಟವನಂತೆ ಹೊರಗಡೆ ಹೊರಟೇಹೋದ.

ತಾಯಿ ಮಗಳು ಅತ್ತು ಬಳಲಿದ ಮೇಲೆ ಇಲಿ ಕಡಿದ ಸೀರೆಗಳನ್ನು ಕೊಡವಿ ಹಗ್ಗದ ಮೇಲೆ ಹಾಕಿದಳು ರಾಧಾ. ಜಾಲರಿಯಂತೆ ತೂತು

ತೂತಾದ ಅವು ಗಾಳಿಯಲ್ಲಿ ತೂರಾಡುತ್ತಾ, ಅಣಕಿಸುವ ರೀತಿಯಲ್ಲಿ ಮಿಣ ಮಿಣನೆ ಹೊಳೆದುವು.

"ನಿನಗೆಷ್ಟೋ ಬಾರಿ ಬಿಸಿಲಿಗೆ ಹಾಕು ಎಂದೆ. ನೀನು ಮನಸ್ಸಿಗೆ ಹಾಕಿಕೊಳ್ಳಲಿಲ್ಲ ರಾಧೀ. ಉಡದಿದ್ದರೆ ಹೋಗಲಿ, ಆಗಾಗ ಕೊಡವಿ ಬಿಸಿಲಿಗೆ ಹಾಕಿದ್ದರೆ ಹೀಗಾಗುತ್ತಿರಲಿಲ್ಲ. ನೀನಾಯಿತು, ನಿನ್ನ ಕೆಲಸ ವಾಯಿತು."

ಗಂಗಮ್ಮ ಮುಸುಮುಸು ಅತ್ತಳು. ಪ್ರತಿಯಾಗಿ ರಾಧೆಗೂ ದುಃಖವುಮ್ಮಳಿಸಿ ಬಂತು.

o o o o

ಗಂಗಮ್ಮ ಇಹಲೋಕದ ಯಾತ್ರೆಯನ್ನು ಮುಗಿಸಿದಾಗ ಮಳೆ ಹೊಳೆಗಳ ತಾಪತ್ರಯಗಳಿಲ್ಲದಿದ್ದರೂ ಅವಳ ಕೊನೆಯಾಸೆಯಂತೆ ಮುದ್ದಣ್ಣನ ಸಮಾಧಿಯ ಬಳಿ ಚಿತೆಯನ್ನೇರ್ಪಡಿಸುವಷ್ಟು ವ್ಯವಧಾನ ಯಾರಿಗೂ ಇರಲಿಲ್ಲ. ರಾಧೆ ತಾಯಿಯ ಆಸೆಯನ್ನು ಹೇಳಿ ಕೇಳಿಕೊಂಡರೂ ಯಾರೂ ಕಿವಿಗೊಡಲಿಲ್ಲ. ರಾಧಾ ಕಂಬನಿಯ ಕಾಣಿಕೆಯನ್ನರ್ಪಿಸಿ ತಾಯಿ ಯನ್ನು ಬೀಳ್ಕೊಟ್ಟಳು. ಸಂಗನೂರಿನ ಮಸಣದಲ್ಲಿ ಅವಳ ಪಾರ್ಥಿವ ಶರೀರಕ್ಕೆ ಕಿಚ್ಚು ಹಚ್ಚಿದರು ಜನ. ರಾಧೆಯ ಅಂತರ್ವಾಣಿ ಒಂದೇ ಸಮನೆ ಚೀರಹತ್ತಿತು....ಅಪ್ಪ ಅಮ್ಮ ದಿಕ್ಕಾಪಾಲಾದರು.

ರಾಧಾ ತನ್ನ ನೆರೆಗೂದಲನ್ನು ಬಾಚಿ ಮುಡಿಗಟ್ಟುವಾಗ ತಾಯಿಯ ಯೋಚನೆ ಬಂದು ಕಣ್ಣು ತೇವಗೊಳ್ಳುತಿತ್ತು. ಉಣ್ಣುವಾಗ ತಿನ್ನುವಾಗ ಒಬ್ಬಳೇ ಕುಳಿತಾಗ ಅದೇ ಪಾಡು. ಅಮ್ಮ ಇಲ್ಲಿರುವಾಗ ಒಂದು ದಿನವೂ ನನ್ನನ್ನು ಬಿಟ್ಟು ಇರುತ್ತಿರಲಿಲ್ಲ. ಪಾಪ! ಈಗ ಎಲ್ಲಿದ್ದಾರೋ ಸಗ್ಗದ ಹಾದಿಯಲ್ಲಿ ಅಪ್ಪ ಸಿಕ್ಕಿದ್ದರೋ ಹೇಗೋ? ಸಿಕ್ಕದಿದ್ದರೆ ಅಮ್ಮ ಎಷ್ಟು ಗೋಳಾಡಿರಕ್ಕಿಲ್ಲ?

ರಾಧೆಯ ಪ್ರತಿನಿಧಿಯಾಗಿ ಸೊಸೆ ಗೃಹಪ್ರವೇಶ ಮಾಡಿ ಮಕ್ಕಳನ್ನು ಹೆತ್ತಳು. ಶಾಂತಪ್ಪ ವಯೋಧರ್ಮಕ್ಕೆ ಶರಣಾಗಿ ದಿನೇ ದಿನೇ ಮುಪ್ಪಿನ ದಾರಿ ಅಡರಹತ್ತಿದ.

ಸಂಜೆಗಪ್ಪು ಬಳಿ ಸಾರಿ ಬಂದ ಮೇಲೆ ಸಂಗನೂರಿಗೆ ಶಂಕರ ಬಂದ.

ಅದೇ ಅಂಕುಡೊಂಕು ದಾರಿಯಲ್ಲಿ ಅವನ ಪಯಣ ಸಾಗಿಬಂದಿತ್ತು. ತಾಯಿ ಬಳಗದವನೆಂದು ರಾಧಾ ಅತ್ಯಂತ ಆದರದಿಂದ ಬರಮಾಡಿ ಕೊಂಡಳು. ಅವನ ಬಳಿ ತನ್ನ ಕಷ್ಟಕಾರ್ಪಣ್ಯಗಳನ್ನು ತೋಡಿಕೊಂಡರೂ ಆ ಮುಹೂರ್ತ ಸುಖದಾಯಕವಾಗಿತ್ತು. ದಿನವೆಲ್ಲಾ ಸ್ವರ್ಗವಾಸಿ ಗಳಾದ ತಂದೆ ತಾಯಿಯರನ್ನೇ ಕುರಿತು ಮಾತಾಡಿದಳು ರಾಧೆ. ಕೊನೆ ಯಲ್ಲಿ "ನನಗೆ ಅಪ್ಪ ಅಮ್ಮ ಅಣ್ಣ ತಂಗಿ ಯಾರೂ ಇಲ್ಲ. ನೀನಾದರೂ ಬಂದು ಹೋಗುತ್ತಿರು" ಎಂದು ಕೇಳಿಕೊಳ್ಳುತ್ತ ಕಂಬನಿ ಮಿಡಿದಳು ರಾಧೆ. ಕಣ್ಣು ಮೂಗು ಮುಖಗಳು ಕೆಂಪಗೆ ಕೆಂಪು ತಳೆದುವು.

"ಅತ್ತೆ ಮಾವ ಇದೇ ಭೂಮಿಯಲ್ಲಿ ತಮ್ಮ ಜೀವಮಾನ ಕಳೆ ದರು. ಇನ್ನು ನೀನಾದರೂ ಊರು ಗಡಿ ದಾಟುವಂತೆ ಮಾಡು."

"ಹೋಗಲಿ ಬಿಡು. ನಾವು ಪಡೆದುಕೊಂಡು ಬಂದುದೇ ಅಷ್ಟು."

"ಈಗ ಸೊಸೆ ಬಂದಿದ್ದಾಳೆ. ನಿಶ್ಚಿಂತೆಯಿಂದ ಹೊರಡು."

ಅದು ನಿಜ... ಸೊಸೆಯೂ ಬಂದಿದ್ದಾಳೆ. ಮಕ್ಕಳೂ ದೊಡ್ಡವರಾಗಿ ದ್ದಾರೆ. ಆದರೆ ಶಾಂತಪ್ಪ ಊರುಗೋಲಿನ ಸಹಾಯದಿಂದ ಓಡಾಡುತ್ತಿದ್ದ. ಕಣ್ಣುಗಳೂ ಮಂಜುಮಂಜಾಗತೊಡಗಿದ್ದುವು. ಎದೆಯ ಗೂಡು ಕೆಮ್ಮು ದಮ್ಮಿನ ಬೀಡಾಗಿತ್ತು. ಹಗಲೆಲ್ಲ ಬಾರಿಬಾರಿಗೂ ತನ್ನ ಸಹಾಯಕ್ಕೆ ಮಡದಿಯನ್ನು ಕರೆಯುತಿದ್ದ.

ಒಂದು ಗಳಿಗೆ ಯೋಚಿಸಿದಳು ರಾಧಾ. ಇರಬಹುದಾದ ತೊಂದರೆ ಗಳೆಲ್ಲಾ ತಲೆಯಲ್ಲಿ ಸುಳಿದಳಿದುವು. ಮುಖಮುದ್ರೆ ಖಿನ್ನವಾಗಿತ್ತು.

"ಮತ್ತೇಕೆ ಯೋಚನೆ ?"

"ನನಗೆ ಆಸೆ ಇದ್ದಾಗ ಯಾರೂ ಕರೆದೊಯ್ಯಲಿಲ್ಲ. ಆಗಾಗಿದ್ದರೆ ಕುಣಿಕುಣಿಯುತ್ತಾ ಹೊರಡುತಿದ್ದೆನೇನೋ. ಈಗ ಮೈ ಮನಸ್ಸು ಎರಡೂ ಮುದಿಯಾಯಿತು. ಸಾಯುವತನಕ ಅಪ್ಪ ಮಾದೇನಹಳ್ಳಿಗೆ ರೈಲು ಬರುತ್ತದೆ ಎನ್ನುತ್ತಲೇ ಇದ್ದರು. ಅಮ್ಮ ಅದನ್ನು ಕಣ್ತುಂಬ ನೋಡುವ ಆಸೆ ಇಟ್ಟುಕೊಂಡಿದ್ದರು. ನನ್ನದೂ ಹಾಗೇ ಆಯಿತು ; ಬಿಡು."

"ಓ !. ಅಂದ ಹಾಗೆ, ಇಲಿ ಕಚ್ಚಿತು ಅಂತ ಚಿಂದಿ ನೋಟನ್ನು

ಸುಟ್ಟು ಹಾಕಿದಿರಂತಲ್ಲಾ, ಅವನ್ನೆಲ್ಲಾ ರಾಜ್ಯದ ಬ್ಯಾಂಕಿಗೆ ಕೊಟ್ಟಿದ್ದರೆ ಒಳ್ಳೆಯ ನೋಟು ಕೊಡುತ್ತಿದ್ದರು ಗೊತ್ತೆ? ಎಂತಹ ಅನ್ಯಾಯ ಮಾಡಿಕೊಂಡಿರಿ ?"

"ಅದ್ಹೇಗೆ ಸಾಧ್ಯ ಶಂಕರೂ ? ಅವೆಲ್ಲಾ ಅವಲಕ್ಕಿಯಂತೆ ಸಣ್ಣ ಚೂರಾಗಿದ್ದುವು. ಉಣ್ಣಲಿಲ್ಲ, ಉಡಲಿಲ್ಲ, ಅಗ್ನಿಗೆ ಅರ್ಪಿಸಿದ್ದಾಯಿತು. ಎದೆಯಾಳದಲ್ಲಿ ಸಂತಾಪದ ಉಸಿರು ಹರಿದಾಡಿತು.

"ನನಗೊಂದು ಕಾಗದ ಬರೆಯಬಾರದಿತ್ತೆ ?"

"ನನಗಿದೆಲ್ಲಾ ಏನು ಗೊತ್ತು ಶಂಕರೂ ? ಓದಲಿಲ್ಲ ಕಲಿಯಲಿಲ್ಲ." ಒಣಗಿದ ತುಟಿಯನ್ನು ನಾಲಿಗೆಯಿಂದ ಒರಸಿಕೊಳ್ಳುತ್ತ ಪುನಃ ನುಡಿದಳು ರಾಧಾ "ಆದುದು ಆಗಿಹೋಯಿತು. ಹಾಗೆಂದು ಈ ವಿಷಯ ಅವರ ಮುಂದೆ ಎತ್ತಬೇಡ ಶಂಕರೂ. ತಿಳಿದರೆ ಎದೆಯೊಡೆದು ಸತ್ತಾರು."

ಶಂಕರ ಈ ವಿಷಯವನ್ನು ಅಲ್ಲಿಗೆ ಕೈಬಿಟ್ಟ. ರಾಧಾ ಮನದಲ್ಲೇ ಕೊರಗಿದಳು. ಎದೆಯ ಹಕ್ಕಿ ಒಂದೇ ಸಮನೆ ಚೀರಿತು....ಎಂತಹ ಅನ್ಯಾಯ ! ಬೀಸಿ ಬಂದ ತಂಗಾಳಿಯೂ ಮರ್ಮರಿಸಿತು....ಎಂತಹ ಅನ್ಯಾಯ !

ಶಂಕರ ನಸುನಕ್ಕ "ಕೂದಲು ನೆರೆಯಿತು. ಅಜ್ಜಿಯಾದ್ರೂ ಇನ್ನೂ ಬರುವುದರೊಳಗಿದ್ದಿ."

"ಏನು ಮಾಡುವುದು ಹೇಳು ? ಹೆಣ್ಣಾಗಿ ಹುಟ್ಟುವುದೇ ಪಾಡು ಪಡುವುದಕ್ಕೆ."

ಸ್ವಲ್ಪ ಹೊತ್ತು ಮೌನವಾವರಿಸಿತು. ನೆರೆಮನೆಯಜ್ಜಿಯ ನುಡಿ ಕಿವಿಯಲ್ಲಿ ಮಾರ್ನುಡಿಯಿತು "ತಪ್ಪು ಮಾಡಿದವರೆಲ್ಲಾ ಹೆಣ್ಣಾಗಿ ಹುಟ್ಟುತ್ತಾರೆ !"

ಶಾಂತಪ್ಪ ಹೊರಗಿನಿಂದ ಬಂದವನೇ ಅಂದ "ಅವಳಿಲ್ಲದಿದ್ದರೆ ಈ ಮನೆಯಲ್ಲಿ ಒಂದು ಗಳಿಗೆ ಕಳೆಯುವಂತಿಲ್ಲ. ಇನ್ನು ನಾಲ್ಕು ದಿನ ಹೋದರೆ ಹೇಗೆ ? ಈ ಸುದ್ದಿ ಸದ್ಯಕ್ಕೆ ಎತ್ತಬೇಡ ಶಂಕರೂ. ಮೋಜು ಗೀಜೆಲ್ಲಾ ನಮ್ಮಂತಹವರಿಗ್ಯಾಕೆ ?"

ಶಂಕರ ಮಾತಾಡಲಿಲ್ಲ, ಶಾಂತಪ್ಪ ಮುಂದುವರಿದ "ನನಗೀಗ

ಕಣ್ಣು ಕಾಣಿಸುವುದೇ ಇಲ್ಲ. ಕೈಯಾಸರೆ ಕೊಡುವವರಿಲ್ಲದಿದ್ದರೆ ಆಗು ವುದಿಲ್ಲ ಶಂಕರೂ."

ಬಾಗಿಲ ಬಳಿ ನಿಂತು ಇವರ ಮಾತುಕತೆಗಳನ್ನು ಅತ್ಯಾಸಕ್ತಿಯಿಂದ ಆಲೈಸುತಿದ್ದ ಸೊಸೆಯ ಮುಖ ಮುದುಡಿತು ಅತ್ತೆ. ಹೊರಟರೆ ನಾನೂ ಹೋಗಬಹುದು ಎಂಬ ಆಸೆಯು ಕತ್ತರಿಸಿದ ಕೊನೆಯಂತೆ ಕೊನರಿತ್ತು. ಅಂತಿಮ ತೀರ್ಮಾನವನ್ನರಿತೊಡನೆ ಮೆಲ್ಲನೆ ಒಳಸರಿದಳು. ಹೆಜ್ಜೆ ಭಾರ ವಾಗಿತ್ತು. ಎದೆಯು ಹಕ್ಕಿ ಎಣೆಯಿಲ್ಲದೆ ಚೀರಿತು....ಅಯ್ಯೊ, ನಮ್ಮ ಜೀವನವೇ !

ಸದ್ದಿಲ್ಲದ ಶಾಂತಿಯಲ್ಲಿ ಕೋಗಿಲೆಯ ಇನಿಗಾನ ಹರಿದುಬಂತು. ಕುಹೂೂೂ !

ಆದರೆ, ಅದು ಯಾರಿಗೆ ಬೇಕಾಗಿದೆ ?

ಶಂಕರ ಮಧ್ಯಾಹ್ನದ ನಂತರ ಅಚ್ಚನಹಳ್ಳಿಗೆ ಹಿಂತಿರುಗಿದ. ತಮ್ಮ ಜಮೀನಿನ ತುತ್ತತುದಿಯವರೆಗೂ ಹೋಗಿ ಬೀಳ್ಕೊಟ್ಟು ಬಂದಳು ರಾಧಾ. ಕಣ್ಣುಗಳಂಚಿನಲ್ಲಿ ಹನಿಗಳು ಫಳಫಳ ಮಿಂಚಿದುವು. ದುಂಡು ಮಲ್ಲಿಗೆಯ ಬಳ್ಳಿಯಲ್ಲಿ ಮೊಸರು ಚೆಲ್ಲಿದಂತೆ ಹೂವುಗಳರಳಿ ಧವಳ ಕಾಂತಿ ಯನ್ನು ಚೆಲ್ಲಿ ಮನಮೋಹಕವಾಗಿತ್ತು...ಘಮ...ಘಮ....ಘಮ.... ಘಮ.

ಮೈಸೂರಿಗೆ ಹೋದ ಶಂಕರ ಮರಳಿ ಬಾರದ ಹಾದಿಯನ್ನಿಡರಿದ. ಅವನು ಇಲ್ಲವಾದ ಸುದ್ದಿ ಬಹು ದಿನಗಳ ಮೇಲೆ ತಿಳಿದು ರಾಧೆ ಬಹು ವಾಗಿ ಅತ್ತಳು...ಅವನಿದ್ದಾಗೊಮ್ಮೆ ಮೈಸೂರಿಗೆ ಹೋಗಬೇಕೆಂಬ ಮನಸಿತ್ತು. ನನಗಿನ್ನೇಕೆ ಮೈಸೂರು ?

ತಂಗಾಳಿಯಲ್ಲಿ ಅಲೆಅಲೆಯಾಗಿ ತೇಲಿಹೋಯಿತು ಹೆಂಗರುಳಿನ ಬಸುಸುಯ್ಲು.

o o o o

"ಅಜ್ಜೀ ! ಅಜ್ಜೀ !" ಒಂದೇ ಉಸುರಿಗೆ ಕೂಗುತ್ತಾ ಓಡಿಬಂದರು ಮಕ್ಕಳು.

"ಏನ್ರೋ ಅದು ?" ಹಾಸಿಗೆಯಿಂದಲೇ ಕೇಳಿದಳು ರಾಧಾ.

"ನಮ್ಮೂರಿಗೆ ರೈಲು ಬರ್ತದಂತಜ್ಜೀ !"

"ಥೂ ! ಅದರ ಮನೆ ಹಾಳಾಗ !"

"ಯಾಕಜ್ಜೀ ? ನಮ್ಮೂರಿಗೆ ರೈಲು ಬೇಡ್ವಾ ?"

"ಯಾರು ಹೇಳಿದರೋ ನಿಮಗೆ ?"

"ಭಾರಿ ಜನ ಬಂದಿದ್ದಾರೆ! ರೈಲು ಹಾದಿಗೆ ಜಾಗ ನೋಡ್ತಾರಂತಜ್ಜೀ !"

"ಅದು ಬರುವುದು ಇನ್ನೊಂದು ಜನ್ಮಕ್ಕೆ !"

"ಇಲ್ಲ. ಈ ಸಲವೇ ಬರ್ತದಂತೆ !"

ವಿಷಯ ಬೇಡವಾಗಿತ್ತು. ಮಕ್ಕಳ ಉತ್ಸಾಹಕ್ಕೆ ತಿಲಾಂಜಲಿಯನ್ನೀಯಲಾರದೆ ಸುಮ್ಮನಾದಳು ರಾಧಾ.

"ನಿಜವಾಗಿಯೂ ಅಜ್ಜೀ ! ಭಾರಿ ಜನ ಬಂದಿದ್ದಾರೆ !"

ರಾಧಾ ಅತ್ತ ತಿರುಗಿ ಮಲಗಿದಳು. ಮತ್ತೆ ಮಾತಾಡಲಿಲ್ಲ.

ಮಂಗಳಂ

# ಮಲ್ಲಿಕಾ ಕೃತಿಗಳು

(ಕವಿತಾ ಸಂಕಲನ)

೩೦) ವಿಜಯ ಗಾಥಾ
೩೧) ಗಾನ ತೀರ್ಥ
೩೨) ನಾದ ಬಿಂದು
೩೩) ಕಾವ್ಯಾನಂದ ನಂದಿನಿ
೩೪) ಭಾವಾನಂದ ನಂದಿನಿ
೩೫) ಸಂಗೀತ ಪುಷ್ಪಾಂಜಲಿ
೩೬) ಆತ್ಮ ಗೀತಾಂಜಲಿ

(ಸಂಜೀವನ ಕಾವ್ಯ)

೩೭) ಮಂಗಳ ಭಾರತಿ
೩೮) ಕಲ್ಯಾಣ ಭಾರತಿ
೩೯) ಉತ್ತರೋತ್ತರಣಿ
೪೦) ರಾಗಾನುರಾಗಿಣಿ
೪೧) ಪ್ರಫುಲ್ಲ ಭಾರತ

(ಪೌರಾಣಿಕ ನಾಟಕ)

೪೨) ಪುಣ್ಯಪಯೋನಿಧಿ
೪೩) ಪುಣ್ಯಾಭಿಸಾರ

(ಸಾನೆಟ್‌ಗಳು)

೪೪) ತರಂಗಿಣಿ

(ಗದ್ಯ ಕಾವ್ಯ)

೪೫) ಐಂದ್ರ ಕೀರ್ತಿ ಕೇತನಂ

(ಉಪನಿಷತ್ಕಥಾ)

೪೬) ಕೃತಂ ಸ್ಮರ ಕ್ರತುಂ ಸ್ಮರ

(ಶಿಶು ಸಾಹಿತ್ಯ)

೪೭) ದೂರ ದೇಶದಲ್ಲಿ
೪೮) ಬೆಳದಿಂಗಳ ರಾತ್ರಿ
೪೯) ರಂಗನ ಸಾಹಸ
೫೦) ಓಹಿಯೋಜ ಸರೋವರ
೫೧) ಕೌಶಿಕನ ಗೊಂಬೆ
೫೨) ವಿಶೇಷ ಸುದ್ದಿ
೫೩) ಕಲ್ಯಾಣಿ ರಾಗಿಣಿ

---

ಲಕ್ಷ್ಮೀ ಪ್ರಕಾಶನ

ನಂ. 359, 14ನೇ ಅಡ್ಡ ರಸ್ತೆ, ಸದಾಶಿವನಗರ, ಬೆಂಗಳೂರು–560 080